ಸೇಡಿಯಾಪು ಕೃಷ್ಣಭಟ್ಟ ಶತಮಾನ ವಿಶೇಷಾಂಕ

# ಕರ್ನಾಟಕ ಲೋಚನ

ಸಂಪುಟ ೧೫, ೧೬ ಸಂಚಿಕೆ ೨,೩ ಡಿಸೆಂಬರ್ ೨೦೦೧, ಜೂನ್ ೨೦೦೨



ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ

## 'ಕರ್ನಾಟಕ ಲೋಚನ'



**ಲೇಖನಗಳು - ಟಿಪ್ಪಣಿಗಳು**

ಸಂಶೋಧನಾತ್ಮಕ, ಪಾಂಡಿತ್ಯ-ವಿದ್ವತ್ಪೂರ್ಣ ಲೇಖನಗಳು ಹಾಗೂ ಹೊಸದಾಗಿ ಪ್ರಕಟವಾಗುವ ಉತ್ತಮ ಮಟ್ಟದ ಸಂಪಾದಿತ ಗ್ರಂಥಗಳು ಮತ್ತು ಶಾಸ್ತ್ರ ಸಾಹಿತ್ಯದ ಗ್ರಂಥಗಳು - ಇವುಗಳ ಮೇಲಣ ವಿಮರ್ಶೆಗಳು ವಿದ್ವದ್ವಿಚಾರ ಮತ್ತು ವಿದ್ವತ್ ಪ್ರಪಂಚದ ವಿದ್ಯಾಮಾನ, ಇವುಗಳಿಗೆ ಸಂಬಂಧಿಸಿದ ಟೀಕೆ-ಟಿಪ್ಪಣಿಗಳು- ಇವುಗಳಿಗೆ 'ಕರ್ನಾಟಕ ಲೋಚನ' ಮೀಸಲಾಗಿದೆ.

ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಜವಾಬುದಾರರು; ಅವು ಅವಶ್ಯವಾಗಿ ಪ್ರತಿಷ್ಠಾನದ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಎಂದು ತಿಳಿಯತಕ್ಕದ್ದಲ್ಲ.

**ಲೇಖನಗಳಿಗೆ ಆಹ್ವಾನ**

ಮೇಲ್ಕಂಡ ವಾಕ್ಯವೃಂದದಲ್ಲಿ ವ್ಯಕ್ತಪಟ್ಟಿರುವ ಆಶಯಕ್ಕೆ ಅನುಗುಣವಾಗಿ ಲೇಖನಗಳನ್ನು ವಿದ್ವಾಂಸರೂ ಭಾಷೆ ಸಾಹಿತ್ಯಗಳ ಪ್ರೌಢ ವಿದ್ಯಾರ್ಥಿಗಳೂ ಕಳಿಸಿಕೊಡಬೇಕೆಂದು ವಿನಂತಿ. ಲೋಚನದ ಗಾತ್ರ ಪರಿಮಿತವಾದ್ದರಿಂದ ಲೇಖನಗಳು ಅಚ್ಚಿನ ೬-೮ ಪುಟಗಳ ಪರಿಮಿತಯಲ್ಲಿ ಇದ್ದರೆ ಅನುಕೂಲ. ಲೇಖನಗಳು ಹಾಳೆಯ ಒಂದೇ ಪಕ್ಕದಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಅಡಿ ಟಿಪ್ಪಣಿಗಳನ್ನು ಪುಟದ ಅಡಿಯಲ್ಲಿಯೇ ಕಾಣಿಸುವುದು ಒಳಿತು. ಗ್ರಂಥ -ಲೇಖನಾಧಾರ ವಿವರಗಳನ್ನು (Bibliography) ಲೇಖನದ ಕಡೆಯಲ್ಲಿ ಕೊಡಬಹುದು. ಲೇಖನವನ್ನು ಹಿಂದಿರುಗಿಸಲಾಗದ್ದರಿಂದ ಲೇಖಕರು ತಮ್ಮ ಲೇಖನದ ಒಂದು ಪ್ರತಿಯನ್ನು ಉಳಿಸಿಕೊಂಡಿರಬೇಕಾಗಿ ವಿನಂತಿ.

# ಸೇಡಿಯಾಪು ಕೃಷ್ಣಭಟ್ಟ
# ಶತಮಾನ ವಿಶೇಷಾಂಕ

ಸಿದ್ಧವಾಗಿರುವ ಬಿ.ಎಂ.ಶ್ರೀ ಕಲಾಭವನದ ನೆಲಮಹಡಿ



## "ಬಿ.ಎಂ.ಶ್ರೀ.ಕಲಾಭವನ" ನಿರ್ಮಾಣಕ್ಕೆ ಸಹಾಯ ಮಾಡಿ

ಬಿ.ಎಂ.ಶ್ರೀ. ಕಲಾಭವನದ ನಿರ್ಮಾಣ ವೆಚ್ಚ ನಲವತ್ತು ಲಕ್ಷ ರೂ.ಗಳಾಗಬಹುದೆಂದು ಅಂದಾಜು ಮಾಡಲಾಗಿದೆ. ಮುಖಪುಟದಲ್ಲಿರುವುದು ಉದ್ದೇಶಿತ ಭವನದ ಚಿತ್ರ. ಸಾಹಿತ್ಯ ಪ್ರೇಮಿಗಳು, ಸಾಹಿತ್ಯಾಸಕ್ತರು, ಸಾಂಸ್ಕೃತಿಕ ಶ್ರೇಯೋಭಿಲಾಷಿಗಳಿಂದ ಉದಾರವಾದ ಧನಸಹಾಯವನ್ನು ಕೋರುತ್ತೇವೆ. ಒಂದು ಇಡಿ ಅಂತಸ್ತು ಅಥವಾ ಒಂದು ಕೊಠಡಿ ನಿರ್ಮಾಣದ ವೆಚ್ಚ ಭರಿಸುವವರನ್ನು ನಿರೀಕ್ಷಿಸುತ್ತೇವೆ. ಆದರೂ ಅಭಿಮಾನಿಗಳು ನೀಡುವ ಯಾವುದೇ ಸ್ವಲ್ಪದಾನವನ್ನು ಸಹ ಪ್ರತಿಷ್ಠಾನವು ಸಂತೋಷದಿಂದ ಮತ್ತು ಕೃತಜ್ಞತೆಯಿಂದ ಸ್ವೀಕರಿಸುತ್ತದೆ. ಈ ಮೂಲಕ ನಾಡಿನ ಒಂದು ಭವ್ಯ ಸಾಂಸ್ಕೃತಿಕ ಪರಂಪರೆ (ಸಂರಕ್ಷಣೆ, ಬೆಳೆವಣಿಗೆ, ಪ್ರಸಾರ)ಯಲ್ಲಿ ಪಾಲುದಾರರಾಗಲು ಮನವಿ ಮಾಡಿಕೊಳ್ಳುತ್ತೇವೆ.

ಸದ್ಯಕ್ಕೆ ನೆಲಮಹಡಿ ಸಿದ್ಧವಾಗಿದ್ದು, ಸಭಾಂಗಣದ ನಿರ್ಮಾಣಕಾರ್ಯ ಆರಂಭವಾಗಬೇಕಾಗಿದೆ. ದಾನಿಗಳು ಪ್ರತಿಷ್ಠಾನಕ್ಕೆ ನೀಡುವ ದಾನಕ್ಕೆ ಸೆಕ್ಷನ್ ೮೦ ಜಿ. **ಆದಾಯ ತೆರಿಗೆ ಆಕ್ಟ್ ೧೯೬೧ ಪ್ರಕಾರ, ಪತ್ರ ಸಂಖ್ಯೆ : ಟ್ರಸ್ಟ್/೭೧೮/೧೦/ ೯೭-೯೮/ಸಿಐಟಿಉಉ ದಿನಾಂಕ ೧೨-೨-೯೮ರ ಮೂಲಕ 80ಜಿ ಕ್ಕನುಗುಣವಾಗಿ ವಿನಾಯಿತಿಯ ಸೌಲಭ್ಯವಿದೆ.**

ಚೆಕ್ಕು ಅಥವಾ ಡಿ.ಡಿ.ಗಳನ್ನು 'ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ' ದ ಹೆಸರಿನಲ್ಲಿ ಬರೆದು, ಗೌ|| ಕಾರ್ಯದರ್ಶಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬಿ.ಎಂ.ಶ್ರೀ. ಕಲಾಭವನ, ನರಸಿಂಹರಾಜಾ ಕಾಲೋನಿ, ಬೆಂಗಳೂರು-೫೬೦ ೦೧೯, ಇಲ್ಲಿರುವ ಪ್ರತಿಷ್ಠಾನದ ಕಾರ್ಯಾಲಯಕ್ಕೆ ಕಳಿಸಿಕೊಡಲು ಸಾರ್ವಜನಿಕರಲ್ಲಿ ಮನವಿ ಮಾಡಿಕೊಳ್ಳುತ್ತೇವೆ.

**ಡಾ|| ಟಿ.ವಿ. ವೆಂಕಟಾಚಲ ಶಾಸ್ತ್ರೀ**
*ಪ್ರತಿಷ್ಠಾನದ ಅಧ್ಯಕ್ಷರು*

**ನಿಟ್ಟೂರು ಶ್ರೀನಿವಾಸರಾವ್**
*ಸಂಪನ್ಮೂಲಸಮಿತಿ ಅಧ್ಯಕ್ಷರು*

# ಕರ್ನಾಟಕ ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ,** ಬಿ.ಎಂ.ಶ್ರೀ ಕಲಾಭವನ

ಎನ್. ಆರ್. ಕಾಲೋನಿ, ಬೆಂಗಳೂರು-೫೬೦ ೦೧೯

ದೂರವಾಣಿ : ೬೬೧೫೪೮೭೭ ಇಮೇಲ್ : bmsri/trust@yahoo.com

ವೆಬ್‌ಸೈಟ್: http://in.members.tripodasia.com/bmsri/




---


ಸಂಪುಟ ೧೫-೧೬ ಡಿಸೆಂಬರ್ ೨೦೦೧ ಜೂನ್ ೨೦೦೨ ಸಂಚಿಕೆ ೨, ೩


---

## ಸೇಡಿಯಾಪು ಕೃಷ್ಣಭಟ್ಟ ಶತಮಾನ ವಿಶೇಷಾಂಕ

## ಪರಿವಿಡಿ

**KARNATAKA LOCHANA**

*Half-Yearly Research Journal, Published by*

**B. M. Sri Smaraka Prathisthana**

**(B. M. Sri Memorial Foundation) N. R. Colony, Bangalore-560 019**

Ph. : 6615877 e-mail : bmsri/trust@yahoo.com

website : http//in.members.tripodasia.com/bmsri/



**Vol.15-16** **DEC 2001 JUNE 2002** **No. 2, 3**

**SEDIYAPU KRISHNA BHATT CENTINARY SPECIAL**

**CONTENTS**

## ನೂತನ ಅಧ್ಯಕ್ಷರಾಗಿ ಡಾ|| ಟಿ.ವಿ. ವೆಂಕಟಾಚಲಶಾಸ್ತ್ರೀ



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ನೂತನ ಅಧ್ಯಕ್ಷರಾಗಿ ಆಯ್ಕೆಗೊಂಡಿರುವ ಖ್ಯಾತ ವಿದ್ವಾಂಸ ಡಾ|| ಟಿ.ವಿ. ವೆಂಕಟಾಚಲ ಶಾಸ್ತ್ರೀ ಅವರನ್ನು ಕರ್ನಾಟಕಲೋಚನದ ಸದಸ್ಯವರ್ಗ, ಸಂಪಾದಕ ಮಂಡಳಿ ಹೃತ್ಪೂರ್ವಕವಾಗಿ ಅಭಿನಂದಿಸುತ್ತದೆ. ಶುಭಾಶಯ ಕೋರುತ್ತದೆ.

ಕನ್ನಡಭಾಷೆ, ವ್ಯಾಕರಣ, ಛಂದಸ್ಸು, ಗ್ರಂಥಸಂಪಾದನೆ, ಸಂಶೋಧನೆ, ನಿಘಂಟು, ಸಾಹಿತ್ಯಚರಿತ್ರೆ, ಇತ್ಯಾದಿ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ೬೦ಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿ, ನೂರಾರು ಮೌಲ್ಯಾಧಾರಿತ ವಿದ್ವತ್‌ಪೂರ್ಣ ಲೇಖನಗಳನ್ನು ರಚಿಸಿರುವ, ನಾಡಿನ ಶ್ರೇಷ್ಠ ವಿದ್ವಾಂಸರುಗಳಲ್ಲಿ ಒಬ್ಬರಾಗಿರುವ ಡಾ|| ಟಿ.ವಿ. ವೆಂಕಟಾಚಲಶಾಸ್ತ್ರಿಯವರು ಶೈಕ್ಷಣಿಕ, ಸಾಮಾಜಿಕ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ವಿಶೇಷ ಮನ್ನಣೆಗೆ ಪಾತ್ರರಾಗಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ, ರಾಜ್ಯ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿ, ಐ.ಬಿ.ಎಚ್. ಶಿಕ್ಷಣ ಪ್ರಶಸ್ತಿ, ಸೇಡಿಯಾಪು ಪ್ರಶಸ್ತಿ, ಚಿದಾನಂದ ಪ್ರಶಸ್ತಿ, ಮೈಸೂರು ವಿಶ್ವವಿದ್ಯಾಲಯದ ಸುವರ್ಣ ಮಹೋತ್ಸವ ಪ್ರಶಸ್ತಿ ಮುಂತಾದ ಹಲವು ಪ್ರಶಸ್ತಿ ಪುರಸ್ಕಾರಗಳಿಗೆ ಭಾಜನರಾಗಿದ್ದಾರೆ. ಹಲವು ವರ್ಷ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಸಾಹಿತ್ಯ ಚರಿತ್ರೆಯ ಸಂಪಾದಕರಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಸಂಪಾದಕ ಮಂಡಳಿಯ ಸದಸ್ಯರಾಗಿ, ಪ್ರಧಾನಸಂಪಾದಕರಾಗಿ ಸೇವೆ ಸಲ್ಲಿಸಿದ ಗೌರವಕ್ಕೆ ಪಾತ್ರರಾಗಿದ್ದಾರೆ. ಇಂತಹ ವಿದ್ವಾಂಸರು ಪ್ರತಿಷ್ಠಿತ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ೫ನೇ ಅಧ್ಯಕ್ಷರಾಗಿ ದಿನಾಂಕ ೬-೧೦-೨೦೦೧ ರಂದು ಹಿಂದಿನ ಅಧ್ಯಕ್ಷ ಶ್ರೀ ಎನ್ ಬಸವಾರಾಧ್ಯ ಅವರಿಂದ ಅಧಿಕಾರ ಸ್ವೀಕರಿಸಿದರು. ಇವರ ಸಮರ್ಥ ನೇತೃತ್ವದಲ್ಲಿ ಪ್ರತಿಷ್ಠಾನ ಹಾಗೂ ಕರ್ನಾಟಕಲೋಚನ ಮತ್ತಷ್ಟು ಪ್ರವರ್ಧಮಾನಕ್ಕೆ ಬಂದು ಹೆಚ್ಚಿನ ಯಶಸ್ಸುಗಳಿಸುವಂತಾಗಲಿ ಎಂದು ಆಶಿಸುತ್ತೇವೆ.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾಗಿ ಒಂಬತ್ತು ವರ್ಷಗಳಷ್ಟು ದೀರ್ಘಕಾಲ ನಿಸ್ಪೃಹ ಸೇವೆ ಸಲ್ಲಿಸಿ ಇದರ ಸರ್ವತೋಮುಖ ಅಭಿವೃದ್ಧಿಗೆ ಕಾರಣರಾಗಿದ್ದ ಶ್ರೀ ಎನ್. ಬಸವಾರಾಧ್ಯ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ಕನ್ನಡ- ಕನ್ನಡ ನಿಘಂಟು ಸಮಿತಿಯ ಪ್ರಧಾನ ಸಂಪಾದಕರಾಗಿ / ಅಧ್ಯಕ್ಷರಾಗಿ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ. ಗಣ್ಯ ಗ್ರಂಥಸಂಪಾದಕರಾಗಿ, ಸಂಶೋಧಕರಾಗಿ, ಸಾರಸ್ವತ ಲೋಕಕ್ಕೆ ಶ್ರೀಮಂತ ಕೊಡುಗೆಗಳನ್ನು ನೀಡಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪುರಸ್ಕಾರ, ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿ ಗಳಿಸಿರುವ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಇವರ ಅನನ್ಯ ಸೇವೆಯನ್ನು ಅಭಿಮಾನ ಪೂರ್ವಕವಾಗಿ ಸ್ಮರಿಸುತ್ತಾ ಕರ್ನಾಟಕಲೋಚನ ಸಂಪಾದಕ ಮಂಡಳಿಯ ತನ್ನ ಎಲ್ಲ ಸದಸ್ಯರುಗಳ ಪರವಾಗಿ ಗೌರವಪೂರ್ವಕವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತದೆ, ವಂದಿಸುತ್ತದೆ.

ಸಂಪಾದಕರು

# ಸಮಸ್ಯಾಪೂರಣ

ವಿದ್ವತ್ಪತ್ರಿಕೆಯಾಗಿರುವ ಈ ಕರ್ನಾಟಕಲೋಚನದಲ್ಲಿ ಸಂಪುಟ ೬, ಸಂಚಿಕೆ ೧ ಜೂನ್ ೧೯೯೩ ಮೊದಲ್ಗೊಂಡು ಸಮಸ್ಯಾಪೂರಣ ಎಂಬ ಅಂಕಣವನ್ನು ಪ್ರಾರಂಭಿಸಲಾಗಿದೆ. ಇದು ಕನ್ನಡಕ್ಕೆ ಅತಿಶಯ ಲಕ್ಷಣವೆನಿಸುವ ಪ್ರಾಸ-ಪಾದ-ಛಂದೋಬದ್ಧ ಪದ್ಯ ಕವಿತಾ ರಚನೆಗೆ ಸಜೀವತೆಯನ್ನು ನೀಡುವ ಉದ್ದೇಶವುಳ್ಳದ್ದು. ಪ್ರತಿ ಸಂಚಿಕೆಯಲ್ಲಿಯೂ ಅದರ ಮುಂದಿನ ಸಂಚಿಕೆಗಾಗಿ ಸಮಸ್ಯಾಪದದ ಒಂದು ಪಾಠವನ್ನು ಕೊಡಲಾಗುತ್ತದೆ. ಒಬ್ಬೊಬ್ಬರಿಂದ ಒಂದೊಂದು ಪದ್ಯ ಮಾತ್ರ ಸ್ವೀಕಾರಾರ್ಹ.

ಸಮಸ್ಯೆ : ಕಿವಿಗಂ ಸುಧೆ ಸುರಿವ ಕವಿಯೆ ಮಾಕವಿಯಲ್ತೇ ?

ಸಮಸ್ಯಾಪೂರಣ :

೧. ಇತರರ ಕವಿತೆಗಳೆರವಲು
ಪದಜೋಡಣೆಮಾಡಿ ಬರೆವವಂ ಸಹ ಕವಿಯೇ ?
ಕೊಲ್ಲಲ್ ಬಂದಾ ಶತ್ರುವ
ಕಿವಿಗಂ ಸುಧೆ ಸುರಿವ ಕವಿಯೆ ಮಾಕವಿಯಲ್ತೇ ?

ಗರ್ಗೇಶ್ವರಿ ವೆಂಕಟಸುಬ್ಬಯ್ಯ

೨. ಕವನಂ ನವರಸ ಪರಿಮಳದಿಂದಿರುತಿರ್ದುಂ।
ಸವಿಯಲ್ ಗಮಕದ ಗತಿಗಳಿಗೊಪ್ಪುವ ಛಂದೋ।
ಸುವಿಲಾಸದಲಿ ರಚಿಸುತಲೆ ಪಾಡುತಲೆಲ್ಲಾ!
ಕಿವಿಗಂ ಸುಧೆ ಸುರಿವ ಕವಿಯೆ ಮಾಕವಿಯಲ್ತೇ ?

- ಎಂ.ಆರ್. ಅನಂತರಾಮಯ್ಯ

೩. ನವ ಸೃಜನ ಭಾವ ಸಂಯುತ
ನವರಸ ಸಮ್ಮಿಳಿತ ಭವ್ಯಕಾವ್ಯದಿ ಮನಕಂ
ವಿವಿಧ ಲಯಯುಕ್ತ ನಾದದಿ
ಕಿವಿಗಂ ಸುಧೆ ಸುರಿವ ಕವಿಯೆ ಮಾಕವಿಯಲ್ತೇ ?

ವಿದ್ವಾನ್ ತಲೆಂಗಳ ರಾಮಕೃಷ್ಣ ಭಟ್ಟ

೪. ನವರಸದಿಂ ಸುಲಲಿತಮಧು
ರ ವಚೋರಮಣಿ ನೀತಿಯ ನೀತಿಕಥನಾನುಗಮೊ
ಪ್ಪುವ ಭಾವಬಂಧುರತೆಯಿಂ
ಕಿವಿಗಂ ಸುಧೆ ಸುರಿವ ಕವಿಯೆ ಮಾಕವಿಯಲ್ತೇ ?

- ಟಿ. ಕೇಶವಭಟ್ಟ

೫. ಕವಿಯನೆ ಕೇಳುವರಿಲ್ಲದಿ
ರುವಾಗಕಾವ್ಯವಸವಿವರುಯಾರು ಆದರೆ ಹಾ-
ಡುವ ಗಮಕಿ ಗಾಯಕರೆನ್ನಿ
ಸುವವರೆ ಕಿವಿಗಂ ಸುಧೆ ಸುರಿವ ಕವಿಯೆ ಮಾಕವಿಯಲ್ತೇ ?

- ನಾ. ಗೀತಾಚಾರ್ಯ

ಮುಂದಿನ ಸಂಚಿಕೆಯ ಸಮಸ್ಯಾವಾಕ್ಯ

ಮಾವು ಬೆಸಲೆಯಾಯ್ತು ಕಱಿವನೀಂತುದು ಮಗಳೇ ॥

ಟಿ. ವಿ. ವೆಂಕಟಾಚಲ ಶಾಸ್ತ್ರಿ

# ಸೇಡಿಯಾಪು ಕೃಷ್ಣಭಟ್ಟ



## ಜೀವನ ಪಥ

ಜನನ : ೮-೬-೧೯೦೨ ಪುತ್ತೂರು ಸಮೀಪದ ಸೇಡಿಯಾಪುವಿನಲ್ಲಿ. ವಿದ್ಯಾಭ್ಯಾಸ : ಪುತ್ತೂರು ಮತ್ತು ಮಂಗಳೂರು ನಗರಗಳಲ್ಲಿ . ಅಧ್ಯಾಪಕ ವೃತ್ತಿ ಪ್ರಾರಂಭ ೧೯೨೧ರಲ್ಲಿ. ೧೯೨೮ರಲ್ಲಿ ಮದ್ರಾಸು ವಿಶ್ವವಿದ್ಯಾಲಯದಿಂದ ವಿದ್ವಾನ್ ಪದವಿ. ಮಂಗಳೂರಿನ ಎಲೋಸಿಯಸ್ ಹೈಸ್ಕೂಲ್ ಮತ್ತು ಕಾಲೇಜಿನಲ್ಲಿ ಅಧ್ಯಾಪಕ / ಉಪನ್ಯಾಸಕರ ವೃತ್ತಿ (೧೯೨೯-೧೯೫೭). ಅನಾರೋಗ್ಯ ನಿಮಿತ್ತ ೧೯೫೭ರಲ್ಲಿ ನಿವೃತ್ತಿ. 'ಚಂದ್ರ ಖಂಡ ಮತ್ತು ಕೆಲವು ಸಣ್ಣ ಕಾವ್ಯಗಳು' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (೧೯೭೧). ದ.ಕ. ಜಿಲ್ಲಾ ದ್ವಿತೀಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನ (೧೯೮೫). ಮಣಿಪಾಲ ಅಕಾಡೆಮಿಯ ಆಫ್ ಜನರಲ್ ಎಜುಕೇಷನ್ ಫೆಲೋಶಿಪ್ (೧೯೮೫). ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಗೌರವ ಪ್ರಶಸ್ತಿ (೧೯೯೦), 'ಛಂದೋಗತಿ'ಗೇ ೧೯೮೯-೯೦ ಸಾಲಿನ 'ವರ್ಧಮಾನ ಪ್ರಶಸ್ತಿ' (೧೯೯೧) 'ಚಿದಾನಂದ ಪ್ರಶಸ್ತಿ' (೧೯೯೪). ಕನ್ನಡ ರಾಜ್ಯೋತ್ಸವ ಪ್ರಶಸ್ತಿ (೧೯೯೪)

ನಿಧನ : ೮-೬-೧೯೯೬

**ಪ್ರಶಸ್ತಿ / ಪುರಸ್ಕಾರ ಪಡೆದ ಇತರ ಕೃತಿಗಳು**

'ಪಳಮೆಗಳು' , 'ಕನ್ನಡ ವರ್ಣಗಳು' (ಮದರಾಸು ಸರ್ಕಾರದ ಪುರಸ್ಕಾರ), 'ಕೆಲವು ದೇಶ ನಾಮಗಳು' (ಮೈಸೂರು ವಿಶ್ವವಿದ್ಯಾನಲಯದ ಸ್ವರ್ಣೋತ್ಸವ ಬಹುಮಾನ), 'ಛಂದೋಗತಿ' (ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ), 'ವಿಚಾರ ಪ್ರಪಂಚ' (೧೯೯೪ನೇ ಸಾಲಿನ ಪ್ರತಿಷ್ಠಿತ ಪಂಪ ಪ್ರಶಸ್ತಿ - ಮರಣೋತ್ತರ)

ಇತರ ಕೃತಿಗಳು - ತರುಣ ಧಮನಿ, ಶ್ವಮೇಧ, ಕೃಷ್ಣಕುಮಾರಿ, ಶಬರಿ, ಪಂಚಮೀ ವಿಭಕ್ತಿ, ಕೆಲವು ಸಣ್ಣ ಕಾವ್ಯಗಳು, ಕನ್ನಡ ನಿಘಂಟು, ತಥ್ಯ ದರ್ಶನ, ಪತ್ರಾವಳಿ, ವಿಚಾರ ಪ್ರಪಂಚ, ಕನ್ನಡ ವರ್ಣಗಳು, ಗಮಕ ಸಮಾಸ ಮುಂತಾದವು.

# ಪಂಡಿತಶ್ರೇಷ್ಠ ಶ್ರೀ ಸೇಡಿಯಾಪು ಕೃಷ್ಣಭಟ್ಟರು

*ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ*

ಕವಿ, ಕಥೆಗಾರ ಹಾಗೂ ವಿದ್ವಾಂಸರೆಂದು ಖ್ಯಾತರಾಗಿರುವ ಪೂಜ್ಯ ಸೇಡಿಯಾಪು ಕೃಷ್ಣಭಟ್ಟರ ಹೆಸರು ನನಗೆ ಪರಿಚಯವಾದುದು, ನಾನು ಮೈಸೂರಿನಲ್ಲಿ ಕನ್ನಡ ಎಂ.ಎ. ಪದವಿಗೆ ವ್ಯಾಸಂಗ ಮಾಡುತ್ತಿದ್ದ ವರ್ಷದಲ್ಲಿ, 1953 ರಲ್ಲಿ. ಆಗ್ಗೆ ನಮಗೆ ಕನ್ನಡ ಛಂದಸ್ಸಿನ ಪಾಠ ಹೇಳುತ್ತಿದ್ದ ಅಧ್ಯಾಪಕರು ಸೇಡಿಯಾಪು ಅವರು ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟಿಸಿದ್ದ 'ಕನ್ನಡ ಛಂದಸ್ಸು' ಎಂಬ ಬರಹವನ್ನು ಓದುವ ಹಾಗೆ ಮೊದಲ ತರಗತಿಯಲ್ಲೇ ಶಿಫಾರಸು ಮಾಡಿದರೆನ್ನುವುದು ನನ್ನ ನೆನಪು. ಈ ಬರಹ 'ಕನ್ನಡ ಕೈಪಿಡಿ' ಯೊಳಗಿನ ಛಂದಸ್ಸಿನ ಭಾಗ ಇಷ್ಟು ಹೊರತು ಛಂದಸ್ಸಿನ ವಿಚಾರದಲ್ಲಿ ಯಾವ ಗಣ್ಯವಾದ ಬರೆವಣಿಗೆಯೂ ಆಗ್ಗೆ ಪ್ರಕಟವಾಗಿರಲಿಲ್ಲ. ಕನ್ನಡ ಛಂದಸ್ಸನ್ನು ಕುರಿತ ಸೇಡಿಯಾಪು ಅವರ ಬರಹದ ಮಹತ್ವ ಐತಿಹಾಸಿಕವಾಗಿ ಮಾತ್ರವಲ್ಲ, ವಸ್ತು ವಿಮರ್ಶೆಯ ದೃಷ್ಟಿಯಿಂದಲೂ ಉಲ್ಲೇಖನಾರ್ಹವಾದುದು. ಇದು ಈಗಾಗಲೇ ತಿಳಿದಿರುವ ವಿಚಾರ. ವಿದ್ಯಾರ್ಥಿಗಳಾಗಿದ್ದ ನಾವು ಆ ಹೊತ್ತಿಗೆ ಅವರ ಪ್ರಬುದ್ಧ ಕರ್ಣಾಟಕದೊಳಗಿನ 'ಪಂಚಮೀ ವಿಭಕ್ತಿ' ಕುರಿತ ಲೇಖನವನ್ನೂ ಅಭ್ಯಾಸ ಮಾಡಿದ್ದೆವು. ಈ ಲೇಖನವನ್ನೋದಿ ಅಗ ಮಾಡಿಕೊಂಡ ಟಿಪ್ಪಣಿಗಳು ಈಗಲೂ ನನ್ನಲ್ಲಿ ಉಳಿದಿವೆ.

ಸೇಡಿಯಾಪು ಅವರ ಪ್ರತ್ಯೇಕ ಪರಿಚಯದ ಯೋಗ ನನಗೆ ದೊರೆತುದು, ನಾನು ಹೈದರಾಬಾದು ಉಸ್ಮಾನಿಯ ವಿಶ್ವವಿದ್ಯಾಲಯದ ಸೇವೆಯನ್ನು ಬಿಟ್ಟು ಮೈಸೂರು ವಿಶ್ವ ವಿದ್ಯಾನಿಲಯದ ಸೇವೆಗೆ ಬಂದು ಸೇರಿದ ಆರಂಭದ ದಿನಗಳಲ್ಲಿ. ಅದಾದರೂ ಇಲ್ಲಿಗೆ 22 ವರ್ಷಗಳ ಹಿಂದೆ. ಆಗ ತಾನೆ ಅವರ ಕವಿತೆಗಳ ಸಂಯುಕ್ತ ಸಂಪುಟ ಹೊರಬಂದಿತ್ತು. ಆಗ ಮೈಸೂರಿನಲ್ಲಿ ನೆಲಸಿದ್ದ ಅವರ ಪರಿಚಯವನ್ನು ನನ್ನ ಒಬ್ಬ ಸೋದರ ಸಂಬಂಧಿಗಳ ಮೂಲಕ ನಾನು ಪಡೆದುಕೊಂಡೆ. ಅವರೊಂದಿಗೆ ಸಾಹಿತ್ಯ ಸಲ್ಲಾಪ ನಡಸುವ ಅವಕಾಶ ಸಿಕ್ಕಿತು; ಅವರ ಕಾವ್ಯವಾಚನ ಕೇಳುವ ಸುಯೋಗವೂ ಲಭಿಸಿತು. ಅಂದು ಅವರು ನನಗೆ ಪ್ರೀತಿಯಿಂದ ಹರಸಿಕೊಟ್ಟ ಆ ಕವಿತೆಗಳ ಸಂಕಲನವನ್ನು ಮುಂದೆ ನನ್ನ ಛಂದಸ್ಸಿನ ಅಧ್ಯಯನದಲ್ಲಿ ಒಂದು ಲಕ್ಷ್ಯಗ್ರಂಥವಾಗಿ ಯಥೋಚಿತವಾಗಿ ಬಳಸಿಕೊಂಡೆ. ಅವರ ಸ್ನೇಹಧರ್ಮ, ವಿದ್ವತ್ತೆ, ಕಿರಿಯರ ವಿಷಯದಲ್ಲಿಯ ಪ್ರೀತಿ ವಿಶ್ವಾಸಗಳು ಹೀಗೆ ನನಗೆ ಮನವರಿಕೆಯಾದವು. ಈಚೆಗೆ ಸಹ, ಅವರ ಮಣಿಪಾಲದ ಮನೆಯಲ್ಲಿ ಅವರನ್ನು ಜಿ.ವೆಂಕಟಸುಬ್ಬಯ್ಯನವರೊಂದಿಗೆ ಕಂಡು ಮಾತನಾಡಿದಾಗ, ನಾವು ಪರಸ್ಪರವಾಗಿ ನಡೆಸಿದ ಶಬ್ದಾರ್ಥಗಳ ಚರ್ಚೆ ನನ್ನ ಮನಸ್ಸಿನಲ್ಲಿ ಇನ್ನೂ ಹಸಿರಾಗಿಯೇ ಇದೆ.

ಇದೀಗ ಸೇಡಿಯಾಪು ಅವರಿಗೆ 90 ತುಂಬುತ್ತಿರುವ ಈ ಶುಭ ಸಂದರ್ಭದಲ್ಲಿ ಅವರನ್ನು ಕಾಣುವ, ಅವರ ಬಗೆಗೆ ಏರ್ಪಾಡಾಗಿರುವ ಈ ಅಭಿನಂದನಾ ಸಮಾರಂಭದಲ್ಲಿ ನಾಲ್ಕು ಮಾತುಗಳನ್ನು ಆಡುವ ಅವಕಾಶ ದೊರೆತಿರುವುದಕ್ಕೆ ನನಗೆ ಬಹುವಾಗಿ ಸಂತೋಷವಾಗಿದೆ. ಇದಕ್ಕೆ ನೆರವಾದ ಮಿತ್ರರಾದ ಎಂ. ರಾಮಚಂದ್ರರಿಗೆ - ಇವರು ಸೇಡಿಯಾಪು ಅವರ ಶಿಷ್ಯೋತ್ತಮರು - ನಾನು ಕೃತಜ್ಞನಾಗಿದ್ದೇನೆ.

ಶಾಸ್ತ್ರಸಾಹಿತ್ಯಕ್ಕೆ ಸೇಡಿಯಾಪು ಅವರಿಂದ ಸಂದಿರುವ ಕೊಡುಗೆಯನ್ನು ಲಕ್ಷಿಸಿ ಇಲ್ಲಿ ಕೆಲವು ಮಾತುಗಳನ್ನಾಡುವುದು ನನ್ನ ಅಪೇಕ್ಷೆ. ಏಕೆಂದರೆ ಇದು ನನ್ನ ಅಧ್ಯಯನ ಕ್ಷೇತ್ರ. ಇಷ್ಟು ಮಾತ್ರವಲ್ಲ, ಅವರಿಗೆ ಇಷ್ಟವಾದ ಶಾಸ್ತ್ರಭಾಗಗಳಲ್ಲಿಯೇ ನಾನು ಸಹ ಕೃಷಿ ಮಾಡಿರುವುದರಿಂದ ನನಗೆ ಈ ಉತ್ಸಾಹ ಸಹಜವಾದುದು ಎಂದರೆ ತಾವು ಒಪ್ಪುತ್ತೀರಿ ಎಂದೇ ನನ್ನ ತಿಳಿವಳಿಕೆ. ಹೀಗಾಗಿ ಈ ಅವಕಾಶ ಲಭಿಸಿತೆಂದು ಸಡಗರಿಸಿ, ನಾನು ನನ್ನ ಬೇರೆ ಕೆಲಸಗಳನ್ನೆಲ್ಲಾ ಹಿಂದಿಟ್ಟು, ಈ 10-12 ದಿವಸಗಳು ಅವರ ಎಲ್ಲ ಶಾಸ್ತ್ರ ಕೃತಿಗಳನ್ನೂ ಕೆಲವು ಬಿಡಿಬರಹಗಳನ್ನೂ ಮತ್ತೆ ಓದಿದೆ. ಅರ್ಥ ಮಾಡಿಕೊಳ್ಳುತ್ತ ಸಾಲು ಸಾಲೂ ಓದಿದೆ; ಸಾವಧಾನವಾಗಿಯೇ ಓದಿದೆ. ಇದರಿಂದ ನನಗೆ ವೈಯಕ್ತಿಕವಾಗಿ ತುಂಬ ಪ್ರಯೋಜನವಾಯಿತು. ನನ್ನ ಸ್ವಂತ ಸಂಗ್ರಹದಲ್ಲಿಯೇ ಅವರ ಎಲ್ಲ ಪುಸ್ತಕಗಳನ್ನೂ ಕೈಗೆ ಎಟುಕುವಂತೆ ನಾನು ಇರಿಸಿಕೊಂಡಿದ್ದೆನಾದ್ದರಿಂದ, ಅವನ್ನು ದೊರಕಿಸಿಕೊಂಡು ಓದುವುದರಲ್ಲಿ ನನಗೆ ಕಷ್ಟವೇನೂ ಆಗಲಿಲ್ಲ ಎಂದು ನಾನಿಲ್ಲಿ ಹೇಳಬೇಕು. ಈ ಓದಿನಿಂದ ನನಗೆ ಸೇಡಿಯಾಪು ಅವರ ಮನಸ್ಸಿನ ಲಹರಿ ತಿಳಿಯಿತು. ಪಾಂಡಿತ್ಯದ ಆಳ ಆಗಲಗಳ ಪರಿಚಯ ಕೆಲಮಟ್ಟಿಗಾದರೂ ಆಯಿತು; ವಿಷಯಗಳ ಆಯ್ಕೆಯ ಒಲವರ ಗೊತ್ತಾಯಿತು; ಪ್ರತಿಭಾವಿಲಾಸದ ಸೊಂಪು ಹೇಗೆ ಒಳನೋಟಗಳನ್ನು ಹಾಯಿಸಬಲ್ಲದು ಎನ್ನುವುದರ ಸುಳಿವು ಸ್ವಲ್ಪ ಸಿಕ್ಕಿತು; ವಿಚಾರ ಕ್ರಮ ಎಷ್ಟು ತರ್ಕಬದ್ಧವಾಗಿ, ವಿಚಕ್ಷಣವಾಗಿ ಇರುವುದು ಶಕ್ಯ, ನಿರೂಪಣ ವಿಧಾನ ಎಷ್ಟು ಸಮರ್ಥವಾಗಿ, ಸೊಗಸಾಗಿ ಮೈದಳೆಯಬಹುದು ಎನ್ನುವುದು ಕೊಂಚ ಅರಿವಿಗೆ ಬಂದಂತಾಯಿತು; ಭಾಷೆ ಶೈಲಿಗಳ ಪಾರಿಶುದ್ಧ್ಯ ಪ್ರಯೋಗ ಪಟುತ್ವ, ವೈಕರಿ ವಿಜೃಂಭಣೆಗಳು ಕನ್ನಡವನ್ನು ಹೇಗೆ ಪುಷ್ಟಿಗೊಳಿಸಲು ಶಕ್ತವಾದವು - ಎಂಬುದನ್ನು ಅರ್ಥ ಮಾಡಿಕೊಳ್ಳುವಂತಾಯಿತು. ಇದಕ್ಕೆ ಅವರು 'ಕಾರಣ ಪುರುಷ' ರಾದರೂ ನಾನು ಅವರನ್ನಲ್ಲ - ನನ್ನನ್ನೇ ಅಭಿನಂದಿಸಿಕೊಳ್ಳುತ್ತೇನೆ. ದಯವಿಟ್ಟು ತಾವು ನಗಬಾರದು!

'ಕನ್ನಡ ವರ್ಣಗಳು' (1955) ಎಂಬುದರಲ್ಲಿ ದ್ರಾವಿಡ ಭಾಷೆಗಳ ಹಾಗೂ ಕೆಲವು ಕನ್ನಡ ಉಪಭಾಷೆಗಳು ತೌಲನಿಕ ವಿವೇಚನೆಯ ಹಿನ್ನಲೆಯಲ್ಲಿ ಭಾಷೆಯ ಸ್ವರ ವ್ಯಂಜನಗಳಲ್ಲಿಯ ಕೆಲವು ವರ್ಣಗಳ ಉಚ್ಚಾರಣೆ ಮತ್ತು ಲೇಖನ ಸ್ವರೂಪಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಪರಿಶೀಲಿಸಿ,

ಪರಿಹಾರಗಳನ್ನು ಸೂಚಿಸಿದೆ. ಕನ್ನಡ ವರ್ಣಗಳ ಬಗೆಗೆ ಇಷ್ಟು ಗಾಢವೂ ವಿಸ್ತಾರವೂ ಆದ ಪ್ರಾಮಾಣಿಕ ರೀತಿಯ ವಿವೇಚನೆಯನ್ನು ಅಂದಿನ ವರೆಗೆ ಯಾರೂ ಮಾಡಿರಲಿಲ್ಲವೆಂದೇ ತೋರುತ್ತದೆ. ಆರಂಭದಲ್ಲಿ, ವ್ಯಾಕರಣ ಮತ್ತು ಭಾಷಾ ವಿಜ್ಞಾನಗಳ ಪರಸ್ಪರ ಸಂಬಂಧ ಸೀಮಾರೇಖೆಗಳನ್ನು ಗುರುತಿಸುತ್ತ, ವ್ಯಾಕರಣದ ಮಹತ್ವವನ್ನು ಸೇಡಿಯಾಪು ಎತ್ತಿ ಹಿಡಿದಿದ್ದಾರೆ; ಭಾಷಾ ವಿಜ್ಞಾನ ವಲಯದಲ್ಲಿ ಆಧುನಿಕರು ಮಾಡುವ ಊಹೆ ಅನುಮಾನಗಳ ಬಗೆಗೆ ಇರಬೇಕಾದ ಎಚ್ಚರದ ಕಡೆಗೆ ನಮ್ಮನ್ನು ಎಚ್ಚರಿಸಿಯೂ ಇದ್ದಾರೆ. ನಮ್ಮ ಲಿಪಿ ಪದ್ಧತಿ ಅಕ್ಷರಾತ್ಮಕವಾದುದೆಂಬುದನ್ನು ಸಮರ್ಥಿಸಲು, ಲಿಪಿಮಾಲೆ, ವರ್ಣಮಾಲೆಗಳ ಹಿನ್ನಲೆಯಲ್ಲಿ ವಿವರವಾಗಿ ಲಿಪಿ ಮೀಮಾಂಸೆ ನಡೆಸಿ, ಸಂಧ್ಯಕ್ಷರಗಳ ಲಿಪಿ ಸ್ವರೂಪ ಉಚ್ಚಾರಗಳ ವಿಸ್ತೃತ ಚರ್ಚೆಯೊಂದಿಗೆ ಒಟ್ಟಾಗಿ ಸ್ವರಸಂಖ್ಯಾನಿರ್ಣಯವನ್ನು ನಡೆಸಿದ್ದಾರೆ. ವ್ಯಂಜನಗಳ ಪ್ರಕರಣದಲ್ಲಿ ಪ,ಹ ವ್ಯತ್ಯಯದ ಮಾರ್ಮಿಕ ಚರ್ಚೆ ನಡೆಸಿ, ಹ ಕಾರವು ಮೂಲದ್ರಾವಿಡ ವರ್ಣವಲ್ಲವೆಂಬುದನ್ನು ಸ್ಥಾಪಿಸಿದ್ದಾರೆ; ಚಕಾರೋಚ್ಚಾರ ಮೀಮಾಂಸೆಯ ಹಿನ್ನೆಲೆಯಲ್ಲಿ ಚ-ಸಗಳ ಪರಸ್ಪರ ಸಂಬಂಧವನ್ನು ಚರ್ಚಿಸಿ, ದ್ರಾವಿಡ ಚಕಾರಗಳಲೆಲ್ಲ ಊಷ್ಮವರ್ಣವಾದ ಸಕಾರವು ಅಡಗಿ ಕೊಂಡುತಿರುವುದರಿಂದ ಸಕಾರವೇ ಅದರ ಮೂಲವೆಂದೂ ಅದು ದ್ರಾವಿಡ ಧ್ವನಿಗಳೊಳಗೆ ಒಂದೆಂದೂ ಗುರುತಿಸಿದ್ದಾರೆ. ಈ ಗ್ರಹಿಕೆಗಳನ್ನು ಒಪ್ಪದಿರುವುದಕ್ಕೆ ಕಾರಣಗಳೇನೂ ಇಲ್ಲ; ಇವು ದ್ರಾವಿಡ ಭಾಷಾವಿಜ್ಞಾನಿಗಳಿಗೂ ಸಮ್ಮತವಾದವೇ. ಇನ್ನು ಅನುಬಂಧವಾಗಿ ಕೊಟ್ಟಿರುವ ಱ - ೞ - ೞ ಸಂಜ್ಞೆಗಳ ಅಭಿಧಾನವಿಚಾರವಂತೂ ಸೇಡಿಯಾಪು ಅವರ ಸ್ವಂತ ಶೋಧನೆಗಳ ಫಲ. ವಿಚಾರ ಇಲ್ಲಿಯೂ ತೃಪ್ತಿಕರವೇ.

ಈ ಸಂಶೋಧನ ಕೃತಿಯಲ್ಲಿ ವಿವಾದಸ್ಪದ ಇಲ್ಲವೆ ಸಂದಿಗ್ಧತೆಗೆ ಅವಕಾಶ ಮಾಡುವ ವಿಚಾರಗಳೇ ಇಲ್ಲವೆಂದೇನೂ ನಾನು ಹೇಳಲಾರೆ. ಧಾತುವಿಗೆ 'ಅಸು' ಪ್ರತ್ಯಯ ಸೇರಿ ಬೆರಸು ಇತ್ಯಾದಿ ರೂಪಗಳು ನಿಷ್ಪನ್ನನಾಗುತ್ತವೆ ಎಂಬ, ಪಸುರ್ ಕಿಸುರ್ ಎಂಬಂತೆ 'ಬಿಸಿರ್' ರೂಪ ವಿದ್ದಿರಬಹುದೇ ಎಂಬ, ಕಿಚ್ಚು-ಕಿರ್ಚುಗಳಲ್ಲಿ ಜನ್ಯಜನಕ ಸಂಬಂಧವುಂಟೇ ಎಂಬ ಅವರ ವಿಚಾರ ಮತ್ತು ಊಹೆಗಳಲ್ಲಿ ಅದನ್ನು ಗಮನಿಸಬಹುದು. ಆದರೆ ಇವು ಗೌಣವಾದವು.

'ಪಂಚಮೀ ವಿಭಕ್ತಿ' ಕುರಿತ ಸೇಡಿಯಾಪು ಅವರ ಪ್ರಬಂಧ (ಪ್ರ.ಕ. 26-2;1944) ವನ್ನು ಮುಗಳಿಯವರು ಹೇಳುವಂತೆ "ದ್ರಾವಿಡ ಭಾಷಾ ಶಾಸ್ತ್ರದ ಚರಿತ್ರೆಗೆ ಕನ್ನಡ ಪಂಡಿತರೊಬ್ಬರ ಮೌಲಿಕವಾದ ಕಾಣಿಕೆಯೆಂದು ಹೆಮ್ಮೆಯಿಂದ ಹೇಳಬಹುದು". ಇದರಲ್ಲಿ ಎಂದಿನಂತೆ ಅವರು ದ್ರಾವಿಡಭಾಷೆಗಳ ಹಾಗೂ ಕನ್ನಡದ ಉಪಭಾಷೆಗಳ ಕಾವ್ಯಸ್ಥವೂ ಪ್ರಚಲಿತವೂ ಆದ ಭಾಷಾ ಸಾಮಾಗ್ರಿಯನ್ನು ಪರಸ್ಪರವಾಗಿ ಹೋಲಿಸುತ್ತ, ತೃತೀಯಾ ವಿಭಕ್ತಿ ಪ್ರತ್ಯಯಗಳಿಂದು ಸಾಮಾನ್ಯವಾಗಿ

ತಿಳಿಯುತ್ತಿರುವ 'ಇಂ' / 'ಇಂದ' ಇತ್ಯಾದಿ ಪ್ರತ್ಯಯಗಳು ದಿಟವಾಗಿ ಪಂಚಮೀ ವಿಭಕ್ತಿಯ ಪ್ರತ್ಯಯಗಳೇ ಹೊರತು ತೃತೀಯಾ ವಿಭಕ್ತಿಯ ಪ್ರತ್ಯಯಗಳಲ್ಲವೆಂದು ಸಾಧಾರವಾಗಿ ಪ್ರತಿಪಾದಿಸಿದ್ದಾರೆ. ಕನ್ನಡದಲ್ಲಿ ಸಹಜವಾಗಿ ಪಂಚಮೀ ವಿಭಕ್ತಿ ಇದೆಯೆಂದೂ ತನ್ನದೇ ಆದ ಪ್ರತ್ಯಯವಿಲ್ಲದೆ ಒಮ್ಮೆ ಸಪ್ತಮಿಯನ್ನೂ ಇನ್ನೊಮ್ಮೆ ಪಂಚಮೀಯನ್ನೂ ಆಶ್ರಯಿಸುವುದು ತೃತೀಯಾರ್ಥವೆಂದೂ ಅವರು ನಿಗಮನ ಮಾಡಿದ್ದಾರೆ. ಕನ್ನಡದಲ್ಲಿ ಪಂಚಮೀ ವಿಭಕ್ತಿಯ ಕಾರ್ಯವಿದೆ, ಆದರೆ ಅದಕ್ಕೆ ಸ್ವಸಂತ್ರವಾದ ಪ್ರತ್ಯಯವಿಲ್ಲ ಎಂಬುದಾಗಿಯೇ ಈಗಲೂ ಭಾವಿಸುವ ನಮ್ಮ ದ್ರಾವಿಡ ಭಾಷಾ ವಿಜ್ಞಾನಿಗಳು, ಸೇಡಿಯಾಪು ಅವರ ಪ್ರತಿಪಾದನೆಯನ್ನು ಇನ್ನೂ ಗಂಭೀರ ವಿಮರ್ಶೆಗೆ ಎತ್ತಿಕೊಂಡಿಲ್ಲವೇನೋ ಎಂದು ನನಗೆ ತೋರುತ್ತದೆ.

ಸೇಡಿಯಾಪು 'ಕೆಲವು ದೇಶನಾಮಗಳು' (1975) ಎಂಬ ಒಂದು ಸ್ಥಳನಾಮ ಶಾಸ್ತ್ರದ ಪರಿಧಿಗೆ ಬರುವ ಪುಸ್ತಕವನ್ನು ರಚಿಸಿದ್ದಾರೆ. ಇದರಲ್ಲಿ ಎರಡು ಲೇಖನಗಳಿದ್ದು ಒಂದರಲ್ಲಿ ತುಳು, ಚೇರ- ಕೊಂಕಣಗಳ ಶಬ್ದಾರ್ಥ ವಿಚಾರವೂ ಇನ್ನೊಂದರಲ್ಲಿ ಪಾಂಡಿ ಮತ್ತು ಪಾಂಡ್ಯ ಶಬ್ದಾರ್ಥ ವಿಚಾರವೂ ಮಥನಗೊಂಡಿವೆ. ಈ ಮಥನದಲ್ಲಿ ಈ ಸಂಬಂಧದ ಹಿಂದಿನವರ ಕೆಲವು ಅಭಿಪ್ರಾಯಗಳ ವಿಮರ್ಶೆ ಸಹ ಸೇರಿದೆ. ಸೇಡಿಯಾಪು ಅವರು ಮೊದಲು 'ತುಳು' ಶಬ್ದ ಕುಳಘಟಿತವಾದ್ದೆಂದು ಸಿದ್ಧಪಡಿಸಿ, ಬಳಿಕ ಆಲುವ - ಆಳುವ - ಆಳುವ ಖೇಡ / ಆಳ್ವಖೇಡ ಇತ್ಯಾದಿಯಾಗಿ ತುಳುನಾಡಿಗೆ ಹಿಂದಿನಿದಲ್ಲೂ ಇದ್ದ ಹೆಸರುಗಳ ಮೂಲವನ್ನು ಹುಡುಕುತ್ತ ಹೊರಟು ಅವನ್ನು ಜಲಾಧಿಕ್ಯವುಳ್ಳ ಆರ್ದ್ರಪ್ರದೇಶವೆಂಬ ಅರ್ಥವನ್ನು ಕೊಡುವ 'ಅನೂಪ' ವೆಂಬ ಪ್ರದೇಶವಾಚಕ ಸಂಸ್ಕೃತ ಶಬ್ದದೊಂದಿಗೆ ಲಗತ್ತಿಸಿದ್ದಾರೆ; ತನ್ಮೂಲಕ ಪ್ರದೇಶವಾಚಕ 'ತುಳು' ಶಬ್ದ ಸಹ ಮೂಲದಲ್ಲಿ ಜಲವಾಚಕಗಳಾದ ಸದೃಶ ದ್ರಾವಿಡ ಶಬ್ದಗಳ ಗುಂಪಿಗೆ ಸೇರಿದುದಾಗಿರುವ ಒಂದು ದೇಶ್ಯಪದವೆಂಬುದಾಗಿ ಸಾಧಿಸಿದ್ದಾರೆ. ಪ್ರಾಸಂಗಿಕವಾಗಿ ಚೇರನಾಟ್ಟ್, ಕೇರಲ / ಕೇರಳ, ಮಲಯಾಳ / ಮಲಬಾರು, ಕೋಂಕಣ / ಕೊಂಕಣ ಈ ಪ್ರದೇಶವಾಚಕಗಳು " ಗುಡ್ಡಗಳಿಂದ ತುಂಬಿದ ಪ್ರದೇಶ" ವೆಂಬರ್ಥವನ್ನು ಬಹುಮಟ್ಟಿಗೆ ಕೊಡುವ ಚೇರ, ಕೇರ, ಮಲೆ, ಕೋಂಕ / ಕೊಂಕ ಎಂಬ ಮಾತುಗಳಿಂದ ಸಿದ್ಧವಾದವು - ಎಂದು ವಿಚಾರ ಮಾಡಿದ್ದಾರೆ. ಎರಡನೆಯ ಲೇಖನದಲ್ಲಿ, 'ಪಾಂಡ್ಯ' ವೆಂಬ ರಾಜಮನೆತನದ ಮತ್ತು ದೇಶದ ಹೆಸರು ಹೇಗೆ ಭಾಷಿಕವಾಗಿ, ಸಾಂಸ್ಕೃತಿಕವಾಗಿ 'ದೊಡ್ಡ ದೋಣಿ' ಅಥವಾ 'ಸರಕು ಸಾಗಿಸುವ ದೊಡ್ಡ ಹಾಯಿ ಹಡಗು' ಎಂಬ ಅರ್ಥದ 'ಪಾಂಡಿ' ಎಂಬ ಶಬ್ದದ ಬುಡದಿಂದ ಚಿಗಿತು ಬೆಳೆದಿದೆಯೆಂದು ಮನೋಜ್ಞವಾಗಿ ವಿಚಾರ ಮಾಡಿದೆ. ಪಾಂಡ್ಯಾಲ (ಬಂದರು), ಪಾಂಡಿಚೇರಿ, ಪಾಂಡಿಬಜಾರ್, ಪಾಂಡಿಮಾರ್ (ಪಾಣೆ ಮಂಗಳೂರು) ಈ ಮೊದಲಾದ ಪ್ರಾದೇಶಿಕ ಶಬ್ದಗಳನ್ನು

'ಪಾಂಡಿ'ಯ ನೌಕಾರ್ಥವನ್ನು ಹಿಡಿದುಕೊಂಡು, ಆ ಅರ್ಥದ ಬೆಳಕಿನಲ್ಲಿಯೇ ವಿಶ್ಲೇಷಿಸಲಾಗಿದೆ. ಹೀಗೆ ಪಾಂಡ್ಯ ಶಬ್ದದ ರಚನೆಯಲ್ಲಿ ಪಾಂಡಿ (ನೌಕೆ), ಪಾಂಡಿಯನ್ (ನೌಕೆಯವನು / ನೌಕೆಗೆ ಸಂಬಂಧಿಸಿದವನು) ಎಂಬ ರೂಪಗಳ ಸೆಲೆಯನ್ನು ಗುರುತಿಸಿದ ಮೇಲೆ, ಪಾಂಡ್ಯ ರಾಜನಿಗೆ ಆ ಹೆಸರಿನ ಸಾರ್ಥಕತೆಯನ್ನೂ ಭೂತಾಳಪಾಂಡ್ಯನೆಂಬವನ ಮೂಲವನ್ನೂ ಚರ್ಚಿಸಿ ಗೊತ್ತು ಪಡಿಸಿದೆ. ಕೊನೆಗೆ 'ಪಾಂಡಿ'ಗೆ ಸಂಸ್ಕೃತ 'ಭಂಡ' / 'ಭಾಂಡ' ಮೂಲವೆಂದು ಭಾಂಡವನ್ನು ನೆಲದ ಮೇಲೆ ಸಾಗಿಸುವುದು ಭಂಡಿ (ಬಂಡಿ) ಎಂದೂ ನೀರಿನ ಮೇಲೆ ಸಾಗಿಸುವುದು ಭಾಂಡಿ (ಪಾಂಡಿ) ಎಂದೂ ನಿರ್ಣಯಿಸಿದ್ದಾರೆ. ಸದ್ಯದಲ್ಲಿ ಇದಕ್ಕಿಂತ ಸಮರ್ಪಕವಾದ ಅರ್ಥ ನಿಷ್ಪತ್ತಿಗಳು ಈ ವಿಚಾರದಲ್ಲಿ ಶಕ್ಯವಿಲ್ಲವೆಂದೇ ತೋರುತ್ತದೆ. ವಿ.ಸೀ. ಅವರು ಮುನ್ನುಡಿಯಲ್ಲಿ ತಿಳಿಸುವಂತೆ ಸೇಡಿಯಾಪು ಅವರು ಹಿಡಿದ ವಾದ 'ಅತಿಶಯ' ಎಂಬುದರಲ್ಲಿ ಸಂಶಯವಿಲ್ಲ. ಇಲ್ಲಿಯೂ ವ್ಯಾಕರಣ - ಭಾಷಾವಿಜ್ಞಾನಗಳನ್ನು ಮುಖಾಮುಖಿ ಮಾಡಿ, ವ್ಯಾಕರಣದ ಪ್ರಾಶಸ್ತ್ಯವನ್ನು ಎತ್ತಿ ಹಿಡಿದಿರುವುದು ಲೇಖಕರ 'ವಿಜ್ಞಾಪನೆ'ಯ ಭಾಗದಲ್ಲಿ ಕಂಡು ಬರುತ್ತದೆ.

ಇನ್ನು ನಾವು ಶ್ರೀಯುತರ ಛಂದೋವಿಷಯಕವಾದ ರಚನೆಗಳನ್ನು ಎತ್ತಿಕೊಳ್ಳೋಣ. ಛಂದಸ್ಸಿನ ವಿಷಯಗಳನ್ನು ಪ್ರತಿಪಾದಿಸುವಾಗ ಅವರು ಬಂಧಗಳ ಸಾಮಾನ್ಯ ಲಕ್ಷಣ ವಿಮರ್ಶೆ, ಭೇದೋಪಭೇದಗಳ ಪರಿಶೀಲನೆ ಹಾಗೂ ಐತಿಹಾಸಿಕವಾಗಿ ಅವುಗಳ ವಿಕಾಸ ಕ್ರಮ - ಇವುಗಳನ್ನು ಲಕ್ಷಿಸುವುದಕ್ಕಿಂತ ಅವುಗಳ ರಚನೆಯಲ್ಲಿ ಕಂಡು ಬರುವ ಛಂದೋಗತಿಯ ಸ್ವರೂಪ ಮತ್ತು ವೈವಿಧ್ಯಗಳ ಕಡೆಗೆ ಹಾಗೂ ವಾಚನಕ್ರಮಗಳ ಕಡೆಗೆ ಬಹುವಾಗಿ ಲಕ್ಷ್ಯ ಕೊಡುವುದು ಕಂಡುಬರುತ್ತದೆ. ಈ ಸಲುವಾಗಿ ಅವರು ಮಾಡಿರುವ ಕೆಲವು ಸಂಸ್ಕೃತ ಛಂದೋಗ್ರಂಥಗಳ ಅಭ್ಯಾಸ ಅವರಿಗೆ ಸಹಾಯವಾಗಿರುವುದು ದಿಟವಾದರೂ ಅವರು ಸಂಗೀತ ಶಾಸ್ತ್ರವನ್ನೂ ಸ್ವೋಪಜ್ಞವಾದ ಚಿಂತನಗಳನ್ನು ಅವಲಂಬಿಸಿರುವುದೇ ಸಾಮಾನ್ಯವಾಗಿ ಹೆಚ್ಚು ಎನ್ನಬಹುದು. ಈ ಮುಖದಲ್ಲಿ ಅವರಿಗಿರುವ ಶಕ್ತಿಸಾಮರ್ಥ್ಯಗಳು ಅನನ್ಯ ಸಾಧಾರಣವಾದವು; ಅತಿಶಯವೂ ಅಗಾಧವೂ ಆದವು.

ಸೇಡಿಯಾಪು ಅವರ ' ಛಂದೋಗತಿ ' ಎಂಬ (1985) ರಚನೆ ಅವರ ಮೇರುಕೃತಿ. ಅವರ ಪ್ರತಿಭೆ ಪಾಂಡಿತ್ಯಗಳನ್ನು ಸಾರ್ಥಕಗೊಳಿಸುವ ಶ್ರೇಷ್ಠ ಕೃತಿ. ಇದೊಂದು ಶಾಸ್ತ್ರ ರಸಕಾಸಾರವೇ ಸರಿ. ಇದರಲ್ಲಿ ಛಂದಸ್ತತ್ತ್ವಗಳ ಹಾಗೂ ಗತಿ ಭೇದಗಳ ವಿವೇಚನೆ ತಲಸ್ಪರ್ಶಿಯಾಗಿ ನಡೆದಿರುವುದು ಕಾಣುತ್ತದೆ. 'ತಲಸ್ಪರ್ಶಿ' ಎನ್ನುವುದಕ್ಕಿಂತ ಕೂಲಂಕಷ ಎನ್ನುವುದೇ ಸರಿಯಾದ ಮಾತು ಇಲ್ಲಿ. ಇಲ್ಲಿಯ 9 ಪರಿಚ್ಛೇದಗಳಲ್ಲಿ ಕ್ರಮವಾಗಿ 'ಲಯ' ಎಂಬ ಸಂಜ್ಞೆಯ ಅರ್ಥ, ಛಂದಃ ಶಾಸ್ತ್ರ ಗ್ರಂಥಗಳಲ್ಲಿ ಲಯದ ಅರ್ಥ ಮತ್ತು ವ್ಯಾಪ್ತಿ, Rhythm ಹಾಗೂ ಗತಿ ಮತ್ತು ಲಯ, ಛಂದಸ್ ಮತ್ತು ಗತಿ-

ಛಂದಃ, ಪದಾರ್ಥ ವಿವೇಚನೆ, ಗತಿ ರೂಪಗಳ ವಿವೇಚನೆ, ಛಂದೋಗತಿ ಭೇದಗಳು, ಗತಿ ಮತ್ತು ಯತಿ, ವಿಷಮಗತಿಬಂಧಗಳು, ಹಾಗೂ ಅಕ್ಷರ ಜಾತಿಗಳು, ಅನುಷ್ಟುಪ್ ಶ್ಲೋಕ, ಉಪಜಾತಿಗಳು ಮತ್ತು ವೈದಿಕ ಛಂದಸ್ಸುಗಳ ಸ್ವರೂಪ ಇವುಗಳ ವಿಚಾರ ಸೂಕ್ಷ್ಮವೂ ವಿಸ್ತೃತವೂ ಆಗಿ ಪ್ರತಿಪಾದಿತವಾಗಿದೆ. ಈ ಪ್ರತಿಪಾದನೆಯ ಎಡೆತಿಡೆಯಲ್ಲಿ ಅನ್ಯ ವಿದ್ವಾಂಸರ ವಿಚಾರಗಳ ವಿಮರ್ಶೆಯೂ ತಾವು ತಪ್ಪು ಗ್ರಹಿಕೆಗಳೆಂದು ನಂಬಿದ ವಿಚಾರಗಳ ಖಂಡನೆಯೂ ಸಮಾಧಾನಗಳೂ ಪ್ರಕಟಗೊಂಡಿವೆ.

ಛಂದಸ್ಸಿನ ಮೌಲಿಕ ತತ್ತ್ವಗಳಿಗೆ ಬಳಸುವ ಲಯ, ಗತಿ, ಯತಿ, ಪ್ರಾಸ ಮೊದಲಾದ ಹಲವಾರು ಸಂಜ್ಞೆಗಳು ತಪ್ಪಾಗಿಯೋ ಶಿಥಿಲವಾಗಿಯೋ ಅವ್ಯಾಪ್ತಿ ಅತಿವ್ಯಾಪ್ತಿ ದೋಷಗಳಿಗೆ ಪಕ್ಕಾಗಿಯೋ ಬಳಕೆಯಾಗುವುದು ತಪ್ಪಿ, ಅವುಗಳನ್ನು ಶಾಸ್ತ್ರನಿಷ್ಠೆಯಿಂದ ಬಳಸುವುದೂ ಛಂದೋ ಬಂಧಗಳ ಲಕ್ಷಣ ನಿರ್ವಚನದಲ್ಲಿ ಅನ್ವಯಿಸುವುದೂ ಆಗಬೇಕು ಎನ್ನುವುದು ಸೇಡಿಯಾಪು ಅವರ ಕಳಕಳಿ. ಇದು ಮೆಚ್ಚತಕ್ಕುದೇ ಸರಿ. ಆದರೂ ಬೆಳೆಯುತ್ತಿರುವ ಭಾಷೆ, ಶಾಸ್ತ್ರಗಳ ಸಂಜ್ಞೆಗಳನ್ನು ಸಹ ವಿವಿಧ ಅರ್ಥಚ್ಯುತಿ ಅರ್ಥ ವಿಸ್ತಾರಗಳೊಂದಿಗೆ ಸ್ವೀಕರಿಸಿ ಉಪಯೋಗಿಸುವುದನ್ನು ನಾವು ನಿಯಂತ್ರಿಸಲಾಗದೇನೋ! ಈ ಬದಲಾವಣೆಗಳು ಒಂದು ಸಮುದಾಯ ಕಾರ್ಯ ಎನ್ನುವುದನ್ನು ನಾವು ಮರೆಯುವಂತಿಲ್ಲ. ಪ್ರಾಚೀನರಲ್ಲಿಯೇ ವೃತ್ತ, ಜಾತಿ ಎಂಬ ಸಂಜ್ಞೆಗಳ ಬಳಕೆಯಲ್ಲಿ ಉಂಟಾಗಿರುವ ಗೊಂದಲಗಳು ನಮಗೆ ವಿದಿತವಿದೆ. ಹಾಗೆಯೇ ಲಯ-ಗತಿಗಳು, ಯತಿ-ವಡಿಗಳು, ಪ್ರಾಸ-ಖಂಡಪ್ರಾಸ - ಅನುಪ್ರಾಸಗಳು ಮೊದಲಾದ ಸಂಜ್ಞೆಗಳಲ್ಲಿ ಸಹ ಗೊಂದಲಗಳಿಗೆ ಅವಕಾಶವುಂಟು. ಆದರೆ ಸಾಧ್ಯವಾದಷ್ಟು ಎಚ್ಚರ, ಖಚಿತತೆಯ ದೃಷ್ಟಿ ಅವಶ್ಯ ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ.

'ಛಂದೋಗತಿ'ಯಲ್ಲಿ ಪದ್ಯಜಾತಿಗಳಲ್ಲಿ ಲಯ, ಯತಿ, ಗತಿ, ತಾಳ ಇತ್ಯಾದಿಗಳ ಸ್ಥಾನ ವಿವೇಚನೆಯ ಜೊತೆಗೆ ಅಂತಹ ಸಂಜ್ಞೆಗಳನ್ನು ಅನ್ವಯಿಸಿ ಅವನ್ನು ಲಕ್ಷಣಿಸುವ ವಿಧಿ ವಿಧಾನಗಳು, ವಾಚನ ಕ್ರಮಗಳು ಇವನ್ನು ಸಹ ವಿಶದವಾಗಿ ಚರ್ಚಿಸಲಾಗಿದೆ. ವಿವಿಧ ಅಕ್ಷರ ಗತಿ, ಪದಗತಿಗಳು ಹೇಗೆ ವ್ಯವಸ್ಥಿತವಾಗಿ ಇಲ್ಲವೇ ಅವ್ಯವಸ್ಥಿತವಾಗಿ ಗತಿಭೇದಗಳನ್ನು ರೂಪಿಸುತ್ತವೆ ಎನ್ನುವುದನ್ನು ನಿರ್ದೇಶನಗಳೊಂದಿಗೆ ತೋರಿಸಲಾಗಿದೆ ; ಯತಿಯ ಸ್ಥಾನ, ಎಲ್ಲಿ ಹೇಗೆ ಎಂಬುದನ್ನು ಗುರುತಿಸಿದೆ. ಪದ ಸಂಘಟನೆ ಗಣ ಸಂಘಟನೆಗಳ ವಿಪುಲ ವಿನ್ಯಾಸಗಳ ಮರ್ಮವನ್ನು ಬೆದಕಿ ಅವು ಗತಿ ಸೌಂದರ್ಯವನ್ನು ವಿವಿಧ ಪದ್ಯ ಜಾತಿಗಳಲ್ಲಿ ಹೇಗೆ ತರುತ್ತವೆ ಎನ್ನುವುದನ್ನು ಸಮಾಲೋಚಿಸಿದೆ. ಮುಖ್ಯವಾಗಿ ಜಟಿಲ ಗತಿಲಕ್ಷಣವುಳ್ಳ ವಿಷಮಗತಿಬಂಧಗಳೆಂಬುದಾಗಿ ನಾವು ಕರೆದಿರುವ, ವರ್ಣ

ವೃತ್ತಗಳ ಗತಿಭೇದಗಳನ್ನು ಗುರುತಿಸಲು ಸೇಡಿಯಾಪು ಬಹುವಾಗಿ ಶ್ರಮಿಸಿದ್ದಾರೆ; ಅಂತಹ ವೃತ್ತಗಳನ್ನು ಹೊಸದಾಗಿ ಕಲ್ಪಿಸಲೂ ಲಕ್ಷಣಿಸಲೂ ಏನಾದರೂ ಉಪಾಯಗಳುಂಟೇ ಎನ್ನುವುದನ್ನು ಶೋಧಿಸಿದ್ದಾರೆ. ವೈದಿಕ ಛಂದಸ್ಸುಗಳ ತ್ರೈಸ್ವರ್ಯ ತತ್ತ್ವ ಅರ್ಥಪ್ರವಣವಾದುದು, ಗುರು ಲಘು ಸ್ಥಿರ ಗತಿ ಪ್ರವಣವಾದುದಲ್ಲ ಎಂದು ಅವರು ಹೇಳಿರುವುದು ಸೂಕ್ತವೇ ಆದರೂ ಈ ಸಂಬಂಧದಲ್ಲಿ ವೇಲಣಕರರ ವಿವೇಚನೆ ಸಲಹೆಗಳನ್ನು ತಳ್ಳಿ ಹಾಕುವಂತಿಲ್ಲ ಎಂದೇ ನನ್ನ ಭಾವನೆ. ಹಾಗೆಯೇ ರಗಳೆಯ ಲಕ್ಷಣ ನಿರ್ವಚನದಲ್ಲಿ ಸೇಡಿಯಾಪು ಅವರ ವಿವೇಚನೆ ಸಲಹೆಗಳೂ ಅವರು ಮಾಡಿರುವ ಜಯಕೀರ್ತಿಯ ಲಕ್ಷಣ ಪದ್ಯದ ವಿಮರ್ಶೆಯೂ ನಿರ್ದುಷ್ಟವೆಂದು ನಾನು ತಿಳಿಯಲಾರೆ. ಹಾಗೆಯೇ ತೀ.ನಂ.ಶ್ರೀ. ಯವರ 'ಸಮಾಲೋಕನ' ದೊಳಗಿನ ಪು. 185ರ ಟಿಪ್ಪಣೆಯ ಮಾತುಗಳನ್ನು ಪೂರ್ತಿಯಾಗಿ ಗಮನಿಸದೆ, " ಶ್ರೀಯುತರ ಮಾತು ಕೇವಲ ಅವಿಚಾರಿತರಮಣೀಯ" ಎಂಬುದಾಗಿ ಆಕ್ಷೇಪಿಸಿರುವುದು ಅನುದಾರವಾದ ಟೀಕೆಯೇ ಆಯಿತೆಂದು ಹೇಳಬೇಕು. ಆದರೆ ಇವೆಲ್ಲ ಸೇಡಿಯಾಪು ಅವರ ಪುಸ್ತಕದ ಘನತೆಯನ್ನು ಎಷ್ಟು ಮಾತ್ರವೂ ಕುಂದಿಸುವುದಿಲ್ಲ.

ಸೇಡಿಯಾಪು ಅವರ ಇನ್ನೊಂದು ಛಂದಸ್ಸಿನ ಕೃತಿ ಎಂದರೆ 'ಕನ್ನಡ ಛಂದಸ್ಸು' (1988). ಇದರಲ್ಲಿ ಪರಿಷತ್ಪತ್ರಿಕೆಯ ' ಕನ್ನಡ ಛಂದಸ್ಸು' ಎಂಬ ಪ್ರಬಂಧದ (1933) ಪರಿಷ್ಕೃತ ರೂಪವೂ ತ್ರಿಪದಿ, ಗೀತಿಕೆ ಮತ್ತು ಛಂದೋವತಂಸಗಳೆಂಬ ಅಂಶವೃತ್ತಗಳನ್ನು ಕುರಿತು ಆಗಾಗ ಬರೆದ ಬೇರೆ ಬೇರೆ ಪ್ರಬಂಧಗಳೂ ಇತರ ಕೆಲವು ಉಪಯುಕ್ತ ಟಿಪ್ಪಣಿಗಳೂ ಸಮಾವೇಶಗೊಂಡಿವೆ. ಕೃತಿ ಮುಖ್ಯವಾಗಿ ಅಂಶವೃತ್ತಗಳ ಲಕ್ಷಣ ವಿಮರ್ಶೆಗೆ ಮೀಸಲಾಗಿರುವುದರಿಂದ ಈ ಸಂಬಂಧವಾಗಿ ಅಧ್ಯಯನ ಮಾಡುವವರಿಗೆ ಇದು ತುಂಬ ಉಪಯುಕ್ತವಾದ ಒಂದು ಗ್ರಂಥವಾಗಿದೆ.

ಇದರಲ್ಲಿ ತ್ರಿಮೂರ್ತಿಗಣಬಂಧಗಳ ಪ್ರಸ್ತಾರ ತತ್ತ್ವವನ್ನೂ ವಾಚನವಿಧಾನವನ್ನೂ ಪ್ರಾಸಂಗಿಕವಾಗಿ ವಿವೇಚಿಸಿದೆ ; ಅವು ಪಾಠ್ಯವಾಗುವುದಕ್ಕಿಂತ ಹೆಚ್ಚಾಗಿ ಗೇಯವಾದವು ಎಂದೂ ಅಕ್ಷರ ಕರ್ಷಣಕ್ಕೆ ಒಳಗಾಗಿ ಹಾಡತಕ್ಕವು ಎಂದೂ ಶ್ರೀಯುತರು ತಿಳಿಸಿರುವುದು ಸ್ವಾರಸ್ಯದ ಪರಿಶೀಲನೆಯಾಗಿದೆ; ಆದರೆ ಹಾಗೆಯೇ ಹಾಡಬೇಕೆನ್ನುವುದು ಅವಶ್ಯ ನಿಯಮವೇ, ಸಾರ್ವತ್ರಿಕವಾಗಿ ಅದು ಸಮ್ಮತವಾಗತಕ್ಕುದೇ - ಎಂಬುದೂ ಇಲ್ಲಿ ವಿಚಾರಯೋಗ್ಯವಾಗಿದೆ. ಸೇಡಿಯಾಪು ತಾವು ಸಲಹೆ ಮಾಡುವ ತ್ರಿಮೂರ್ತಿಗಣಗಳ ವಾಚನಕ್ರಮವನ್ನು ಅಧಿಷ್ಠಾನವಾಗಿಟ್ಟುಕೊಂಡು, ಗೀತಿಕೆಯ ಲಕ್ಷಣವನ್ನು ಗೊತ್ತುಪಡಿಸಲು ತೊಡಗಿ, ಅದನ್ನು ರುದ್ರಗಣಪ್ರಧಾನ ಬಂಧವನ್ನಾಗಿ ತಿಳಿದಿದ್ದಾರೆ. ಇದನ್ನು ಒಪ್ಪುವುದು ಕಷ್ಟ. ಹೀಗೆಯೇ ಸರ್ವಜ್ಞನ ತ್ರಿಪದಿಗಳಿಗೆ ಸಹ ತ್ರಿಮೂರ್ತಿಗಣ ಪ್ರಸ್ತಾರವೇ ಮಾನ್ಯವಾಗಬೇಕೆಂಬ ವಿಷಯದಲ್ಲಿ ಸಹ ಭಿನ್ನಭಿಪ್ರಾಯಕ್ಕೆ ಅವಕಾಶವುಂಟು. ಈ ಬಗ್ಗೆ ನಾನು

ಅನ್ಯತ್ರ ವಿಚಾರ ಮಾಡಿದ್ದೇನೆ. ಅಲ್ಲದೆ 'ವರ್ಣಕ' ವೆಂಬ ಮಾತಿನ 'ರಗಳೆ' ಯೆಂಬ ಹೆಸರಿನ ವಿಚಾರದಲ್ಲಿ, ತ್ರಿಪದಿ-ತ್ರಿವಿಧಿಗಳ ಹಾಗೂ ಚಿತ್ರ ಚಿತ್ರಾಲತಾದಿ ಭೇದಗಳ ವಿಚಾರದಲ್ಲಿ, ಬಾದಾಮಿ ಶಾಸನದ ಪಾಠ, ಅರ್ಥ ಮತ್ತು ಛಂದೋವಿವೇಚನೆಗಳಲ್ಲಿ ಅವರ ಸಲಹೆ ಸೂಚನೆಗಳು ತೃಪ್ತಿಕರವೆಂದು ನಾನು ತಿಳಿಯಲಾರೆ. ಏಳೆಗಳ ಜೋಡಿ ಸಾಂಗತ್ಯಕ್ಕೆ ದಾರಿ ಮಾಡಿತು ಎನ್ನುವುದೂ ದಂಡಕ ರಗಳೆಗಳ ನಡುವೆ ಜನಕ - ಜನ್ಯ ಸಂಬಂಧವನ್ನು ಕಾಣುವುದೂ ಸೂಕ್ತವಾದ ನಿರ್ಣಯಗಳೆಂದು ನಾನು ಭಾವಿಸಲಾರೆ. ಛಂದೋವತಂಸವನ್ನು ಬ್ರಹ್ಮಗಣ ಪ್ರಧಾನವನ್ನಾಗಿ, ಚೌಪದಿಯನ್ನು ರುದ್ರಗಣ ಪ್ರಧಾನವನ್ನಾಗಿ ಮತ್ತೆ ಛಂದೋವತಂಸವನ್ನು ಪಿರಿಯಕ್ಕರದ ಗೀತಭಾಗದ ಅನುಬಂಧಿ ಬಂಧವನ್ನಾಗಿ ಗ್ರಹಿಸಿರುವುದು ಸಹ ಹೀಗೆಯೇ ಸರಿ ಎನ್ನುವಂತಿಲ್ಲ. ಲಲಿತ ರಗಳೆಯನ್ನು ಶಿಥಿಲೀಕರಿಸಿ, ಅದಕ್ಕೆ ಹೊಸ ರೂಪ ಕೊಟ್ಟ ಮೊದಲಿಗನೆಂದು 'ಕಲಾವತೀಪರಿಣಯ' ದ ಕರ್ತೃ ಯಾದವನ ಬಗೆಗೆ ಬರೆದಿರುವುದು, ಅವನಿಗೆ ಸಲ್ಲದ ಪ್ರಶಸ್ತಿಯೆಂದೇ ನನ್ನ ಭಾವನೆ.

ಅಂತು ಇವುಗಳ ವಿಚಾರ ಏನೇ ಇರಲಿ, 'ಕನ್ನಡ ಛಂದಸ್ಸು' ಎಂಬ ಸೇಡಿಯಾಪು ಅವರ ಸಂಶೋಧನ ಪ್ರಬಂಧ ಮೊದಲು ಪ್ರಕಟವಾದಾಗ, ಅದು ಕನ್ನಡ ಛಂದಸ್ಸಿನ ಅಧ್ಯಯನಕ್ಕೆ ನೀಡಿದ ಚಾಲನೆ ಅನನ್ಯವಾದುದು. ಪ್ರಥಮ ಮಾರ್ಗಪ್ರವರ್ತಕ ವಿಸ್ತೃತ ಪ್ರಬಂಧವೆಂದರೆ ಇದೇ. ಇಲ್ಲಿ ತ್ರಿಮೂರ್ತಿಗಣ ರಚನೆಯ ಸಾಮಾನ್ಯ ಸ್ವರೂಪವನ್ನು ಮೊದಲ ಸಲ ಖಚಿತ ಪಡಿಸಿದುದು ಕಾಣುತ್ತದೆ; ಅಲ್ಲದೆ ಇವುಗಳಲ್ಲಿ ಕಟ್ಟಿದ ಛಂದೋಬಂಧಗಳಲ್ಲಿ ಲಗ ವಿನ್ಯಾಸ, ಪಾದಾಂತಾಕ್ಷರದ ನಿಲುಗಡೆ, ಯತಿ ವಿಚಾರ ಇಂತಹ ಮಾರ್ಮಿಕವಾದ ಅಂಶಗಳು ವಹಿಸುವ ಪಾತ್ರವೇನು ಎನ್ನುವುದನ್ನು ತೌಲನಿಕವಾಗಿ ಶೋಧಿಸಿ ನಿರೂಪಿಸಿರುವುದು ತೃಪ್ತಿಕರವಾಗಿದೆ, ಸಾರಸ್ಯಕರವಾಗಿದೆ. ತ್ರಿಪದಿ ಸಾಂಗತ್ಯಗಳು ತ್ರಿಮೂರ್ತಿಗಣಬದ್ಧವಾದ ಬಂಧಗಳೆಂದು ಮೊದಲ ಸಲ ತಿಳಿಸಿ, ಅವುಗಳಿಗೆ ಪರಿಷ್ಕೃತವಾಗಿ ಲಕ್ಷಣ ನಿರ್ವಚನೆ ಮಾಡಿದುದು ಇಲ್ಲಿಯೇ ಎನ್ನುವುದನ್ನು ವಿಶೇಷವಾಗಿ ನೆನೆಯಬೇಕು. 'ಸೊಬಗಿನ ಸೋನೆ ಮಟ್ಟು' ಅಪ್ರಚುರವಾಗಿರುವುದಕ್ಕೆ ಊಹಿಸಿರುವ ಕಾರಣ ತುಂಬ ತೃಪ್ತಿಕರವಾದ್ದು, ಮೂಲ ಪ್ರಬಂಧಕ್ಕೆ ಅನಂತರದಲ್ಲಿ ಸೇರ್ಪಡೆಯಾಗಿರುವ ಟಿಪ್ಪಣಿಗಳು ಅತ್ಯಂತ ಉಪಯುಕ್ತವಾದವೆಂದು ಹೇಳಬೇಕು. ಏಳೆಯ ವಿಚಾರವಾಗಿ ಬರೆದಿರುವ ವಿಸ್ತೃತವಾದ ಟಿಪ್ಪಣಿ ತೌಲನಿಕ ಸಮಾಲೋಚನೆಯಿಂದಾಗಿ ವಿಷಯ ಪುಷ್ಟಿಯಿಂದ ಕೂಡಿ ಸಾರಸ್ಯಕರವಾಗಿದೆ. 'ಏಳೆ' ಶಬ್ದದ ನಿಷ್ಪತ್ತಿಯ ವಿಚಾರದಲ್ಲಿ ಅವರು ಅದನ್ನೊಂದು ಸಮಸ್ಯೆಯನ್ನಾಗಿ ತಿಳಿದಿರುವುದು ಏಕೆಂದು ನನಗೆ ತಿಳಿಯುತ್ತಿಲ್ಲ. ಏಕೆಂದರೆ 'ಏಳೆ' ಎಂಬುದು ಸಂಸ್ಕೃತ 'ಏಲಾ' ಶಬ್ದದ ಕ್ಷಳಘಟಿತ ರೂಪವೆಂಬುದು ವಿದಿತವೇ ಇದೆ. ಜಯಕೀರ್ತಿ ಕನ್ನಡ 'ಏಳೆ' ಯನ್ನು 'ಏಲಾ' ಎಂಬುದಾಗಿ ಕರೆದಿರುವುದನ್ನೇ ಇದಕ್ಕೆ ಸಮರ್ಥನೆಯ ಸಾಕ್ಷ್ಯವನ್ನಾಗಿ ಅಂಗೀಕರಿಸಲು ಅಡ್ಡಿಯೇನೂ ನನಗೆ ತೋರುತ್ತಿಲ್ಲ.

ಇಲ್ಲಿಯವರೆಗೆ ಸೇಡಿಯಾಪು ಅವರ ರಚನೆಗಳ ಕಾಣಿಕೆಗಳೇನು, ಕೊರತೆಗಳೇನು ಎನ್ನುವ ಬಗೆಗೆ ಕೆಲವು ಮಾತುಗಳನ್ನು ಹೇಳಿ ಆಯಿತು. ಇನ್ನು ಅವರ ಪಾಂಡಿತ್ಯದ ಸ್ವರೂಪದ ಬಗೆಗೆ ಕೆಲವು ಮಾತಗಳನ್ನಾಡಿ ಈ ಉಪನ್ಯಾಸವನ್ನು ನಾನು ಮುಗಿಸುತ್ತೇನೆ.

ಸೇಡಿಯಾಪು ಕೃಷ್ಣಭಟ್ಟರು ಕನ್ನಡ ಭಾಷೆ ಸಾಹಿತ್ಯಗಳ ಶ್ರೇಷ್ಠ ವಿದ್ವಾಂಸರಲ್ಲಿ ಒಬ್ಬರು; ಬಹು ಭಾಷೆಗಳಲ್ಲಿ ತಜ್ಞತೆ ಪಡೆದವರು; ಸಂಗೀತ ಶಾಸ್ತ್ರಜ್ಞರು. ಅವರು ತಮ್ಮ ಬಹುಭಾಷಾಭಿಜ್ಞತೆ ಸಂಗೀತಶಾಸ್ತ್ರಜ್ಞತೆಯನ್ನು ಕನ್ನಡ ಭಾಷೆ ಸಾಹಿತ್ಯಗಳ ಸಂಶೋಧನೆಯಲ್ಲಿ ತುಂಬ ಸಮರ್ಥವಾಗಿ, ಉಪಯುಕ್ತವಾಗಿ ಬಳಸುತ್ತಾರೆ. ಇದರಿಂದ ಇತರ ವಿದ್ವಾಂಸರ ಕಣ್ಣುಗಳು ಹಾಯದ ನೆಲಗಳನ್ನೂ ತಲುಪದ ನೇರಗಳನ್ನೂ ಇವರ ಕಣ್ಣುಗಳು ಹಾಯುತ್ತವೆ, ತಲುಪುತ್ತವೆ. ಅ ಕಣ್ಣುಗಳು ನಿಜವನ್ನು ಯಶಸ್ವಿಯಾಗಿ ಗುರುತಿಸುತ್ತವೆ; ಕತ್ತಲಲ್ಲಿ ಬೆಳಕಿನ ಕಿರಣಗಳನ್ನು ಹೊಮ್ಮಿಸುತ್ತವೆ.

ವಸ್ತು ವಿವೇಚನೆಯಲ್ಲಿ ಅವರು ಸಾಕಲ್ಯ, ಸಮಗ್ರತೆ ಮತ್ತು ವೈಖರಿಗಳನ್ನು ಮೆರೆಯುವ ಅಪೂರ್ವ ಶಕ್ತಿಯುಳ್ಳವರು. ಯಾವುದೇ ವಸ್ತುವಿನ ಸ್ವರೂಪವನ್ನು ನಿರೂಪಿಸುವಲ್ಲಿಯೂ ವಿಮರ್ಶಿಸುವಲ್ಲಿಯೂ, ಮರ್ಮಗಳನ್ನೂ, ರಹಸ್ಯಗಳನ್ನೂ ಭೇದಿಸುವಲ್ಲಿಯೂ ಅವರು ಅಪಾರವಾದ ಶಕ್ತಿ, ತಾಳ್ಮೆ ಮತ್ತು ಸಂಯಮಗಳನ್ನು ಪ್ರಕಟಿಸುತ್ತಾರೆ. ಸಮುಚಿತ ವಾದಗಳನ್ನು ಹೂಡುವುದರಲ್ಲಿ ಸುಸಂಬಂದ್ಧವಾದ ವಿವರಗಳನ್ನು ಎಳೆ ಎಳೆಯಾಗಿ ಬಿಡಿಸುತ್ತ, ಕೂದಲು ಸೀಳುವಂತೆ ಅವನ್ನು ಸೀಳುತ್ತ, ಅಣುಗಳನ್ನು ಒಡೆಯುವಂತೆ ಒಡೆಯುತ್ತ ಸಾಗುವ ಅವರ ನಿರ್ವಹಣ ವೈಖರಿ ಅನನ್ಯ ಸಾಧಾರಣವಾದುದು; ಆಳದಿಂದ ಆಳಕ್ಕೆ ಇಳಿದು ಮರ್ಮಗಳನ್ನು ಗುರುತಿಸುವುದೂ ಸಂಗತಿಗಳನ್ನು ತರ್ಕಬದ್ಧವಾಗಿ ಸಂಯೋಜಿಸುವುದೂ, ಒಪ್ಪುವಂತಹ ನಿಗಮನಗಳನ್ನೂ ಸಾಧಿಸುವುದೂ ಅತಿಶಯ ಸುಂದರವಾದವು, ಪ್ರೌಢವಾದವು. ಹೀಗೆ ತರ್ಕಶುದ್ಧವಾಗಿ ಪರಿಷ್ಕಾರವಾಗಿ ವಿವರಗಳನ್ನು ನಿರೂಪಿಸುವುದು ಅವರ ಹುಟ್ಟು ಗುಣ. ಇದಕ್ಕಾಗಿ ಅವರು ಬಳಸುವ ಭಾಷೆ ರಾಜಗಂಭೀರ, ವ್ಯಾಕರಣ ಬದ್ಧ; ಆದರೆ ಸರಸತೆ ನಿರರ್ಗಳತೆಗೆ ಎಲ್ಲಿಯೂ ಕೊರತೆಯಿಲ್ಲ. ಒಟ್ಟಿನಲ್ಲಿ ವಸ್ತು ಹೇಗೆ ಉದಾತ್ತವೋ, ಶೈಲಿ ಹಾಗೆ ಪಾಂಡಿತ್ಯ ಪ್ರಚುರ. ಅಗತ್ಯಕ್ಕೆ ತಕ್ಕಂತೆ ಅವರು ನಾನಾ ಮೂಲಗಳಿಂದ ಪ್ರಮಾಣ ವಾಕ್ಯಗಳನ್ನು ಒದಗಿಸುತ್ತಾರೆ; ಅವನ್ನೂ ಪರೀಕ್ಷಿಸುತ್ತಾರೆ; ಹೊಸ ಸಂಜ್ಞೆಗಳನ್ನು ಕಲ್ಪಿಸುತ್ತಾರೆ; ಹಳೆಯದಾಗಲಿ ಹೊಸದಾಗಲಿ ಹೂಡಿದ ಸಂಜ್ಞೆಗಳನ್ನು ನಿಸ್ಸಂದಿಗ್ಧವಾಗಿ ಬಳಸುತ್ತಾರೆ; ಎಲ್ಲವನ್ನೂ ಅತಿಶಯಿಸುವಂತೆ ಅಗತ್ಯವಾದ ಎಲ್ಲದರ ಬಗೆಗೂ ತಮ್ಮ ನಿಶಿತಮತಿ, ಸೂಕ್ಷ್ಮ ದೃಷ್ಟಿ ಹಾಗೂ ದರ್ಶನ ವಿಶಿಷ್ಟತೆ ಮುಪ್ಪುರಿಗೊಂಡ ಚಿಂತನ ಮಂಥನಗಳ ಚಿಕಿತ್ಸೆಯನ್ನು ನೀಡುತ್ತಾರೆ. ತಮ್ಮ ಗಮನಕ್ಕೆ ಬಂದ ಹೊಸ ಸಾಮಗ್ರಿಗಳ ಬಲದಿಂದ ಹಳೆಯ ಅಭಿಪ್ರಾಯಗಳನ್ನು ಮುಕ್ತ ಮನಸ್ಸಿನಿಂದ

ತಿದ್ದಿಕೊಳ್ಳುತ್ತಾರೆ. ಇಲ್ಲವೇ ಪರಿಷ್ಕರಿಸಿ ಇನ್ನೂ ಸ್ಪಷ್ಟ ಪಡಿಸುತ್ತಾರೆ. ತಮ್ಮ ನಿಲವು ನಿರ್ಣಯಗಳನ್ನು ನಿರೂಪಿಸುವಾಗ ಮೋಹ ಮಮಕಾರಗಳಿಗೆ ಎಡೆ ಕೊಡದೆ ಖಚಿತವಾಗಿ ದೃಢವಾಗಿ ಆದರೆ ಸಪ್ರಮಾಣವಾಗಿ ಹೇಳವುದನ್ನು ಎಂದೂ ಮರೆಯುವುದಿಲ್ಲ. ತಾವು ಹೇಳಿದುದನ್ನು ಬೇರೆಯವರು ಒಪ್ಪಲೇಬೇಕೆಂದು ಅವರು ಹಠ ಮಾಡುವುದಿಲ್ಲ; ಒಪ್ಪುವಂತೆ ಮನವರಿಕೆ ಮಾಡಲು ಬಹುವಾಗಿ ಪರಿಶ್ರಮ ಪಡುತ್ತಾರೆ, ವಾದಗಳನ್ನು ಹೂಡುತ್ತಾರೆ, ಹೀಗೆ ಪರಿಶ್ರಮ ಪಡುವಾಗ ಅವರಲ್ಲಿ ಶಾಸ್ತ್ರ ಪ್ರಜ್ಞೆ ನಿಚ್ಚಳವಾಗಿರುತ್ತದೆ. ಆತ್ಮವಿನ್ಯಾಸ ದೃಢತರವಾಗಿರುತ್ತದೆ. ಏನೇ ಹೇಳಲಿ, ಅದರಲ್ಲಿ ಅಸ್ಪಷ್ಟತೆ ಸಂದಿಗ್ಧತೆಗಳೂ ಶೈಥಿಲ್ಯ ಸ್ಖಾಲಿತ್ಯಗಳೂ ಬಾರದ ಹಾಗೆ ಅವರು ಎಚ್ಚರ ವಹಿಸುತ್ತಾರೆ. ಅವರಿಗೆ ಪೂರ್ವಸೂರಿಗಳ ವಿಷಯದಲ್ಲಿ ಯಥೋಚಿತ ಗೌರವವೂ, ಸ್ವಶಕ್ತಿಯಲ್ಲಿ ನಂಬುಗೆಯೂ ಸಮಸಮವೆಂಬಂತಿವೆ: ಕಿರಿಯರಾದವರ ವಿಷಯದಲ್ಲಿ ವಿಶ್ವಾಸವೂ ಕೊಂಚ ಸಂಕೋಚವೂ ಸಮಸಮವೆಂಬಂತಿವೆ. ಅವರಿಗೆ ಶಾಸ್ತ್ರ ನಿಷ್ಠೆ, ಸತ್ಯಾನ್ವೇಷಣಗಳೇ, ಹಿರಿಯರ ಕಿರಿಯರ ಆದರಣೆ ಮೆಚ್ಚುಗೆಗಳಿಗಿಂತ ಮುಖ್ಯ ಎಂಬುದು ಎದ್ದು ತೋರುತ್ತದೆ. ಅವರು ಪ್ರತಿಭೆ ಪಾಂಡಿತ್ಯಗಳು ಮೇಳವಿಸಿದ ರಸಋಷಿಗಳು, ಪಂಡಿತಶ್ರೇಷ್ಠರು ಎಂಬುದು ಕನ್ನಡಿಗರಿಗೆ ಹೆಮ್ಮೆಯ ವಿಷಯ.



ದಿನಾಂಕ 9-6-1991 ರಂದು ಉಡುಪಿಯ ಎಂ.ಜಿ.ಎಂ. ಕಾಲೇಜಿನಲ್ಲಿ ನಡೆದ ಶ್ರೀ ಸೇಡಿಯಾಪು ಕೃಷ್ಣಭಟ್ಟರ 90ನೆಯ ವರ್ಷದ ಅಭಿನಂದನಾ ಸಮಾರಂಭದಲ್ಲಿ ಮಾಡಿದ ಅಭಿನಂದನ ಭಾಷಣದ ಲಿಖಿತರೂಪ.

**ತಿದ್ದುಪಡಿ**

**ಕರ್ನಾಟಕಲೋಚನ ಸಂಪುಟ 14, ಸಂಚಿಕೆ 1,**

**ಜೂನ್ 2001, ಪುಟ 66, 'ಶ್ರದ್ಧಾಂಜಲಿ'**

2 'ಶಿಸು' ಸಂಗಮೇಶ ಜನ್ಮ ದಿನಾಂಕ 29-4-2001 ಎಂದು ಅಚ್ಚಾಗಿರುವುದನ್ನು ದಯವಿಟ್ಟು 29-4-1929 ಎಂದು ತಿದ್ದಿಕೊಳ್ಳಬೇಕಾಗಿ ವಿನಂತಿ. ಆಕಸ್ಮಾತ್ತಾಗಿ ಆಗಿರುವ ತಪ್ಪಿಗಾಗಿ ವಿಷಾದಿಸುತ್ತೇವೆ.

ಸಂಪಾದಕ

# ಶಿಶುಪಾಲನ ವಾದವೈಖರಿ

- ಕೌಲಗಿ ಶೇಷಾಚಾರ್

ಪಾಂಡವರು ಹಸ್ತಿನಾಪುರವನ್ನು ಬಿಟ್ಟು ಇಂದ್ರಪ್ರಸ್ಥದಲ್ಲಿ ತಮ್ಮ ರಾಜ್ಯವನ್ನು ಸ್ಥಾಪಿಸಿದನಂತರ ನಾರದರ ಸಲಹೆಯಂತೆ ಯುಧಿಷ್ಠಿರನು ರಾಜಸೂಯ ಯಾಗವನ್ನು ನಡೆಸಿದನು. ಯಾಗದ ಕೊನೆಯ ಅಂಗವಾಗಿ ಅಗ್ರಪೂಜೆಯನ್ನು ಯಾರಿಗೆ ಸಲ್ಲಿಸಬೇಕೆಂಬ ಸಮಸ್ಯೆಯು ಯುಧಿಷ್ಠಿರನಿಗೆ ತಲೆದೋರಿದಾಗ, ಭೀಷ್ಮನು ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನು ಸಲ್ಲಿಸಬೇಕೆಂದು ಸಲಹೆಯಿತ್ತನು. ಏಕೆಂದರೆ ಅವನ ದೃಷ್ಟಿಯಲ್ಲಿ ಶ್ರೀಕೃಷ್ಣನು ಸಾಕ್ಷಾತ್ ಭಗವಂತನೇ ಆಗಿದ್ದಾನೆ. ಈ ಸಲಹೆಯು ಯುಧಿಷ್ಠಿರನಿಗೆ ಒಪ್ಪಿಗೆಯಾಯಿತು. ಸಹದೇವನು ಶಾಸ್ತ್ರೋಕ್ತವಾಗಿ ಸಲ್ಲಿಸಿದ ಪೂಜೆಯನ್ನು ಶ್ರೀಕೃಷ್ಣನು ಸ್ವೀಕರಿಸಿದನು. ಆದರೆ ಚೇದಿ ರಾಜನಾದ ಶಿಶುಪಾಲನಿಗೆ ಇದು ಸರಿಯೆಂದು ಕಂಡುಬರಲಿಲ್ಲ. ತನ್ನ ವಿರೋಧವನ್ನು ವ್ಯಕ್ತಪಡಿಸಿ ಈ ಕೆಳಕಂಡಂತೆ ತನ್ನ ವಾದ ಸರಣಿಯನ್ನು ರಾಜಸಭೆಯಲ್ಲಿ ಮಂಡಿಸಿದನು:

ಎಲೈ ಕೌರವಾ (ಭೀಷ್ಮ), ಇಲ್ಲಿ ಮಹಾತ್ಮರಾದ ರಾಜರು ಇರುವಾಗ ಕೃಷ್ಣನು ರಾಜೋಚಿತವಾದ ಪೂಜೆಗೆ ಅರ್ಹನಲ್ಲ. ಮಹಾತ್ಮರಾದ ಪಾಂಡವರಲ್ಲಿ ಈ ನಡತೆಯು ಯೋಗ್ಯವಲ್ಲ. ಎಲೈ ಪಾಂಡುಕುಮಾರಾ, ನೀನು ಸ್ವಾರ್ಥಕ್ಕಾಗಿ ಪುಂಡರೀಕಾಕ್ಷನನ್ನು ಪೂಜಿಸುತ್ತಿದ್ದೀಯೆ. ಪಾಂಡು ಕುಮಾರರೆ, ನೀವು ಬಾಲಕರು; ಧರ್ಮವು ಸೂಕ್ಷ್ಮವಾದುದು, ಅದನ್ನು ಅರಿಯಲಾರಿರಿ. ಈ ಭೀಷ್ಮನು ಸ್ಮರಣಶಕ್ತಿಯನ್ನು ಕಳೆದುಕೊಂಡಿದ್ದಾನೆ. ಇವನ ತಿಳಿವಳಿಕೆಯೂ ಕಡಿಮೆಯಾಗಿದೆ. ಎಲೈ ಭೀಷ್ಮಾ, ನಿನ್ನಂಥ ಧರ್ಮಜ್ಞನು ಮತ್ತೊಬ್ಬನ ಹಿತ ಬಯಸುವ ದೃಷ್ಟಿಯಿಂದ (ಕಾರ್ಯವನ್ನು) ಮಾಡುವವನಾದರೆ ಅಂಥವನು ಸಾಧುಪುರುಷರ ಸಮಾಜದಲ್ಲಿ ತೀರಾ ಅಪಮಾನಕ್ಕೂ ಪಾತ್ರನಾಗುತ್ತಾನೆ.

ಯದುವಂಶದ ಕೃಷ್ಣನು ರಾಜನಲ್ಲ. ಎಲ್ಲ ರಾಜರ ಮಧ್ಯದಲ್ಲಿ ಹೇಗೆ ಪೂಜೆಗೆ ಅರ್ಹನಾಗುತ್ತಾನೆ? ಕುರುಪುಂಗವಾ! (ಯುಧಿಷ್ಠಿರಾ) ಕೃಷ್ಣನು ಹಿರಿಯನೆಂದು ಭಾವಿಸುವೆಯಾದರೆ ವಾಸುದೇವನು ಇರುವಾಗ ಅವನ ಮಗನು ಹೇಗೆ ಪೂಜೆಗೆ ಅರ್ಹನಾಗುತ್ತಾನೆ? ಅಥವಾ ವಾಸುದೇವನು ನಿಮಗೆ ಪ್ರಿಯವನ್ನು ಮಾಡುವವನು ಮತ್ತು ನಿಮ್ಮನ್ನು ಅನುಸರಿಸುವವನು ಎಂದಾದರೆ ದ್ರುಪದನಿರುವಾಗ ಮಾಧವನು ಹೇಗೆ ಅರ್ಹನು? ಕೃಷ್ಣನು ಆಚಾರ್ಯನೆಂದು ಭಾವಿಸುವಿಯಾದರೆ ದ್ರೋಣನಿರುವಾಗ ಕೃಷ್ಣನನ್ನು ಹೇಗೆ ಪೂಜಿಸಿದೆ? ಕೃಷ್ಣನು ಋತ್ವಿಕನೆಂದಾದರೆ ಹಿರಿಯನಾದ ದ್ವೈಪಾಯನನು ಇರಲಾಗಿ ಹೇಗೆ ಕೃಷ್ಣನನ್ನು ಗೌರವಿಸಿದೆ? ಪುರುಷಶ್ರೇಷ್ಠನೂ, ತನಗೆ ಇಷ್ಟಬಂದಾಗ ಸಾಯುವ ವರವುಳ್ಳವನೂ, ಶಂತನು ಮಗನಾದ ಭೀಷ್ಮನಿರುವಾಗ ಕೃಷ್ಣನನ್ನು ಹೇಗೆ ಪೂಜಿಸಿದೆ?

ರಾಜನ್ ಕುರುನಂದನಾ, ಎಲ್ಲ ಶಾಸ್ತ್ರಗಳಲ್ಲಿ ವಿಶಾರದನೂ, ವೀರನೂ ಆದ ಅಶ್ವತ್ಥಾಮ; ಪುರುಷಶ್ರೇಷ್ಠನೂ ರಾಜೇಂದ್ರನೂ ಆದ ದುರ್ಯೋಧನ; ಭಾರತಾಚಾರ್ಯ ಕೃಪ; ಕಿಂಪುರುಷರ ಆಚಾರ್ಯನಾದ ದ್ರುಮ; ಪಾಂಡುವಿನಂತೆ ವೀರನೂ ರಾಜಲಕ್ಷಣಗಳಿಂದ ಕೂಡಿದವನೂ ಆದ ಭೀಷ್ಮಕ, ಶ್ರೇಷ್ಠನಾದ ರುಕ್ಮಿ, ಹಾಗೆಯೇ ಏಕಲವ್ಯ, ಮದ್ರರಾಜ ಶಲ್ಯ ಮತ್ತು ಮಹಾಬಲವುಳ್ಳವನೂ, ತನ್ನ ಬಲದಿಂದ ಯುದ್ಧದಲ್ಲಿ ರಾಜರನ್ನು ಗೆದ್ದವನೂ ತನ್ನ ಬಲದ ಬಗ್ಗೆ ಹೆಮ್ಮೆ ಪಡುವವನೂ ಎಲ್ಲ

ರಾಜರಲ್ಲಿ ಬಲಿಷ್ಠನೂ ಪರಶುರಾಮನ ಶಿಷ್ಯನೂ ಆದ ಕರ್ಣ; ಇವರೆಲ್ಲರನ್ನೂ ಅತಿಕ್ರಮಿಸಿ ಕೃಷ್ಣನನ್ನು ಹೇಗೆ ಪೂಜಿಸಿದೆ? ಮಧುಸೂದನನು ಋತ್ವಿಕನೂ ಅಲ್ಲ, ಆಚಾರ್ಯನೂ ಅಲ್ಲ, ಮತ್ತೆ ರಾಜನೂ ಅಲ್ಲ. ಹಾಗಾದರೆ ಯಾವ ಪ್ರಿಯಕಾಮನೆಯಿಂದ ಕೃಷ್ಣನನ್ನು ಗೌರವಿಸಿದೆ?

ನಿಮ್ಮ ದೃಷ್ಟಿಯಿಂದ ಮಧುಸೂದನನು ಪೂಜೆಗೆ ಯೋಗ್ಯನೆಂದಾದರೆ, ಇಲ್ಲಿ ರಾಜರನ್ನು ಕರೆಸಿದ್ದಾದರೂ ಏಕೆ? ಅವರ ಅಪಮಾನಕ್ಕೋಸ್ಕರವೆ? ನಾವಾದರೋ ಕುಂತೀಮಗನಾದ ಯುಧಿಷ್ಠಿರನಿಗೆ ಭಯದಿಂದಾಗಲಿ ಆಸೆಯಿಂದಾಗಲಿ ಅಥವಾ ಆಶ್ವಾಸನೆಯನ್ನು ಪಡೆಯುವ ಇಚ್ಛೆಯಿಂದಾಗಲಿ ಕಪ್ಪ ಕಾಣಿಕೆಗಳನ್ನು ನೀಡುತ್ತಿಲ್ಲ. ಧರ್ಮಾಚರಣೆಯಲ್ಲಿರುವ ಯುಧಿಷ್ಠಿರನು ಸಾಮ್ರಾಟ್ ಪದವಿಯನ್ನು ಪಡೆಯಲು ಇಚ್ಛಿಸುತ್ತಿರುವುದರಿಂದ ನಾವು ಕಪ್ಪಕಾಣಿಕೆಗಳನ್ನು ಕೊಡುತ್ತಿದ್ದೇವೆ. ಆದರೆ ಆತನು ನಮ್ಮನ್ನು ಗೌರವಿಸುತ್ತಿಲ್ಲ.

ಯುಧಿಷ್ಠಿರಾ! ರಾಜಸಭೆಯಲ್ಲಿ ಇದಕ್ಕಿಂತಲೂ ಬೇರೆ ಅಪಮಾನವೇನಿದೆ? ರಾಜೋಚಿತವಾದ ಯಾವ ಲಕ್ಷಣವನ್ನೂ ಪಡೆಯದ ಕೃಷ್ಣನಿಗೆ ಅರ್ಘ್ಯವನ್ನು ಕೊಟ್ಟು ಗೌರವಿಸಿದ್ದೀಯೆ. ಧರ್ಮಪುತ್ರನಿಗೆ ಧರ್ಮಾತ್ಮನೆಂಬ ಕೀರ್ತಿಯು ಅಕಸ್ಮಾತ್ ಲಭಿಸಿದಂತಾಯಿತು. ಇಲ್ಲದಿದ್ದರೆ ಧರ್ಮಚ್ಯುತನಾದ ಕೃಷ್ಣನಿಗೆ ಈ ರೀತಿಯಾದ ಯೋಗ್ಯ ಪೂಜೆಯನ್ನು ಯಾವನು ಸಲ್ಲಿಸಿಯಾನು? ವೃಷ್ಣಿಕುಲದಲ್ಲಿ ಹುಟ್ಟಿದ ದುರಾತ್ಮನಾದ ಈತನು ಮಹಾತ್ಮನಾದ ಜರಾಸಂಧನನ್ನು ಅನ್ಯಾಯದಿಂದ ಕೊಂದನು. ಇಂದು ಧರ್ಮಾತ್ಮನೆಂಬ ಪಟ್ಟವೂ ಯುಧಿಷ್ಠಿರನಿಂದ ಕಳಚಿಕೊಂಡಿತು. ಕೃಷ್ಣನಿಗೆ ಅರ್ಘ್ಯವನ್ನು ಕೊಡುವುದರ ಮೂಲಕ ಅವನ ಸಣ್ಣತನವು ಕಂಡುಬಂದಿತು. ಎಲೈ ಮಾಧವಾ, ಕುಂತಿಯ ಮಕ್ಕಳು ಹೆದರಿದವರು, ಅಲ್ಪರು ಮತ್ತು ಕರುಣೆಗೆ ಪಾತ್ರರಾಗಿದ್ದಾರೆ. ನೀನಾದರೂ ಅವರಿಗೆ ಯಾರು ಪೂಜೆಗೆ ಅರ್ಹರೆಂಬುದನ್ನು ತಿಳಿಸಬೇಕಿತ್ತು. ಈ ಅಲ್ಪರು ಸಲ್ಲಿಸಿದ ಪೂಜೆಯನ್ನು ನೀನು ಅರ್ಹನಲ್ಲದಿದ್ದರೂ ಹೇಗೆ ಸ್ವೀಕರಿಸಿದೆ?

ನಿನಗೆ ಸಲ್ಲಿಸಿದ ಯೋಗ್ಯವಲ್ಲದ ಪೂಜೆಯಿಂದ ನೀನು ದೊಡ್ಡವನೆಂದು ಭಾವಿಸುತ್ತಿರುವೆ. ಯಾರೂ ಇಲ್ಲದ ಸ್ಥಳದಲ್ಲಿ ಕೋಡಿ ಹರಿಯುತ್ತಿರುವ ಹವಿಸ್ಸನ್ನು ನೆಕ್ಕಿದ ನಾಯಿಯ ಸ್ಥಿತಿಯಂತಾಯಿತು ನಿನ್ನ ನಡತೆ! ಈ ಅಪಮಾನವು ರಾಜರಿಗೆ ಅಪಮಾನವೆಂದೆನಿಸುವುದಿಲ್ಲ. ನಿಜವಾಗಿ ಕುರುಕುಲದ ಪಾಂಡವರು ನಿನಗೆ ಜೋತುಬಿದ್ದಿದ್ದಾರೆ. ಷಂಡನಿಗೆ ಮದುವೆಯನ್ನು ಮಾಡಿಸುವುದು, ಕುರುಡನಿಗೆ ರೂಪವನ್ನು ತೋರಿಸುವುದು ಹೇಗೋ ಹಾಗೆ ರಾಜನಲ್ಲದವನಿಗೆ ರಾಜನಂತೆ ಪೂಜೆ ಸಲ್ಲಿಸಿದ್ದು! ರಾಜ ಯುಧಿಷ್ಠಿರನನ್ನು ನೋಡಿದ್ದಾಯಿತು. ಭೀಷ್ಮನು ಎಂಥವನು ಎಂಬುದನ್ನು ಕಂಡದ್ದಾಯಿತು. ವಾಸುದೇವನನ್ನೂ ನೋಡಿದ್ದಾಯಿತು. ಎಲ್ಲರೂ ನಿಜವಾಗಿ ಅವರವರಂತೆ ಇದ್ದಾರೆ.

ಶಿಶುಪಾಲನ ವಾದಸರಣಿಯು ತರ್ಕಶುದ್ಧವೂ ಪ್ರಾಮಾಣಿಕವೂ ನಿಃಸ್ವಾರ್ಥವೂ ಆದುದು ಎಂಬುದರಲ್ಲಿ ಲವಲೇಶ ಸಂಶಯವಿಲ್ಲ. ಅವನ ಆಕ್ಷೇಪಣೆ ತಾತ್ವಿಕಸ್ವರೂಪದ್ದು. ರಾಜಸೂಯ ಯಾಗದಲ್ಲಿ ರಾಜನೊಬ್ಬನಿಗೆ ಅಗ್ರಪೂಜೆಯು ಸಲ್ಲಬೇಕಾದುದು ಶಾಸ್ತ್ರನಿಯಮ. ಪಾಂಡವರ ಆಚರಣೆಯಲ್ಲಿ ಶಿಶುಪಾಲನು ಅನೌಚಿತ್ಯವನ್ನು ಎತ್ತಿ ತೋರಿಸಿದ್ದಾನೆ. ಈ ಸಂದರ್ಭದಲ್ಲಿ ನಮಗೆ ಎದ್ದು ಕಾಣುವ ಪ್ರಮುಖವಿಚಾರವೇನೆಂದರೆ, ಕೃಷ್ಣನು ಅವತಾರಪುರುಷನೆ? ಎಂಬುದು. ಅಂದಿನ ಸಮಾಜದಲ್ಲಿ ಕೃಷ್ಣನು ಅವತಾರ ಪುರುಷನೆಂಬುದು ಎಲ್ಲರ ಮನಸ್ಸಿನಲ್ಲಿ ಬೇರೂರಿರಲಿಲ್ಲವೆಂಬುದು ಶಿಶುಪಾಲನ

ವಾದಸರಣಿಯಿಂದ ಸುಸ್ಪಷ್ಟ. ಒಂದುಕಡೆ ಕೃಷ್ಣನು ಅವತಾರಪುರುಷನೆಂದು ನಂಬಿರುವ ಜನಸಮೂಹ, ಮತ್ತೊಂದು ಕಡೆ ಇದನ್ನು ನಂಬದಿರುವ ಜನಸಮೂಹ. ಶಿಶುಪಾಲನಂತೂ ಎರಡನೆಯ ವರ್ಗದ ಪ್ರತಿನಿಧಿಯೆಂದು ಹೇಳಬಹುದು. ಅಗ್ರಪೂಜೆಗೆ ಕೃಷ್ಣನು ಅರ್ಹನಲ್ಲವೆಂಬುದನ್ನು ಪ್ರಮಾಣಪೂರ್ವಕವಾಗಿ ಮಂಡಿಸಿದಾಗ ಅದನ್ನು ಖಂಡಿಸಿ ಕೃಷ್ಣನಿಗೆ ಅರ್ಹತೆಯು ಇತ್ತೆಂಬುದನ್ನು ಶಿಶುಪಾಲನ ರೀತಿಯಲ್ಲೇ ಕೃಷ್ಣನ ಪಕ್ಷದವರು ವಾದವನ್ನು ಮಂಡಿಸಬೇಕಿತ್ತು. ಆದರೆ ಹಾಗೆ ಆಗದೆ ಇದ್ದದ್ದು ದುರ್ದೈವ. ನಿರ್ಣಯವು ಏಕಪಕ್ಷೀಯವಾಯಿತು. ಕೃಷ್ಣನು ಅವತಾರಪುರುಷನೆಂಬ ವಾದವನ್ನೊಡ್ಡಿದ ಭೀಷ್ಮಾದಿಗಳು ಶಿಶುಪಾಲನ ವಾದಸರಣಿಯನ್ನು ಖಂಡಿಸಲು ತಾತ್ವಿಕವಾಗಿ ಎಷ್ಟರಮಟ್ಟಿಗೆ ಸಫಲರಾದರು? ಭೀಷ್ಮನ ವಾದವನ್ನೊಪ್ಪದ ಶಿಶುಪಾಲನು ಭೀಷ್ಮನೂ ಅಗ್ರಪೂಜೆಗೆ ಅರ್ಹನೆಂದೂ ಶ್ರೇಷ್ಠಪುರುಷನೆಂದೂ ಹೇಳಿರುವಾಗ ಅವನ ನಿಃಸ್ವಾರ್ಥತೆಯು ಎದ್ದು ಕಾಣುವುದಿಲ್ಲವೆ? ರಾಜಸಭೆಯಲ್ಲಿ ಯಾರೂ ಕೂಡ ಶಿಶುಪಾಲನ ವಾದಸರಣಿಯನ್ನು ಬೆಂಬಲಿಸಲು ಮುಂದೆ ಬರಲಿಲ್ಲವಾಗಿ ಎಲ್ಲರೂ ದುರಾಗ್ರಹದಿಂದ ಪೀಡಿತರಾಗಿದ್ದರೆಂಬುದನ್ನು ತೋರಿಸುತ್ತದೆ. ಕೃಷ್ಣನನ್ನು ಬಿಟ್ಟು ಯಾವ ರಾಜರಿಗೆ ಅಗ್ರಪೂಜೆಯನ್ನು ಸಲ್ಲಿಸಬೇಕೆಂಬುದನ್ನು ವಿಸ್ತಾರವಾಗಿ ತಿಳಿಸಿ, ರಾಜರಲ್ಲದವರ ಹೆಸರುಗಳನ್ನು ಸೂಚಿಸಿ ಅವರಲ್ಲಿ ಒಬ್ಬೊಬ್ಬನಲ್ಲೂ ಇರುವ ಹಿರಿಮೆಯನ್ನು ಹೇಳಿ ಅಗ್ರಪೂಜೆಗೆ ಅರ್ಹತೆಯಿದೆಯೆಂಬುದನ್ನು ತೋರಿಸಿದ್ದಾನೆ. ವಿಶೇಷವಾಗಿ ಹೇಳುವುದಾದರೆ ಏಕಲವ್ಯನ ಹೆಸರನ್ನೂ ಸೂಚಿಸಿರುವುದರಿಂದ ಶಿಶುಪಾಲನ ಗುಣಪಕ್ಷಪಾತಿತ್ವವು ಸ್ಪಷ್ಟವಾಗಿ ಕಂಡುಬರುತ್ತದೆ. ರಾಜರ ಮತ್ತು ರಾಜೇತರರ ಗುಣಗಳನ್ನು ತಿಳಿಸಿ, ಆ ಪೈಕಿ ಯಾವ ಒಂದು ಗುಣವೂ ಕೃಷ್ಣನಲ್ಲಿ ಇಲ್ಲ, ಆದ್ದರಿಂದ ಅವನು ಪೂಜೆಗೆ ಅರ್ಹನಲ್ಲ ಎಂಬುದೇ ಶಿಶುಪಾಲನ ವಾದದ ವಿಶಿಷ್ಟತೆ. ಶಿಶುಪಾಲನ ಈ ಸ್ಪಷ್ಟೋಕ್ತಿಗೆ ದೊರೆತ ಫಲ ಕೃಷ್ಣನ ಚಕ್ರಾಯುಧದಿಂದ ಆತನ ಶಿರಶ್ಛೇದ.



**ಸೂಚನೆ**

ಕರ್ನಾಟಕ ಲೋಚನ ವಿದ್ವತ ಪತ್ರಿಕೆಗೆ ಲೇಖನಗಳನ್ನು ಕಳುಹಿಸುವವರು ಬೆರಳಚ್ಚು ಮಾಡಿದ ಲೇಖನಗಳನ್ನೇ ದಯವಿಟ್ಟು ಕಳುಹಿಸಿ ಕೊಡಬೇಕಾಗಿ ವಿನಂತಿ. ಇದರಿಂದ ಮುದ್ರಣದಲ್ಲಿ ತಪ್ಪುಗಳನ್ನು ನಿಯಂತ್ರಿಸಲು ಸಾಧ್ಯವಾಗುತ್ತದೆ.

# ೨೦ನೆಯ ಶತಮಾನದ ಕನ್ನಡ ಸಂಶೋಧನೆಯ ಕೆಲವು ಹೆಜ್ಜೆಗುರುತುಗಳು

- ಡಾ|| ಟಿ. ವಿ. ವೆಂಕಟಾಚಲ ಶಾಸ್ತ್ರೀ

೧

ಮಮ್ಮಟ ತನ್ನ 'ಕಾವ್ಯಪ್ರಕಾಶ'ದ ವ್ಯಾಖ್ಯೆಯ ಭಾಗದಲ್ಲಿ ಈ ಮಾತು ಹೇಳುತ್ತಾನೆ :

ದ್ವೇ ವರ್ತನೀಂ ಗಿರಾಂ ದೇವ್ಯಾಃ ।
ಶಾಸ್ತ್ರಂ ಚ ಕವಿಕರ್ಮ ಚ ॥
ಪ್ರಜ್ಞೋಪಜ್ಞಂ ತಯೋರಾದ್ಯಂ ।
ಪ್ರತಿಭೋದ್ಭವಮಂತಿಮಮ್ ॥

ಇದರ ಆಶಯ ಹೀಗೆ : ವಾಗ್ದೇವಿಗೆ ದಾರಿಗಳು ಎರಡು:- ೧. ಶಾಸ್ತ್ರ ೨. ಕವಿಕರ್ಮ (ಕಾವ್ಯ). ಮೊದಲನೆಯದು ಪ್ರಜ್ಞೆಯ ಫಲ, ಎರಡನೆಯದು ಪ್ರತಿಭೆಯ ಫಲ. ಶಾಸ್ತ್ರಸಾಹಿತ್ಯದಲ್ಲಿ ಕಾವ್ಯಾರ್ಥದ ವಿಶದತೆಗೆ ನೆರವಾಗುವ ಲಕ್ಷಣಶಾಸ್ತ್ರಗಳು ಒಂದು ವಿಧ; ಲೌಕಿಕಜೀವನಕ್ಕೆ ಬೇಕಾದ ವಸ್ತುಗಳ ಆವಿಷ್ಕಾರ ವಿವರಣೆಗಳನ್ನು ಒಳಗೊಂಡ ಲೋಕೋಪಯೋಗಿ ಶಾಸ್ತ್ರಗಳು ಇನ್ನೊಂದು ವಿಧ. ಈ ಎರಡರಲ್ಲಿಯೂ ಬುದ್ಧಿಯ ಕಾರ್ಯ ಉಂಟು; ತರ್ಕ ವಿವೇಚನೆ ಸಂಯೋಜನೆಗಳುಂಟು.

ಲಕ್ಷಣಶಾಸ್ತ್ರಗಳು ವ್ಯಾಕರಣ ಛಂದಸ್ಸು ಅಲಂಕಾರ ನಿಘಂಟು ಗ್ರಂಥಸಂಪಾದನೆ ಈ ಪಂಚಾಂಗಗಳಿಂದ ಕೂಡಿರುತ್ತವೆ. ಇವನ್ನು ಸಾಹಿತ್ಯಶಾಸ್ತ್ರಗಳೆಂದೂ ಕರೆಯಬಹುದು. ಲೋಕೋಪಯೋಗಿ ಶಾಸ್ತ್ರಗಳ ವ್ಯಾಪ್ತಿಯಲ್ಲಿ ವೈದ್ಯ, ಜ್ಯೋತಿಷ, ವಾಸ್ತು ಯೋಗ, ದೈವ, ಹಸ್ತಾಮುದ್ರಿಕ ಪಾಕ, ಕಾಮ, ರತ್ನ ಮೋಕ್ಷ, ಮಲ್ಲ, ಇಂತಹವೂ, ಅಶ್ವ ಗಜಶಾಸ್ತ್ರಾದಿ ಪ್ರಾಚೀನ ಪದ್ಧತಿಯ ಪ್ರಾಣಿಶಾಸ್ತ್ರಗಳೂ ಸಾಮಾನ್ಯವಾಗಿ ಸೇರುತ್ತವೆ. ವಸ್ತು ಇಲ್ಲವೆ ಸ್ವರೂಪ ಸಂಬಂಧವನ್ನು ಹಿಡಿದು ಇವುಗಳಲ್ಲಿ ಅಂತಃಪ್ರಭೇದಗಳು ಇನ್ನೂ ಇರಬಹುದು. ಉದಾಹರಣೆಗೆ, ಜ್ಯೋತಿಷ್ಯದಲ್ಲಿ ಫಲ, ಪ್ರಶ್ನ, ಶಕುನ, ಮುಹೂರ್ತ, ನಾಡಿ, ಪುರುಷ ಲಕ್ಷಣ, ಸಾಮುದ್ರಿಕ, ವೃಷ್ಟಿ ಹೀಗೆ. ಇವೆಲ್ಲ ಶಾಸ್ತ್ರಗಳು, ವಿಜ್ಞಾನಗಳಲ್ಲ.

ಶಾಸ್ತ್ರ ವಿಜ್ಞಾನದ ಲಕ್ಷಣದಿಂದ ಸ್ವಲ್ಪ ಭಿನ್ನವಾದ್ದು. ವಿಜ್ಞಾನದ ಹಾಗೆ ಕಾರ್ಯಕಾರಣ ಸಂಬಂಧವನ್ನು ಇಲ್ಲಿ ಸ್ಪಷ್ಟವಾಗಿ ಸಾಧಿಸಲು ಸಾಧ್ಯವಿಲ್ಲ. ಶ್ರದ್ಧೆ, ಅನುಭವಪ್ರಾಮಾಣ್ಯ, ಅತೀವ ಲೋಕಜ್ಞತೆ ಇಂತಹ ಅಂತಃಪ್ರಮಾಣವನ್ನೇ ಇಲ್ಲಿ ಹೆಚ್ಚಾಗಿ ಅವಲಂಬಿಸುವುದು ಕಾಣುತ್ತದೆ. ಲಾಕ್ಷಣಿಕವಿರಲಿ, ಲೋಕೋಪಯೋಗಿಯಿರಲಿ, ಶಾಸ್ತ್ರಭೇದಗಳು ಸಂಶೋಧನೆಯ ಕೃಷಿಗೆ ಫಲವತ್ತಾದ ಕ್ಷೇತ್ರಗಳು.

ಕಾವ್ಯಮೀಮಾಂಸೆಯಲ್ಲಿ ರಾಜಶೇಖರನ ಮಾತೊಂದಿದೆ. "ಕಾವ್ಯಗೋಷ್ಠಿಗಳ ನಡುವೆ ಶಾಸ್ತ್ರವಾದಗಳ ಚರ್ಚೆ ಜರುಗುತ್ತಿರಬೇಕು. ಕಾವ್ಯ ಮತ್ತು ಶಾಸ್ತ್ರಗಳಲ್ಲಿ ಚರ್ಚೆಗಳಾದಮೇಲೆ ವಿಜ್ಞಾನಿಗಳನ್ನು ಪ್ರೋತ್ಸಾಹಿಸಬೇಕು" ಎಂದು. ಉಜ್ಜಯಿನಿಯಲ್ಲಿ ಕಾಳಿದಾಸ ಭಾರವಿ ಮೊದಲಾದವರನ್ನು ಪರೀಕ್ಷಿಸಿದ ಹಾಗೆಯೇ ಪಾಟಲೀಪುತ್ರದಲ್ಲಿ ಪಾಣಿನಿ ಪಿಂಗಲ ವರರುಚಿ ವ್ಯಾಡಿ ಮೊದಲಾದ ಶಾಸ್ತ್ರಕಾರರನ್ನು ಪರೀಕ್ಷಿಸಿದ ಮೇಲೆಯೇ ಅವರು ವಿಶ್ವವಿಖ್ಯಾತರಾದರು ಎನ್ನುತ್ತಾನೆ, ಅವನು.

೨

ಸಂಶೋಧನೆಯ ಸ್ವರೂಪವನ್ನೇ ಶಾಸ್ತ್ರೀಯವಾಗಿ ವಿವರಿಸುವುದಲ್ಲದೆ ಒಂದೊಂದೂ ಅಭ್ಯಾಸ ವಿಷಯಕ್ಕೆ ಅನುಗುಣವಾಗಿ ಅದರ ಸ್ವರೂಪವನ್ನೂ ಕ್ರಮಗಳನ್ನೂ ವಿಶದಪಡಿಸುವ ಹಲವಾರು ಗ್ರಂಥಗಳು ಇಂಗ್ಲಿಷ್ ಭಾಷೆಯಲ್ಲಿವೆ. ಕನ್ನಡದಲ್ಲಿ ಅಭ್ಯಾಸವಿಷಯಕ್ಕೆ ಸಂಬಂಧಿಸಿದ ರಚನೆಗಳು ಹೆಚ್ಚಾಗಿಲ್ಲ.

ಸಾಧಾರಣರೀತಿಯಲ್ಲಿ ಸಂಶೋಧನೆಯ ಸ್ವರೂಪವನ್ನು ವಿವೇಚಿಸುವ ಕೆಲವು ಗ್ರಂಥಗಳು ಕನ್ನಡದಲ್ಲಿ ಉಂಟು. ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆ ೧೯೬೭ರಲ್ಲಿ ಪ್ರಕಟಿಸಿದ ಎಂ. ಚಿದಾನಂದ ಮೂರ್ತಿಗಳ 'ಸಂಶೋಧನೆ' ಈ ತೆರನ ಗ್ರಂಥಗಳಲ್ಲಿ ಮೊದಲನೆಯದು. ಬಳಿಕ ಸಂಶೋಧನ ಶಾಸ್ತ್ರ(ಹೊಸ್ಕರೆ ಶಿವಸ್ವಾಮಿ), 'ಸಂಶೋಧನ ವಿಧಾನ' (ಪ್ರ.ವಿ. ಕುಲಕರ್ಣಿ ಮುಂ.), 'ಸಂಶೋಧನ ವ್ಯಾಸಂಗ' (ಬಿ. ವಿ. ಶಿರೂರ), 'ಸಂಶೋಧನ ಸ್ವರೂಪ' (ಬಿ. ವಿ. ಶಿರೂರ), 'ಸಂಶೋಧನ ಮಾರ್ಗ' (ಮಹಾಬಲೇಶ್ವರ ರಾವ್), 'ಸಂಶೋಧನರಂಗ' (ತಾಳ್ತಜೆ ವಸಂತ ಕುಮಾರ) ಹೀಗೆ ಕೆಲವು ಗ್ರಂಥಗಳು ಬಂದಿವೆ. 'ಶ್ರೀಮುಖ', 'ಮಹಾಮಾರ್ಗ' ಈ ಅಭಿನಂದನಗ್ರಂಥಗಳಲ್ಲಿ ಸಹ ಒಂದು ಶಾಸ್ತ್ರ ವಿಷಯವಾಗಿ ಸಂಶೋಧನೆಯನ್ನು ವಿವೇಚಿಸಿರುವ ಬರಹಗಳಿವೆ. ಈ ಮೇಲೆ ಹೇಳಿದ ಹೆಚ್ಚಿನ ಪುಸ್ತಕಗಳ ಕರ್ತೃಗಳು ಸಾಹಿತಿಗಳಾದುದರಿಂದ ಅಲ್ಲಿ ಭಾಷಾ ಸಾಹಿತ್ಯಗಳ ದೃಷ್ಟಿಧೋರಣೆಗಳು ಹೆಚ್ಚಾಗಿ ಕೆಲಸಮಾಡಿವೆ ಎನ್ನಬಹುದು. ಡಾ|| ಎ. ವಿ. ವೆಂಕಟರತ್ನಂ - ಎಂ.ಬಿ. ಪದ್ಮ ಇವರ 'ಇತಿಹಾಸಸಂಶೋಧನಾ ಮಾರ್ಗ' ಎಂಬ ದೊಡ್ಡ ಗ್ರಂಥ ಸಾಮಾನ್ಯತತ್ವಗಳ ಪ್ರಸ್ತಾವವಿದ್ದೂ ಇತಿಹಾಸವಿಷಯಗಳಲ್ಲಿ ಸಂಶೋಧನೆ ನಡಸುವವರಿಗೆ ಮಾರ್ಗದರ್ಶನ ಮಾಡುತ್ತದೆ.

ಈಚೆಗೆ ಬಿ.ಎಂ.ಶ್ರೀ. ಪ್ರತಿಷ್ಠಾನ ಅಂತರಶಿಸ್ತೀಯ ಸಂಶೋಧನ ವಿಧಿವಿಧಾನಗಳನ್ನು ಕುರಿತ ಹಾಗೆ ೧೯೯೭ರಲ್ಲಿ ಏರ್ಪಡಿಸಿದ ವಿಶೇಷೋಪನ್ಯಾಸಗಳನ್ನು ಪ್ರತ್ಯೇಕವಾಗಿ ಪುಸ್ತಕವಾಗಿ ಪ್ರಕಟಿಸಿದೆ (೧೯೯೯). ಸಂಶೋಧನೆ ಏಕಮುಖವಾಗದೆ, ಏಕವಿಷಯನಿಷ್ಠವಾಗದೆ ಬೇರೆಬೇರೆ ಶಾಸ್ತ್ರಗಳ ವಿಧಿ ವಿಧಾನಗಳನ್ನೂ ಕೂಡಿಸಿಕೊಂಡರೆ ಹೆಚ್ಚು ಫಲಪ್ರದ ಎನ್ನುವ ಚಿಂತನೆ ಈಗ ೨-೩ ದಶಕಗಳಿಂದ ನಮ್ಮಲ್ಲಿ ಹೆಚ್ಚುತ್ತಿದೆ. ಈ ದಿಕ್ಕಿನಲ್ಲಿ ಕೆಲಸ ಇನ್ನೂ ತಕ್ಕ ಪ್ರಮಾಣದಲ್ಲಿ ಗಂಭೀರವಾಗಿ ನಡೆಯಬೇಕಾಗಿದೆ. ಸಾಹಿತ್ಯ ಸಂಶೋಧನೆ ಯಶಸ್ವಿಯಾಗಬೇಕಾದರೆ, ಅದು ಜಾನಪದ, ತೌಲನಿಕ ಧರ್ಮಗಳು, ಇತಿಹಾಸ, ಭಾಷಾವಿಜ್ಞಾನ, ಸಮಾಜಶಾಸ್ತ್ರ, ಮನಶ್ಶಾಸ್ತ್ರ ಹೀಗೆ ಹಲವು ಶಿಸ್ತುಗಳ ನೆರವು ಬೇಡಬೇಕಾಗುತ್ತದೆ ಎನ್ನುವುದು ಈಗ ತಿಳಿದ ಸಂಗತಿ.

ಕನ್ನಡ ಭಾಷೆ ಸಾಹಿತ್ಯಗಳಲ್ಲಿ ಸಂಶೋಧನಕೃಷಿ ಚೆನ್ನಾಗಿ ನಡೆಯುವಲ್ಲಿ ಗ್ರಂಥಗಳಿಗಿಂತ ಲೇಖನಗಳ ಪಾತ್ರ ಹೆಚ್ಚು ಎನ್ನಬೇಕು. ಈ ದಿಕ್ಕಿನಲ್ಲಿ ವಿಶ್ವವಿದ್ಯಾನಿಲಯಗಳೂ ವಿದ್ವತ್ ಸಂಸ್ಥೆಗಳೂ ಆಗಿಂದಾಗ್ಗೆ ವಿಚಾರ ಸಂಕಿರಣಗಳನ್ನು ರಾಜ್ಯ ಮತ್ತು ರಾಷ್ಟ್ರ ಮಟ್ಟಗಳಲ್ಲಿ ನಡಸಿ, ಕೆಲವೊಮ್ಮೆ ಅಂತರರಾಷ್ಟ್ರ ಮಟ್ಟದಲ್ಲಿಯೂ ಏರ್ಪಡಿಸಿ ತಂತಮ್ಮ ಪ್ರಕಟನ ವಿಭಾಗಗಳ ಮೂಲಕ ಇದಕ್ಕೆ ಒತ್ತಾಸೆ ನೀಡಿವೆ. ವಿದ್ವತ್ ಪತ್ರಿಕೆಗಳ ಕೊಡುಗೆಯಂತೂ ಅಸಾಧಾರಣವಾದುದು.

ಕರ್ನಾಟಕ ಮತ್ತು ಹೊರ ಪ್ರಾಂತಗಳ ವಿಶ್ವವಿದ್ಯಾನಿಲಯಗಳು, ಸಾಹಿತ್ಯ ಪರಿಷತ್ತು, ಮಿಥಿಕ್ ಸೊಸೈಟಿ, ಬಿ.ಎಂ.ಶ್ರೀ. ಪ್ರತಿಷ್ಠಾನ, ಗೋಖಲೆ ಸಾರ್ವಜನಿಕ ಸಂಸ್ಥೆ, ಧಾರವಾಡದ

ವಿದ್ಯಾವರ್ಧಕ ಸಂಘ, ಅಕಾಡೆಮಿಗಳು, ಲೇಖಕರ ಸಂಘ ಸಂಸ್ಥೆಗಳು ಈ ನೆಲೆಯಲ್ಲಿ ಕೆಲಸ ಮಾಡಿವೆ. ಈ ಶತಮಾನದ ಆರಂಭಭಾಗದಿಂದ ಪ್ರಬುದ್ಧ ಕರ್ಣಾಟಕ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಕನ್ನಡ ಭಾರತಿ, ಸಾಧನೆ, ಅಧ್ಯಯನ ಈ ಪತ್ರಿಕೆಗಳೂ ಜೀವನ, ಕನ್ನಡ ನುಡಿ, ಜಯಕರ್ನಾಟಕ, ಜಯಂತಿ, ಶಿವಾನುಭವ, ಶರಣಸಾಹಿತ್ಯ ಇಂತಹ ಅವೆಷ್ಟೋ ಪತ್ರಿಕೆಗಳೂ ಈಗಂತೂ ನಷ್ಟಪ್ರಾಯವೇ ಆಗಿರುವ ಪ್ರಾಚೀನ ಕರ್ನಾಟಕ, ವಿದ್ಯಾದಾಯಿನಿ, ವಾಗ್ಭೂಷಣ ಮುಂತಾದ ಹಳಗಾಲದ ಪತ್ರಿಕೆಗಳೂ ಕನ್ನಡ ಸಂಶೋಧನೆಯ ಬೆಳವಣಿಗೆಗೆ ಅನನ್ಯವಾಗಿ ಸಹಾಯಮಾಡಿವೆ, ಮಾಡುತ್ತಿವೆ. QJMS, JKU, MUM/HJMU, AOR, I.A., AOR. ಇಂತಹ ಇಂಗ್ಲಿಷ್ ಪತ್ರಿಕೆಗಳು ಕರ್ನಾಟಕದ ಸಂಶೋಧನ ವಿಷಯಗಳನ್ನು ಹೆಚ್ಚಾಗಿ ಒಳಗೊಂಡಿರುವುದು ಕಾಣುತ್ತದೆ. ಈಚೆಗೆ ಗುಲಬುರ್ಗಾದಿಂದ ಸಂಶೋಧನೆಗಾಗಿ ಮೀಸಲಾದ 'ಸಂಶೋಧನ ವ್ಯಾಸಂಗ' ಎಂಬ ಪತ್ರಿಕೆ ಬರುತ್ತಿದ್ದು, ಈ ಕ್ಷೇತ್ರದ ಚಟುವಟಿಕೆಗಳನ್ನು ಪರಿಚಯಿಸುತ್ತಿದೆ. ಕನ್ನಡದಲ್ಲಿ ವಿದ್ವತ್ತೆಯ ಇತಿಹಾಸ ರಚಿತವಾದರೆ, ಅಲ್ಲಿ ಪತ್ರಿಕೆಗಳ ಸ್ಥಾನ ಒಂದು ಪ್ರತ್ಯೇಕ ಅಧ್ಯಾಯದ ವಿಷಯವೇ ಆಗುತ್ತದೆ.

೩

ವ್ಯಾಕರಣದ ಕ್ಷೇತ್ರ : ಈವರೆಗೆ ಈ ಸಂಬಂಧದಲ್ಲಿ ನಡೆದಿರುವ ಸಂಶೋಧನೆಗಳು 'ಕವಿರಾಜ ಮಾರ್ಗ'ದೊಳಗಿನ ವ್ಯಾಕರಣವಿಚಾರಗಳನ್ನೂ ನಾಗವರ್ಮಾದ್ಯರ ರಚನೆಗಳನ್ನೂ ಒಳಗೊಂಡು ನಡೆದಿದೆ. ಪ್ರಾಚೀನ ವ್ಯಾಕರಣಗ್ರಂಥಗಳ ಪರಿಷ್ಕರಣದಲ್ಲಿ ಮೊದಮೊದಲ ಸಂಪಾದಕರು, ಕಿಟ್ಟೆಲ್ ರೈಸ್ ಆರ್. ನರಸಿಂಹಾಚಾರ್ ಈ ಮೊದಲಾದವರು, ಹಸ್ತಪ್ರತಿಗಳಲ್ಲಿ ಹುದುಗಿ ಕುಳಿತಿದ್ದ ಪಠ್ಯಗಳನ್ನು ಬೆಳಕಿಗೆ ತರುವುದರಲ್ಲಿಯೇ ಹೆಚ್ಚಿನ ಪರಿಶ್ರಮ ಪಾಂಡಿತ್ಯಗಳನ್ನು ಪ್ರಕಟಿಸಿದರಲ್ಲದೆ, ವ್ಯಾಕರಣ ವಸ್ತುವಿನ ವಿಮರ್ಶೆ ವಿಶ್ಲೇಷಣೆಗಳ ಕಡೆಗೆ ಅಲ್ಲವೆಂದು ಹೇಳಬೇಕಾಗಿದೆ. ಇವರು ಕೃತಿಕಾರ, ಕೃತಿಯ ಪರಿಚಯ, ಪಾಠಸಾಮಗ್ರಿಯ ವಿವರಣೆ ಈ ಕೆಲವು ಸಂಗತಿಗಳ ಕಡೆಗೇ ಹೆಚ್ಚು ಗಮನ ಹರಿಸಿದ್ದು, ಮೊದಲ ಘಟ್ಟದಲ್ಲಿ ಸ್ವಾಭಾವಿಕವೇ ಆಗಿದೆ. ಕನ್ನಡದ ಅಭ್ಯಾಸಿಗಳನ್ನು ಗಮನದಲ್ಲಿಟ್ಟುಕೊಂಡು ಕುಂಡಲಗಿರಿ ಆಚಾರ್ಯ - ಪೂಜಾರ ಇಂಥವರು ಶಬ್ದಾನುಶಾಸನದ ವಸ್ತುವಿವರಣೆಯಲ್ಲಿ ಶೋಧಕದೃಷ್ಟಿ ಬಹು ಹಿಂದೆಯೇ ಪ್ರಕಟಿಸಿದ್ದು ಒಂದು ವಿಶೇಷ. ಕಿಟ್ಟೆಲ್ ರೈಸ್ ಅವರ ಸಂಶೋಧನೆಯ ಹೊಸ ದೃಷ್ಟಿಯನ್ನು ಮೈಗೂಡಿಸಿಕೊಂಡು ಮುನ್ನಡೆದ ಆರ್. ನರಸಿಂಹಾಚಾರ್ಯರು ತಾವು ಹೊರತಂದ ಪರಿಷ್ಕರಣಗಳಲ್ಲಿ ಶುದ್ಧಪಾಠ ವಸ್ತು ವಿಮರ್ಶೆಗಳಿಗೆ ಬೇಕಾದ ಸಂಶೋಧನಸಾಮಗ್ರಿ ಒದಗಿಸಿದ್ದು ಮುಂದಿನ ವ್ಯಾಕರಣ ಸಂಶೋಧನೆಗಳಿಗೆ ಹೆದ್ದಾರಿಗಳನ್ನು ತೆರೆಯಿತೆನ್ನಬಹುದು. ಆರಂಭಗೊಂಡ ಅನುಬಂಧಗಳ ನೆರವಂತೂ ಅನನ್ಯವಾದುದು.

ಸಾಂಪ್ರದಾಯಿಕ ವ್ಯಾಕರಣದೃಷ್ಟಿಗೆ ಹಳೆಯ ಪದ್ಧತಿಯ ಭಾಷಾಶಾಸ್ತ್ರೀಯ ದೃಷ್ಟಿಯನ್ನೂ ಕೂಡಿಸಿ ತಮ್ಮ ಭಾಷಿಕ ಸಮಾಲೋಚನೆಗಳನ್ನು ಈ ಶತಮಾನದ ಆರಂಭಕಾಲಕ್ಕೆ ಸ್ವಲ್ಪ ಮೊದಲಿನಿಂದಲೇ ಪ್ರಕಟಿಸತೊಡಗಿದ್ದು ಗಮನಾರ್ಹವಾದ ಸಂಗತಿ. ಟಿ. ಜಿ. ಕೃಷ್ಣಾಚಾರ್ಯ, ಆರ್. ರಘುನಾಥರಾವ್, ಆರ್. ನರಸಿಂಹಾಚಾರ್, ಬಿ. ಎಂ. ಶ್ರೀಕಂಠಯ್ಯ, ಕುಂಡಲಗಿರಿ ಆಚಾರ್ಯ, ತೋಗೆರೆ ನಂಜುಂಡ ಶಾಸ್ತ್ರಿ, ಕೆ. ವರದಾಚಾರ್ಯ, ಶಿವಶಂಕರ ಶಾಸ್ತ್ರಿ, ಎಂ. ಶಾಮರಾವ್, ಎಂ. ಎಸ್. ಪುಟ್ಟಣ್ಣ, ನಾ. ಶ್ರೀ. ರಾಜಪುರೋಹಿತ, ಮ. ಪ್ರ. ಪೂಜಾರ, ಬಿ. ಕೃಷ್ಣಪ್ಪ, ಟಿ. ಶ್ರೀನಿವಾಸ ರಾಘವಾಚಾರ್ಯ, ಡಿ.

ಕೆ. ಭೀಮಸೇನರಾವ್, ಡಿ. ವಿ. ಜಿ., ಮರಿಯಪ್ಪ ಭಟ್ಟ, ಎಚ್. ನಾರಾಯಣರಾವ್, ಕೆ. ಶಂಕರಭಟ್ಟ, ಡಿ. ಎಲ್. ನರಸಿಂಹಾಚಾರ್, ತೀ. ನಂ. ಶ್ರೀಕಂಠಯ್ಯ, ಪ್ರ. ಗೋ. ಕುಲಕರಣಿ, ಗೋಪಾಲಕೃಷ್ಣ ಭಟ್ಟ, ಸೇಡಿಯಾಪು ಕೃಷ್ಣಭಟ್ಟ, ಶ್ರೀಕೃಷ್ಣಭಟ್ಟ ಈ ಕೆಲವರ ಬರಹಗಳಲ್ಲಿ ಅದನ್ನು ಗಮನಿಸಬಹುದಾಗಿದೆ.

ವರ್ಣಸಮಾಮ್ನಾಯ, ಭಾಷಾವಸ್ಥೆಗಳು, ಗ್ರಾಂಥಿಕಪ್ರಯೋಗಗಳು, ಆಡುಮಾತು, ಪ್ರಚಲಿತಭಾಷೆಗೆ ವ್ಯಾಕರಣದ ಕಟ್ಟು, ದಕ್ಷಿಣೋತ್ತರ ಮಾರ್ಗಗಳು, ನುಡಿಯ ಏಕರೂಪತೆ, ಭಾಷಾಲಿಪಿ, ಶಬ್ದಗಳ ಸಾಧುತ್ವ, ವಿಶಿಷ್ಟ ವೈಯಾಕರಣ ರೂಪಗಳು, ಭಾಷಾಸ್ಕಂಧ ವಿಚಾರ, ಪ್ರಾಚೀನ ವ್ಯಾಕರಣಗಳ ಕರ್ತೃತ್ವ, ವೃತ್ತಿವ್ಯಾಖ್ಯಾನ, ಪಾಠವಿಚಾರ ಮತ್ತು ಪ್ರಕ್ರಿಯಾವಿಚಾರ ಈ ಮೊದಲಾದವು ವಿಮರ್ಶೆ ಸಂಶೋಧನೆಗಳಿಗೆ ವಿಷಯಗಳಾಗಿವೆ.

ಎಚ್. ಚನ್ನಕೇಶವ ಅಯ್ಯಂಗಾರ್, ತೆಕ್ಕುಂಜ ಗೋಪಾಲಕೃಷ್ಣ ಭಟ್ಟ, ಎ. ಎಸ್. ಕೆದಿಲಾಯ, ಡಿ. ಕೆ. ಭೀಮಸೇನರಾವ್, ಬಿ. ಪದ್ಮನಾಭ ಶರ್ಮ, ಜಿ. ಎಸ್. ಕುಳ್ಳಿ, ಎಂ. ವಿ. ಸೀತಾರಾಮಯ್ಯ, ಬಿಳಿಗಿರಿ, ದೊಡ್ಡಸ್ವಾಮಿ, ವಿ. ಶಿವಾನಂದ, ಶ್ರೀಕೃಷ್ಣ ಭಟ್ಟ, ತೆಕ್ಕು ಜೆ. ಗೋಪಾಲಕೃಷ್ಣ ಭಟ್ಟ, ಕುಂಡಲಗಿರಿ ಆಚಾರ್ಯ, ಮ. ಪ್ರ. ಪೂಜಾರ, ಕುಶಾಲಪ್ಪಗೌಡ ಈ ಕೆಲವರು ಪ್ರಾಚೀನ ಕನ್ನಡ ವ್ಯಾಕರಣ ಪಠ್ಯಗಳ ವಸ್ತು ವಿಮರ್ಶೆಯಲ್ಲಿ ಅನನ್ಯವಾಗಿ ತಮ್ಮ ಶೋಧನೆಗಳನ್ನು ಪ್ರಕಟಿಸಿದ್ದಾರೆ. ಕೆ. ವರದಾಚಾರ್ಯರಂತೂ ತಮ್ಮ ಜೀವಮಾನದ ಬಹುಭಾಗವನ್ನು ಭಟ್ಟಾಕಳಂಕನ ಕೃತಿಯ ಕರ್ತೃತ್ವ ಸಮಸ್ಯೆಗೇ ವಿನಿಯೋಗಿಸಿದ್ದರು. ಅವರ ಕಾಲದಲ್ಲಿ ಅಲ್ಲವಾದರೂ ಈಗ ಅವರ ವಾದ ಪುರಸ್ಕಾರಕ್ಕೆ ಯೋಗ್ಯವೆಂದು ಮನವರಿಕೆಯಾಗುತ್ತಿರುವುದು ಸಮಾಧಾನದ ಸಂಗತಿ.

೪

ಭಾಷಾಶಾಸ್ತ್ರದ ಕ್ಷೇತ್ರ : ವ್ಯಾಕರಣಶಾಸ್ತ್ರದ ಆಧುನಿಕ ಕಾಲದ ಬೆಳವಣಿಗೆಯ ಈ ಕ್ಷೇತ್ರ ಒಂದು ಅಧ್ಯಯನ ಪ್ರಕಾರವಾಗಿ ಚಾಲನೆ ಪಡೆದದ್ದು ೨೦ನೆಯ ಶತಮಾನದ ಮಧ್ಯಭಾಗದಲ್ಲಿ; ಪುಣೆಯ ಡೆಕನ್ ಕಾಲೇಜು ಮೊದಲು ಮಾಡಿದ ಬೇಸಿಗೆ ಶಿಬಿರಗಳ ಮೂಲಕವಾಗಿ ಎಸ್. ಎಂ. ಖತ್ರೆ ಈ ಕ್ಷೇತ್ರದ ಅಧ್ಯಯನ ಪ್ರಸಾರಗಳಿಗೆ ನೇತಾರರಾಗಿ ಪರಿಣಮಿಸಿದ್ದು ಈಗ ಇತಿಹಾಸದ ವಿಷಯ.

ಹ್ಯಾಂಡ್ಸ್, ಕೇರಿ, ಮೆಕೆರಲ್ ಮುಂತಾದ ವಿದೇಶೀಯರೂ ಶ್ರೀರಂಗಪಟ್ಟಣಂ ಕೃಷ್ಣಮಾಚಾರ್ಯ, ಧೋಂಡೋ ನರಸಿಂಹ ಮುಳಬಾಗಲ, ಪಂಜೆ, ಬಿ. ಮಲ್ಲಪ್ಪ, ತೀ. ನಂ. ಶ್ರೀಕಂಠಯ್ಯ, ಎ. ಎನ್. ನರಸಿಂಹಯ್ಯ ಈ ಮೊದಲಾದ ದೇಶೀಯರೂ ಬರೆದ ಇಂಗ್ಲಿಷ್ ಕನ್ನಡ ಹೊಸಗನ್ನಡ ವ್ಯಾಕರಣಗಳೂ ಕಿಟ್ಟೆಲ್ ಇಂಗ್ಲಿಷ್ ಭಾಷೆಯಲ್ಲಿ ರಚಿಸಿರುವ ವಿಸ್ತೃತ ಕನ್ನಡ ವ್ಯಾಕರಣವೂ ಸಾಂಪ್ರದಾಯಿಕ ಕನ್ನಡ ವ್ಯಾಕರಣದ ಗಡಿರೇಖೆಗಳನ್ನು ಉಲ್ಲಂಘಿಸಿ ಮುನ್ನಡೆದ ಮೊದಮೊದಲ ಪ್ರಯತ್ನಗಳಾಗಿವೆ.

ಭಾಷಾಶಾಸ್ತ್ರ ಅಧ್ಯಯನದ ಅಲೆಗಳು ಕನ್ನಡ ಸಂಶೋಧನೆಯ ಸೀಮೆಯನ್ನು ಬಂದು ಅಪ್ಪಳಿಸುವ ಮುನ್ನ ಆರ್. ನರಸಿಂಹಾಚಾರ್ಯರ ಉಪನ್ಯಾಸ ಸಂಗ್ರಹವಾದ A History of Kannada

Language (೧೯೨೬-೨೭) ಎಂಬುದೂ, ಆರ್. ರಘುನಾಥ ರಾವ್, ಆರ್. ವಿ. ಜಾಗೀರ್‌ದಾರ್, ಆರ್. ವೈ. ಧಾರವಾಡಕರ, ಶಂಬಾ ಜೋಷಿ, ಅವರ ಪುಸ್ತಕಗಳೂ 'ಕನ್ನಡ ಕೈಪಿಡಿ'ಯೊಳಗಿನ ಕನ್ನಡ ಭಾಷಾಚರಿತ್ರೆಯೂ ಹೊಸ ದಿಕ್ಕಿನಲ್ಲಿ ದೃಢವಾಗಿ ಹೆಜ್ಜೆ ಹಾಕಿದ ಹರಿಕಾರ ಪ್ರಯತ್ನಗಳೆನ್ನಬಹುದು. ಆದರೆ ಇಲ್ಲಿ ಅನುಸರಿಸಿದ್ದು ವಿಶೇಷವಾಗಿ ಚಾರಿತ್ರಿಕ ಇಲ್ಲವೆ ತೌಲನಿಕ ವಿಧಾನಗಳು. ಈ ನಡುವೆ ಎ. ಎನ್. ನರಸಿಂಹಯ್ಯನವರೂ ಅವರನ್ನು ಅನುಸರಿಸಿ ಜಿ. ಎಸ್. ಗಾಯಿಯವರೂ ಕನ್ನಡ ಶಾಸನಗಳ ಭಾಷೆಯನ್ನು ವರ್ಣನಾತ್ಮಕ ವಿಧಾನದಲ್ಲಿ ವಿಶ್ಲೇಷಿಸುವ ಪ್ರಯತ್ನಗಳನ್ನು ನಡೆಸಿದ್ದು ಈ ವಿಧದ ಅಧ್ಯಯನಕ್ಕೆ ಮುಂದೆ ಚಾಲನೆ ನೀಡಿತು. ಈ ಚಾಲನೆಗೆ ಅಗತ್ಯವಾದ ವೇಗ ವ್ಯಾಪ್ತಿಗಳು ಕೂಡಲೇ ಸಿಕ್ಕ ಹಾಗೆ ತೋರುವುದಿಲ್ಲ. ಆದರೆ ಭಾಷಾಶಾಸ್ತ್ರ ಅಧ್ಯಯನದಲ್ಲಿ ಒಂದು ಶಿಸ್ತು ಎನ್ನುವಂತೆ ಬೆಳೆದಮೇಲೆ ಕುಶಾಲಪ್ಪ ಗೌಡ, ರಾಮಸ್ವಾಮಿ, ನೇಗಿನಹಾಳ, ವಿಶಾಲಾಕ್ಷಿ ಮೊದಲಾದವರು ಇದನ್ನು ಮುನ್ನಡಸಿದರು. ಶಾಸನಗಳ ಭಾಷೆ ಹೀಗೆ ವಿಶ್ಲೇಷಣೆಗೆ ಒಳಗಾದುದು ಒಂದು ಮುಖವಾದರೆ ಸಾಹಿತ್ಯಕೃತಿಗಳ ಭಾಷೆಯನ್ನು ಬಿ. ರಾಮಚಂದ್ರರಾವ್, ಬಿ. ಬಿ. ರಾಜಪುರೋಹಿತ, ಸಿ. ಓಂಕಾರಪ್ಪ, ಕುಶಾಲಪ್ಪ ಗೌಡ, ಸವದತ್ತಿಮಠ, ಸಿ. ಎಸ್. ರಾಮಚಂದ್ರ, ಈ ಕೆಲವರು ವಿಶ್ಲೇಷಣೆಗೆ ಒಳಪಡಿಸಿದ್ದು ಇನ್ನೊಂದು ಮುಖವೆನ್ನಬಹುದು. ಹಾಗೆಯೇ ವಿಲಿಯಂ ಬ್ರೈಟ್ ಅವರ An Outline of Colloquial Kannada ೧೯೫೮ರಲ್ಲಿ ಬಂದಮೇಲೆ ಆಡುಮಾತು, ಪ್ರಾದೇಶಿಕ ಭಾಷಾಭೇದಗಳು, ಉಪಭಾಷೆಗಳು ಈ ದಿಕ್ಕಿನಲ್ಲಿ ಕೆಲಸ ಮಾಡುವುದಕ್ಕೆ ಹೆಚ್ಚಿನ ಚಾಲನೆ ದೊರೆಯಿತು. ಹಿರೇಮಠ, ಆಂಡ್ರನೋವ್, ಮೆಕರ್ಮಾಕ್, ಹಾ. ಮಾ. ನಾಯಕ, ಕೆಂಪೇಗೌಡ, ಬಿ. ನಂ. ಚಂದ್ರಯ್ಯ, ಸೋಮಶೇಖರ ಗೌಡ, ಯು. ಪಿ. ಉಪಾಧ್ಯಾಯ, ಎ. ಎಸ್. ಆಚಾರ್ಯ ಮೊದಲಾದವರು ಈ ಕ್ಷೇತ್ರವನ್ನು ಸಮೃದ್ಧಗೊಳಿಸಿದರು. ಪುಣೆಯ ಡೆಕನ್ ಕಾಲೇಜು ಬೇರೆ ಬೇರೆ ಪ್ರದೇಶಗಳ ಹಾಗೂ ಸಾಮಾಜಿಕ ಸ್ತರಗಳ ಬಗೆಗೆ ಪುಸ್ತಕ ಮಾಲೆಯನ್ನೇ ಹೊರತಂದುದು ವಿಶೇಷವಾಗಿ ಗಮನಾರ್ಹವಾದುದು. ಈ ಮಾಲೆಯ ಕಣಜವನ್ನು ಮೇಲೆ ಹೇಳಿದ ಒಬ್ಬೊಬ್ಬರೂ ಸೇರಿದಂತೆ ಆರ್. ಮಹಾದೇವನ್, ಡಿ. ಎನ್. ಎಸ್. ಭಟ್ ಈ ಕೆಲವರೂ ಕೈಕೂಡಿಸಿ ತುಂಬಿದ್ದಾರೆ.

ಸ್ವತಂತ್ರವಾಗಿ ಸಿ. ಆರ್. ಶಂಕರನ್ ಕನ್ನಡದ ಕೆಲವು ಭಾಷಾಶಾಸ್ತ್ರ ಸಮಸ್ಯೆಗಳನ್ನು ಚರ್ಚಿಸಿದರೆ, ಸೇಡಿಯಾಪು ಕನ್ನಡ ವರ್ಣಮಾಲೆಯನ್ನು ತಲಸ್ಪರ್ಶಿಯಾಗಿ ವಿವೇಚಿಸಿದರು. ಮಾಸ್ತಿ ನರಸಿಂಗರಾಯರು ನಡುಗನ್ನಡದ ರಚನೆಯನ್ನು ವಿಶ್ಲೇಷಿಸಿದರು. ಇವು ಪೂರ್ತಿಯಾಗಿ ಹೊಸಕಾಲದ ಭಾಷಾವಿಜ್ಞಾನದ ವಿಧಿವಿಧಾನಗಳನ್ನು ಅನುಸರಿಸಿದವಲ್ಲ ಎಂಬುದು ನಿಜವಾದರೂ ತುಂಬ ಪರಿಶ್ರಮಪೂರ್ಣ ರಚನೆಗಳಾಗಿವೆ.

ಈ ಕ್ಷೇತ್ರ ಈಚಿನ ವರ್ಷಗಳಲ್ಲಿ ಪಡೆದ ಉತ್ತೇಜನದಿಂದ ಹಾಗೂ ಸಾಂಸ್ಥಿಕ ಪ್ರಯತ್ನಗಳ ಫಲವಾಗಿ ಭಾಷಾವಿಜ್ಞಾನದ ಮೂಲ ತತ್ವಗಳು, ವರ್ಣನಾತ್ಮಕ ಭಾಷಾವಿಜ್ಞಾನ, ಬುಡಕಟ್ಟು ಜನರ ಭಾಷೆ, ದ್ರಾವಿಡ ಭಾಷೆಗಳು ಮತ್ತು ಭಾಷಾ ವಿಜ್ಞಾನಿಗಳು, ವಿವಿಧ ಸಾಮಾಜಿಕ ಸ್ತರಗಳ ಭಾಷೆ, ಭಾಷಿಕ ಸ್ವೀಕರಣಗಳು, ಭಾಷೆಯ ದೇಶೀಯತೆ, ಸ್ಥಳ ಮತ್ತು ವ್ಯಕ್ತಿನಾಮ ವಿಚಾರ, ಕನ್ನಡ ಭಾಷೆಯ ರಚನೆ ಮತ್ತು ಇತಿಹಾಸ, ವ್ಯಾಕರಣ ವಿಚಾರಧಾರೆಯ ಇತಿಹಾಸ, ವ್ಯಾಕರಣಗಳ ತೌಲನಿಕ ವಿವೇಚನೆ, ವಿವಿಧ ಸಾಮಾಜಿಕ ಪದಕೋಶಗಳು ಇತ್ಯಾದಿಯಾದ ಹಲವು ವಿಷಯಗಳ ಮೇಲೆ ಏಕಪ್ರಕಾರವಾಗಿ

ಕೆಲಸಗಳು ನಡೆದು ಕ್ಷೇತ್ರ ವಿಸ್ತಾರಗೊಂಡಿತು. ಎ. ಕೆ. ರಾಮಾನುಜನ್, ಬಿಳಿಗಿರಿ, ಚಿದಾನಂದ ಮೂರ್ತಿ, ದೇಜಗೌ, ಎಂ. ವಿ. ಸೀ., ಹಂಪನಾ, ಡಿ. ಎನ್. ಎಸ್. ಭಟ್ಟ, ಕೆ. ವಿ. ನಾರಾಯಣ, ಎ. ಎಸ್. ಕೆದಿಲಾಯ, ಎಂ. ಆರ್. ರಂಗನಾಥ್, ಮಹೇಶ್ವರಯ್ಯ, ಮುರಿಗೆಪ್ಪ, ಕೆಂಪೇಗೌಡ, ಸೋಮಶೇಖರ ಗೌಡ, ರಾಜಪುರೋಹಿತ, ಯು. ಪಿ. ಉಪಾಧ್ಯಾಯ, ಮರಿಯಪ್ಪ ಭಟ್ಟ ಹೀಗೆ ಹಲವರು ಕೆಲಸ ಮಾಡಿ ಕನ್ನಡ ಭಾಷೆಯ ರಚನೆ ಇತಿಹಾಸ ಮತ್ತು ಬೆಳವಣಿಗೆಗಳನ್ನು ವಿಶದಪಡಿಸಲು ಸಹಕರಿಸಿದ್ದಾರೆ. ಡಿ. ಎಲ್. ನರಸಿಂಹಾಚಾರ್, ಪಿ. ಬಿ. ದೇಸಾಯಿ, ರಂ. ಶ್ರೀ. ಮುಗಳಿ, ಚಿದಾನಂದ ಮೂರ್ತಿ, ಹಂಪ ನಾಗರಾಜಯ್ಯ, ವೆಂಕಟಾಚಲ ಶಾಸ್ತ್ರಿ ಇವರೂ ಇನ್ನೂ ಹಲವರೂ ಭಾಷಾಶಾಸ್ತ್ರೀಯವಾಗಿ ಶಬ್ದಾರ್ಥ ವಿಚಾರಗಳ ಚರ್ಚೆಗಳನ್ನು ನಡೆಸಿದ್ದಾರೆ. ಭಾಷಾಶಾಸ್ತ್ರೀಯ ತತ್ವಗಳ ಹಿನ್ನೆಲೆಯಲ್ಲಿ ಸಿದ್ಧವಾಗಿರುವ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಶತಮಾನದ ಬಹುದೊಡ್ಡ ಸಾಧನೆಯೆಂದು ಹೇಳಬಹುದಾಗಿದೆ.

ಭಾಷಾವಿಜ್ಞಾನ ಭರತಖಂಡದ ದೇಶೀಯ ಭಾಷೆಗಳಲ್ಲಿ ಪಡೆದುಕೊಂಡ ಸ್ಥಾನಮಾನಗಳು ಬರುಬರುತ್ತ ಯಾವ ನೆಲೆಗೆ ಏರಿದವು ಎಂದರೆ, ಭಾಷಾವಿಜ್ಞಾನದ ಕ್ಷೇತ್ರದಲ್ಲಿ ಕೆಲಸ ಮಾಡಿದವನೇ ನಿಜವಾಗಿ ವಿದ್ವಾಂಸ, ಸಂಶೋಧಕ ಎಂದು ತಿಳಿಯುವಂತಾಯಿತು. ಕರ್ನಾಟಕದಲ್ಲಿಯೂ ವಿಶ್ವವಿದ್ಯಾನಿಲಯಗಳು ಪ್ರತ್ಯೇಕವಾಗಿ ಇದಕ್ಕೆ ವಿಭಾಗಗಳನ್ನು ತೆರೆದುವು; ಪರಿಣಾಮವಾಗಿ ಮಾರ್ಗದರ್ಶಕರೂ ಸಂಶೋಧಕರೂ ಹೆಚ್ಚಿದರು. ಹೀಗೆ ಭಾಷಾವಿಜ್ಞಾನಕ್ಕೆ ಹೆಚ್ಚಿನಮಟ್ಟಿಗೆ ಆದ್ಯತೆ ಆಧ್ಯತೆಗಳು ಸಲ್ಲುತ್ತ ಬಂದುದು ಸಾಂಪ್ರಾದಯಿಕ ವ್ಯಾಕರಣಗಳ ರಚನೆ ಅಧ್ಯಯನಗಳ ಗತಿ ಕುಂಠಿತವಾಗುವುದಕ್ಕೆ ಕೆಲಮಟ್ಟಿಗೆ ಕಾರಣವಾದುದು ವಸ್ತುಸ್ಥಿತಿ. ಗ್ರಾಂಥಿಕ ಭಾಷೆ, ಸಾಹಿತ್ಯಕ ಭಾಷೆಗಳ ಸ್ವರೂಪವನ್ನು ವ್ಯಾಕರಣದೃಷ್ಟಿಯಿಂದ ವಿವೇಚಿಸುವ ಭಾಷಾವಿದ್ವಾಂಸರು ವ್ಯಾಕರಣದ ಸ್ಥಾನಮಾನಗಳಿಗೆ ಸಮರ್ಥನೆ ನೀಡಿ ವಾದಿಸತೊಡಗಿದ್ದೂ ಸಹ ಕಂಡುಬರುತ್ತದೆ. ಸೇಡಿಯಾಪು ಕೃಷ್ಣಭಟ್ಟ, ಮೊದಲಾದವರ ಬರಹಗಳಲ್ಲಿ ಇಂತಹ ಪ್ರವೃತ್ತಿಯನ್ನು ಕಾಣಬಹುದು. ಅಲ್ಲದೆ ವರ್ಣನಾತ್ಮಕ ಭಾಷಾವಿಜ್ಞಾನದ ತತ್ವಗಳ ಅನ್ವಯದಿಂದಾಗಿ ಭಾಷಿಕ ವಿವೇಚನೆ ಬಹುಮಟ್ಟಿಗೆ ಶುಷ್ಕ, ನೀರಸ, ಯಾಂತ್ರಿಕ ಎಂದಾಗಿ ವಿದ್ವಾಂಸರು ಸಾಹಿತ್ಯದ ಭಾವರಸಗಳ ಪ್ರಪಂಚದಿಂದ ದೂರವಾಗುತ್ತ ಬಂದ ಹಾಗೆಯೂ ತೋರುತ್ತದೆ. ಇದರಿಂದಾಗಿ ಸಾಹಿತ್ಯದ ಅಭ್ಯಾಸಗಳಲ್ಲಿ ವೈಯಾಕರಣರು ಹಾಗೂ ಭಾಷಾವಿಜ್ಞಾನಿಗಳು ಒಬ್ಬರನ್ನೊಬ್ಬರು ಒಪ್ಪದ, ಒಲ್ಲದ ಬಣಗಳಲ್ಲಿ ಬೆಳೆಯುತ್ತ ಹೋಗಿರುವಂತೆಯೂ ತೋರುತ್ತದೆ. 'ಶಬ್ದಮಣಿದರ್ಪಣ'ದಂತಹ ಹಳಗನ್ನಡ ವ್ಯಾಕರಣಾಭ್ಯಾಸದ ಕೈಪಿಡಿಯನ್ನು ಸಹ ತಿರಸ್ಕರಿಸುವ ಧೋರಣೆ ಕೆಲವು ಭಾಷಾವಿಜ್ಞಾನಿಗಳಲ್ಲಿ ಬೆಳೆದಿರುವ ಸೋಜಿಗವನ್ನೂ ನಾವು ಕಾಣುತ್ತೇವೆ.

❧

ಛಂದಸ್ಸಿನ ಕ್ಷೇತ್ರ : ಭಾರತೀಯ ಭಾಷೆಗಳಲ್ಲಿ, ಬಹುಶಃ ತೆಲುಗು ಹೊರತುಪಡಿಸಿ ಉಳಿದೆಲ್ಲ ದೇಶಭಾಷೆಗಳಲ್ಲಿಯೂ, ಅಷ್ಟೇಕೆ ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿ ಸಹ, ಈ ಕ್ಷೇತ್ರ ಅಧ್ಯಯನಕ್ಕೆ ಅಲಕ್ಷಿತವಾಗಿದೆ. ಈ ವಿಷಯದ ವಿವೇಚನೆಯಲ್ಲಿ ಇನ್ನೂ ಪ್ರಚಲಿತವಾಗಿರುವ ದೃಷ್ಟಿಯೆಂದರೆ ಲಾಕ್ಷಣಿಕ ದೃಷ್ಟಿ; ಎಂದರೆ ಛಂದಃಪ್ರಭೇದಗಳನ್ನೂ ಅವುಗಳ ಪ್ರಕಾರಗಳನ್ನೂ ಸಾಮಾನ್ಯವಾಗಿ ಲಕ್ಷಣಿಸುವುದು. ಈಚೆಗೆ ಸ್ವಲ್ಪಮಟ್ಟಿಗೆ ಚಾರಿತ್ರಿಕ ಮತ್ತು ತೌಲನಿಕ ದೃಷ್ಟಿಗಳು

ಕಂಡುಬಂದಿವೆ. ಆದರೆ ಮೀಮಾಂಸಕ ದೃಷ್ಟಿಯಂತೂ ತಕ್ಕ ರೀತಿ ಪ್ರಮಾಣಗಳಲ್ಲಿ ಇನ್ನೂ ಬೆಳದೇ ಇಲ್ಲ.

ಪ್ರಾಚೀನ ಕನ್ನಡ ಛಂದೋಗ್ರಂಥಗಳ ಸಂಪಾದನೆ ಪ್ರಕಟನೆಗಳೇ ಇಲ್ಲಿ ಮೊದಲ ಘಟ್ಟ. ಇದು ಅತ್ಯವಶ್ಯವೂ ಹೌದು. ಆದರೆ ಉಪಲಬ್ಧವಾದ ನಾಲ್ಕು ಛಂದೋಗ್ರಂಥಗಳ ಸಂಪಾದನೆ ಸಹ ಇನ್ನೂ ನಿಖರವಾಗಬೇಕಾಗಿದೆ, ನಿರ್ದಿಷ್ಟವಾಗಬೇಕಾಗಿದೆ. ಇದು ಸಾಧ್ಯವಾದಾಗಲೇ ವಿಮರ್ಶೆ ವ್ಯಾಖ್ಯಾನಗಳು ಸಹ ನಿಷ್ಕೃಷ್ಟವಾಗುವುದು ಸಾಧ್ಯ. ಈ ದಿಕ್ಕಿನಲ್ಲಿ ಕಿಟ್ಟೆಲ್, ರಾಮಾನುಜಯ್ಯಂಗಾರ್, ಶೇಷಯ್ಯಂಗಾರ್, ರಾಮಸ್ವಾಮಿ ಅಯ್ಯಂಗಾರ್, ಮರಿಯಪ್ಪ ಭಟ್ಟ ಈ ಮೊದಲಿಗರ ಪ್ರಯತ್ನಗಳು ಮೊದಲ ತೊಡಕುಗಳಲ್ಲಿಯೂ ದಾರಿ ತೋರಿದುವೆಂಬುದನ್ನು ನೆನೆಯಬೇಕು.

ತುಂಬ ಸಾಂಪ್ರದಾಯಿಕವಾದ ನೆಲೆಯಿಂದ ಛಂದಸ್ಸಂಶೋಧನೆಗೆ ಹೆದ್ದಾರಿಗಳನ್ನು ತೆರೆದ ಮೊದಲಿಗರು ಎಂದರೆ ಬಿ. ಎಂ. ಶ್ರೀ. ಅವರು. ಇವರು ದೇಶೀಯ ಗಣಪದ್ಧತಿಯನ್ನು ಸರಿಯಾಗಿ ನಿರೂಪಿಸಿ ಅದಕ್ಕೆ ಅಂಶಗಣ ಎಂದು ಹೆಸರು ಕೊಟ್ಟಿದ್ದು ಒಂದು ಶ್ಲಾಘ್ಯವಾದ ಆರಂಭ. ಇದನ್ನು ಅವರು ತಮ್ಮ ತಮಿಳು ಭಾಷೆಯ ಪರಿಚಯದಿಂದ ಸಾಧಿಸಿದರು. ಕನ್ನಡ ಛಂದಸ್ಸಿನ ಚರಿತ್ರೆಯನ್ನು ಹೊಸ ದೃಷ್ಟಿಯಿಂದ ಬರೆದು ಕನ್ನಡ ಕೈಪಿಡಿಗೆ ಸೇರಿಸಿದರು. ಇವರ ಶಿಷ್ಯರು ತೀ.ನಂ.ಶ್ರೀ. ಅವರು ಕನ್ನಡದಲ್ಲಿ ಹೊಸಮಟ್ಟುಗಳಿಗಿರುವ ಆವಶ್ಯಕತೆ, ಹೊಸ ಛಂದಸ್ಸಿನ ಲಯಗಳು, ಮಾತ್ರೆ ಮುಡಿ ಪದ್ಮಗಣ ಇವನ್ನು ನಿರೂಪಿಸುವ ಮೂಲಕ ಹೊಸಗನ್ನಡ ಛಂದಸ್ಸಿನ ವಿವೇಚನೆಗೆ ಶ್ರೀಕಾರ ಹಾಕಿದರು ಎನ್ನಬೇಕು, (೧೯೩೦-೬೦).

ಶ್ರೀಯವರ ಸಮಕಾಲದಲ್ಲೇ ಕನ್ನಡ ಛಂದಸ್ಸಿನ ಬಗೆಗೆ ತಮ್ಮ ಶೋಧನೆಗಳನ್ನು ಪ್ರಕಟಿಸಿದವರು ಎಂದರೆ, ಸೇಡಿಯಾಪು ಕೃಷ್ಣಭಟ್ಟರು, ಎ. ವೆಂಕಟಸುಬ್ಬಯ್ಯನವರು ಮತ್ತು ಕುಂದಣಗಾರರು. ದೇಶೀಯ ಛಂದಸ್ಸುಗಳಿಗೆ ಪ್ರಾಶಸ್ತ್ಯವಿತ್ತು, ಅವುಗಳ ಸ್ವರೂಪವನ್ನು ವಿಶದಪಡಿಸಲು ಈ ಮೂವರೂ ಮಾಡಿದ ಪ್ರಯತ್ನಗಳು ಗಣ್ಯವಾದದು. ಸೇಡಿಯಾಪು ತ್ರಿಮೂರ್ತಿಗಣಗಳ ದೇಶೀಯತೆಯನ್ನು ಸಮರ್ಥವಾಗಿ ಸ್ಥಾಪಿಸಿ ಮಟ್ಟುಗಳ ಲಕ್ಷಣವನ್ನು ವಿಶ್ಲೇಷಿಸಿದರು. ಉಳಿದ ಇಬ್ಬರೂ ಕೆಲವು ಛಂದೋಬಂಧಗಳ ಲಕ್ಷಣಗಳ ವಿಶದೀಕರಣಕ್ಕೆ ಶ್ರಮಿಸಿದರು. ಸೇಡಿಯಾಪು ಅವರು ಬಂಧಗಳ ಲಕ್ಷಣವನ್ನು ವಿವೇಚಿಸಿರುವುದು ಹಲವೆಡೆ ವಿವಾದಗ್ರಸ್ತವಾದ ಅಂಶಗಳಿಂದ ಕೂಡಿದ್ದರೂ ಅತೃಪ್ತಿಕರವಾಗಿದ್ದರೂ ಅದೊಂದು ಹರಿಕಾರಲೇಖನವೆಂದು ಹೇಳಬೇಕು. ಈಚಿನ ಅವರ ಉದ್ಘೃಕೃತಿ 'ಛಂದೋಗತಿ' ಲಯ ಗತಿ ಮತ್ತು ಯತಿಗಳ ಸ್ವರೂಪವನ್ನು ಸೂಕ್ಷ್ಮವಾಗಿ ವಿವೇಚಿಸಿರುವ ರಚನೆ. ಸೇಡಿಯಾಪು ಅವರ ಸೂಕ್ಷ್ಮವಾದ ಪರಿಶೀಲನೆ, ತರ್ಕಬದ್ಧವಾದ ನಿರೂಪಣೆಗಳಿಗೆ ಅದೊಂದು ಒಳ್ಳೆಯ ಮಾದರಿ.

ಕುಂದಣಗಾರರ ಮಾರ್ಗದರ್ಶನದಲ್ಲಿ ಸಿದ್ಧವಾದುದು ಕರ್ಕಿ ಅವರ 'ಕನ್ನಡ ಛಂದೋವಿಕಾಸ'. ದೀರ್ಘಕಾಲ ಇದು ಕನ್ನಡ ಛಂದಸ್ಸಿನ ಅಭ್ಯಾಸಿಗಳಿಗೆ ಒಂದು ಮಾರ್ಗದರ್ಶಕ ಕೃತಿಯಾಗಿ ಒದಗಿತು. ಈ ವೇಳೆಗೆ ಜಯಕೀರ್ತಿಯ 'ಛಂದೋನುಶಾಸನ' ದೊರೆತು ಪ್ರಕಟವಾದುದು ದೇಶ್ಯಛಂದಸ್ಸುಗಳ ಸ್ವರೂಪವನ್ನು ತಿಳಿಯಲು ತುಂಬ ಸಹಾಯಕವಾಯಿತು. ಕರ್ಕಿ ಅವನ್ನು ಪಡೆದರು. ಲಕ್ಷಣವಿವರಣೆ, ಬಂಧಗಳ ಪರಸ್ಪರ ಸಂಬಂಧ, ಭಾವಮೌಲ್ಯ, ಪ್ರಭೇದಗಳ ವಿಕಾಸ ಇವೆಲ್ಲ ಇಲ್ಲಿ ಕಾಣಿಸಿದ್ದರಿಂದ, ತುಂಬ ಮಿತಿಗಳ ನಡುವೆಯೂ ಇದರ ಸಾಧನೆ ವಿಶಿಷ್ಟವಾದುದು. ಶತಮಾನದ ಮಧ್ಯಭಾಗದ

ವೇಳೆಗೆ ಬಂದ 'ಜಯದಾಮನ್' ಛಂದಸ್ಸಂಪುಟದಿಂದಲೂ ಮಾಧವ ತ್ರ್ಯಂಬಕ ಪಟವರ್ಧನ್ ಅವರ 'ಛಂದೋರಚನಾ' ಎಂಬ ಸ್ವತಂತ್ರಗ್ರಂಥದಿಂದಲೂ ತೀ.ನಂ.ಶ್ರೀ., ಡಿ. ಎಲ್. ನರಸಿಂಹಾಚಾರ್, ವಿ. ಸೀತಾರಾಮಯ್ಯ ಇವರು ಛಂದೋಬಂಧಗಳ ವಿವೇಚನೆಯಲ್ಲಿ ಹೊಸ ಹೊಳಹುಗಳನ್ನು ಬೀರಿದರು.

ಪ್ರಾಚೀನ ಛಂದೋಗ್ರಂಥಗಳ ಹೊಸ ಪರಿಷ್ಕರಣಗಳು ಸವ್ಯಾಖ್ಯಾನವಾಗಿ ಕಾಣಿಸಿಕೊಳ್ಳಲು ಆರಂಭವಾದಮೇಲೆ ಎಲ್. ಬಸವರಾಜು ಒಂದು ಸಮಗ್ರತೆಯ ದೃಷ್ಟಿಯಿಂದ, ಕುಕ್ಕಿಲ ಕೃಷ್ಣಭಟ್ಟ ಮೊದಲಾದವರು ಬಿಡಿಯಾದ ಸಾಧನೆಗಳಿಂದ ಈ ಕ್ಷೇತ್ರವನ್ನು ಬಿಡದೆ ಮುನ್ನಡಸಿದರು. ಇದು ನಿಜವೇ ಆದರೂ ಶುದ್ಧ ಪಾಠ, ವಿಶದವಾದ ವ್ಯಾಖ್ಯಾನ, ಕುತೂಹಲಕರ ಸಂಗತಿಗಳ ಆವಿಷ್ಕಾರ, ಛಂದೋಬಂಧಗಳಿಗೆ ಪ್ರಾಯೋಗಿಕವಾದ ಅನ್ವಯ ಇವುಗಳ ದೃಷ್ಟಿಯಿಂದ ನಮ್ಮ ಪ್ರಾಚೀನ ಛಂದೋಗ್ರಂಥಗಳು ಇನ್ನೂ ತಮ್ಮ ರಹಸ್ಯಗಳನ್ನು ಪೂರ್ತಿಯಾಗಿ ಬಿಟ್ಟುಕೊಟ್ಟಿಲ್ಲ, ತಮ್ಮ ತೊಡಕುಗಳಿಂದ ಮುಕ್ತವಾಗಿಲ್ಲ. ಇದಕ್ಕೆ ಹೊಸದಾಗಿಯೇ ಪ್ರಯತ್ನಗಳು ನಡೆಯಬೇಕಾಗಿವೆ.

ಕರ್ಕಿಯವರ ಅನಂತರದಲ್ಲಿ ಈ ಕ್ಷೇತ್ರದ ಅಧ್ಯಯನಗಳು ಸುಮಾರು ಎರಡು ದಶಕಗಳ ಕಾಲ ಕ್ಷೀಣವಾಗಿದ್ದುವು ಎಂದೇ ಹೇಳಬೇಕು. ನನ್ನ ಆಸಕ್ತಿಯ ಕ್ಷೇತ್ರವಾದ ಕನ್ನಡ ಛಂದಸ್ಸಿಗೆ ವಿಶೇಷವಾಗಿ ನಾನು ಪ್ರೇರಣೆ ಪಡೆದುದು ಎಂದರೆ, ಪ್ರೊ. ಎಚ್. ಡಿ. ವೇಲಣಕರರಿಂದ, ಅವರ ಸಂಸ್ಕೃತ ಪ್ರಾಕೃತ ಛಂದೋಗ್ರಂಥಗಳ ಪರಿಷ್ಕರಣಗಳ ಪಠ್ಯ, ಪೀಠಿಕೆ, ತಾತ್ಪರ್ಯ ಮತ್ತು ವ್ಯಾಖ್ಯಾನಗಳಿಂದ. ಕನ್ನಡ ಛಂದಸ್ಸು, ಕನ್ನಡ ಛಂದಃಸ್ವರೂಪ, ಕನ್ನಡ ಛಂದೋವಿಹಾರ ಎಂಬ ಮೂರು ಕೃತಿಗಳಲ್ಲಿ ನನ್ನ ಛಂದಸ್ಸಿನ ಅಧ್ಯಯನಗಳು ಅಡಕವಾಗಿವೆ. ಇವುಗಳಲ್ಲಿ ಛಂದೋಬಂಧಗಳ ಲಕ್ಷಣ, ಇತಿಹಾಸ, ತುಲನೆ ಈ ಮೂರೂ ದೃಷ್ಟಿಗಳಲ್ಲಿ ನಾನು ವಿಷಯವಿವೇಚನೆ ನಡಸಿದ್ದೇನೆ. ಈ ವಿವೇಚನೆಗಳಲ್ಲಿ ಸಂಸ್ಕೃತ ಪ್ರಾಕೃತ ಮತ್ತು ತೆಲುಗು ಭಾಷೆಯ ಛಂದೋಗ್ರಂಥಗಳ ಸಹಾಯವನ್ನು ಹೇರಳವಾಗಿ ಪಡೆದಿದ್ದೇನೆ. ಅವುಗಳ ಹಿನ್ನೆಲೆಯಲ್ಲಿ ವಿವಿಧವಾದ ಆಯಾಮಗಳಲ್ಲಿ ಸಂಗತಿಗಳನ್ನು ವಿಶ್ಲೇಷಿಸಿದ್ದೇನೆ.

ಕನ್ನಡ ಅಧ್ಯಯನ ಸಂಸ್ಥೆಯ 'ಕನ್ನಡ ಛಂದಸ್ಸಿನ ಚರಿತ್ರೆ'ಯ ಎರಡು ಸಂಪುಟಗಳು ಈ ಕ್ಷೇತ್ರದ ದೊಡ್ಡ ಸಾಹಸ. ೨೦ನೆಯ ಶತಮಾನದ ಕನ್ನಡ ಛಂದಸ್ಸಿನ ಅಧ್ಯಯನಗಳಲ್ಲಿ ಇದೊಂದು ಮೈಲಿಗಲ್ಲು. ಸಂಸ್ಕೃತ ಇಂಗ್ಲಿಷ್ ಛಂದಸ್ಸುಗಳ ವಿವೇಚನೆ ಹಿನ್ನೆಲೆಯಲ್ಲಿರುವುದೂ ಯಕ್ಷಗಾನ ಛಂದಸ್ಸನ್ನು ಪ್ರತ್ಯೇಕವಾಗಿ ವಿವೇಚಿಸಿರುವುದೂ ಬೇರೆ ಬೇರೆ ವಿದ್ವಾಂಸರ ಚಿಂತನ ಮಂಥನಗಳು ಸಮಾವೇಶಗೊಂಡಿರುವುದೂ ಇಲ್ಲಿಯ ವಿಶೇಷ.

'ಕನ್ನಡ ಛಂದಸ್ಸು ನಿಂತ ನೀರಲ್ಲ' ಎನ್ನುವ ಹಾಗೆಯೇ ಕನ್ನಡ ಛಂದಸ್ಸಿನ ಅಧ್ಯಯನಗಳೂ ನಿಂತ ನೀರಲ್ಲ ಎನ್ನುವುದು ಈ ೭೫ ವರ್ಷಗಳಕಾಲ ವಿದ್ವಾಂಸರು ನಡಸಿರುವ ಪ್ರಯತ್ನಗಳಿಂದ ಸ್ಪಷ್ಟಪಟ್ಟಿದೆ. ಬಿ.ಎಂ.ಶ್ರೀ., ಎ.ಆರ್.ಕೃ., ವಿ.ಸೀ., ತೀ.ನಂ.ಶ್ರೀ., ಸೇಡಿಯಾಪು, ಎ. ವೆಂಕಟಸುಬ್ಬಯ್ಯ, ಕುಂದಣಗಾರ, ಡಿ.ಎಲ್.ಎನ್., ಕರ್ಕಿ, ಮುಗಳಿ, ಎಂ.ವಿ.ಸೀ., ಎಲ್. ಬಸವರಾಜು, ಚಿಟಗುಪ್ಪಿ ಈ ಕೆಲವರು ಹಿರಿಯರೂ ಈಚೆಗೆ ಬಿ. ಹೆಚ್. ಶ್ರೀಧರ, ಚಿದಾನಂದಮೂರ್ತಿ, ಬಿಳಿಗಿರಿ, ನಾರಾಯಣ ಪ್ರಸಾದ್, ಸೀತಾರಾಮ ಕೆದಿಲಾಯ, ಶಿವರಾಮ ಐತಾಳ, ಕಬ್ಬಿನಾಲೆ ವಸಂತ ಭಾರದ್ವಾಜ್, ಎಸ್. ಅನಂತನಾರಾಯಣ, ಜಿ. ವರದರಾಜರಾವ್,

ಸೀತಾರಾಮ ಜಾಗೀರ್ದಾರ್, ಎಂ.ಎಂ. ಕಲಬುರ್ಗಿ, ಮಂಜಪ್ಪಶೆಟ್ಟಿ, ವೆಂಕಟಾಚಲ ಶಾಸ್ತ್ರಿ ಈ ಮುಂತಾದವರೂ ಸಾಕಷ್ಟು ಶ್ರಮಿಸಿದ್ದಾರೆ. ಇವುಗಳಲ್ಲಿ ಬೇಕಾದಹಾಗೆ ತಪ್ಪು ಗ್ರಹಿಕೆಗಳುಂಟು, ಕಲ್ಪನಾ ವಿಲಾಸಗಳುಂಟು, ಬೇರೆ ರೀತಿಯ ನ್ಯೂನಾತಿರೇಕಗಳೂ ಉಂಟು. ಆದರೆ ಗಟ್ಟಿಯಾದ, ಗುರಿ ತಾಕಿದ ಸರಿಯುತ್ತರಗಳೂ ಉಂಟು. ಕನ್ನಡ ಛಂದೋವಿಕಾಸ (ಡಿ. ಎಸ್. ಕರ್ಕಿ), ಟಿ. ವಿ. ವೆಂಕಟಾಚಲ ಶಾಸ್ತ್ರಿಗಳ 'ಕನ್ನಡ ಛಂದಸ್ಸು', 'ಕನ್ನಡ ಛಂದಃಸ್ವರೂಪ' ಮತ್ತು 'ಕನ್ನಡ ಛಂದೋವಿಹಾರ', ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಛಂದಸ್ಸಿನ ಚರಿತ್ರೆಯ ಎರಡು ಸಂಪುಟಗಳು, ಎಸ್. ಶಂಕರನಾರಾಯಣ ಭಟ್ಟರ 'ಗೋವಿಂದ ಪೈಯವರ ಛಂದೋಗತಿ ಒಂದು ಅಧ್ಯಯನ', ಸೀತಾರಾಮ ಜಾಗೀರದಾರರ 'ಛಂದೋರಚನಾ ಸಂಶೋಧನೆಗಳು', ಸೇಡಿಯಾಪು ಕೃಷ್ಣಭಟ್ಟರ 'ಛಂದೋಗತಿ' ಮತ್ತು 'ಕನ್ನಡ ಛಂದಸ್ಸು', ಸೀತಾರಾಮ ಕೆದಿಲಾಯರ 'ಯಕ್ಷಗಾನ ಛಂದೋವಿವೇಕ', ಮಂಜಪ್ಪಶೆಟ್ಟಿಯವರ 'ಛಂದೋವಿಚಾರಮಂಜರಿ', ಚಿದಾನಂದ ಮೂರ್ತಿಗಳ 'ಛಂದೋತರಂಗ', ನಾರಾಯಣ ಪ್ರಸಾದರ 'ಬೇಂದ್ರೆ ಕಾವ್ಯದ ಛಂದಸ್ಸು' ಇವುಗಳಲ್ಲಿಯೂ ಛಂದೋವಿಷಯಕ ನಿಬಂಧಗಳಲ್ಲಿಯೂ ಇವನ್ನು ಧಾರಾಳವಾಗಿ ನಾವು ಕಾಣುತ್ತೇವೆ.

ಬಹುಕಾಲ ಹೊಸಗನ್ನಡ ಕವಿತೆಯ ಛಂದಸ್ಸಿನ ಅಧ್ಯಯನ ಒಂದು ಕೊರತೆಯಾಗಿ ಕಾಡುತ್ತಿದ್ದಿತು. ಈಚಿಗೆ ಕೆ. ಜಿ. ನಾರಾಯಣ ಪ್ರಸಾದ್ ತಮ್ಮ ವಿಸ್ತೃತ ಅಧ್ಯಯನದ ಮೂಲಕ ಅದನ್ನು ಪರಿಹರಿಸಿದ್ದಾರೆ. ಅವರ 'ಹೊಸಗನ್ನಡ ಕವಿತೆಯ ಛಂದಸ್ಸು' ಕನ್ನಡ ಛಂದಸ್ಸಿನ ಅಧ್ಯಯನಗಳಲ್ಲಿ ಒಂದು ಮೈಲಿಗಲ್ಲು.

ವಾಸ್ತವವಾಗಿ ಇನ್ನು ಮುಂದೆ ಛಂದಸ್ಸಿನ ಅಧ್ಯಯನಗಳಿಗೆ ಶಿಖರಪ್ರಾಯವಾದ ಮೀಮಾಂಸಕ ಅಧ್ಯಯನ ನಡೆಯುವುದು ಅವಶ್ಯವಿದೆ. ಬಂಧ-ಭಾವಗಳ ಸಮ್ಮಿಲನದ ರಹಸ್ಯ ವೈಚಿತ್ರ್ಯ ವೈಖರಿಗಳು ಪದ್ಯಶಿಲ್ಪವನ್ನು ಹೇಗೆ ರೂಪಿಸುತ್ತವೆ, ಯಶಸ್ಸು ಸೋಲುಗಳು ಏಕೆ ಮತ್ತು ಹೇಗೆ ಇವನ್ನು ವಿಧಿವತ್ತಾಗಿ ನಿರೂಪಿಸಬೇಕಾಗಿದೆ. ಈ ವಿಷಯದಲ್ಲಿ ಪ್ರಾಚೀನರಾದ ಭರತ ಕ್ಷೇಮೇಂದ್ರ ಮೊದಲಾದವರ, ಅರ್ವಾಚೀನರಾದ ಪಿ. ಮಾಧವ ಶರ್ಮ ಕುವೆಂಪು, ವಿ.ಸೀ., ಮುಗಳಿ ಈ ಕೆಲವರ ಬರಹಗಳಿಂದ ಸ್ಫೂರ್ತಿಪಡೆದು, ಸೂಚನೆಗಳನ್ನು ಹಿಡಿದು ನಾವು ಮುನ್ನಡೆಯಬೇಕಾಗಿದೆ. ಪಂಪಕವಿ ಮತ್ತು ಕನ್ನಡ ಛಂದಸ್ಸು ಎಂಬ ಒಂದು ಪ್ರಬಂಧದಲ್ಲಿ ಈ ಬಗೆಯ ಪ್ರಯತ್ನವನ್ನು ಕೆಲ ವರ್ಷಗಳ ಹಿಂದೆಯೇ ನಾನು ಮಾಡಿದೆ. ಈಚಿಗೆ ಯು. ಶಂಕರನಾರಾಯಣ ಭಟ್ಟರು ಪಂಪನ ಕೃತಿಗಳ ಛಂದಃಶಿಲ್ಪವನ್ನೇ ವಿಸ್ತಾರವಾಗಿ ಅಧ್ಯಯನಮಾಡಿ ತಮ್ಮ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದಾರೆ. ಇದೊಂದು ಉದ್ವೃಕೃತಿ. ೨೧ನೆಯ ಶತಮಾನದ ಸಂಶೋಧಕರು ತಮ್ಮ ಪ್ರತಿಭೆ ಪರಿಶ್ರಮಗಳಿಂದ ಉಳಿದ ಕವಿಗಳ ವಿಷಯದಲ್ಲಿಯೂ ಈ ಕೆಲಸ ಮಾಡಬೇಕಾಗಿದೆ.

ಬೇರೆ ಶಾಸ್ತ್ರ ವಿಷಯಗಳಿಗೆ 'ಗತಿ' ಉಂಟು, ಛಂದಸ್ಸಿಗೆ ಇಲ್ಲ ಎಂದು ನನ್ನ ವಿದ್ವಾಂಸಮಿತ್ರರೊಬ್ಬರು ಈಗ್ಗೆ ಕೆಲವು ದಶಕಗಳ ಹಿಂದೆ ನನಗೆ ಹೇಳಿ ನನ್ನನ್ನು ಹೆದರಿಸಿದ್ದರು. ಈ ಕ್ಷೇತ್ರ ಬೆಳೆದಿರುವ ನೀತಿ ನೋಡಿದ ಮೇಲೆ ಆ ಹೆದರಿಕೆ ಬೆದರಿಕೆಗಳಿಗೆ ಬುಡವಿಲ್ಲ ಎಂದು ನನಗೆ ಧಾರಾಳವಾಗಿ ಕಂಡಿದೆ.

೬

ಅಲಂಕಾರ ಕ್ಷೇತ್ರ : ಅಲಂಕಾರ, ಕಾವ್ಯಮೀಮಾಂಸೆ ಎರಡು ಮುಖಗಳಲ್ಲಿ ವಿವೇಚನೆ ಸಾಧ್ಯ. ನನ್ನ ಪರಿಶೀಲನೆ ಮೊದಲನೆಯದಕ್ಕೆ ಸೀಮಿತ.

ಕನ್ನಡದಲ್ಲಿ ಅಲಂಕಾರಗ್ರಂಥಗಳು ಸಂಖ್ಯೆಯಲ್ಲಿ ಕಡಮೆ. 'ಕವಿರಾಜಮಾರ್ಗ' 'ಕಾವ್ಯಾವಲೋಕನ'ಗಳಿಂದ ಮುನ್ನಡೆದರೆ ೭-೮ ರಚನೆಗಳೊಂದಿಗೆ ಈ ಲೆಕ್ಕ ಮುಗಿಯುತ್ತದೆ. ಒಟ್ಟು ಬಹುಶಃ ೧೧ ಅಲಂಕಾರ ಕೃತಿಗಳುಂಟು ಕನ್ನಡದಲ್ಲಿ. ತಿಮ್ಮನೆಂಬುವನ 'ಅಲಂಕಾರ ರಸಸಂಗ್ರಹ' (ಸು.೧೯೦೦) ದೊರೆತಿದೆ ಎನ್ನುತ್ತಾರೆ, ಪ್ರಕಟವಾಗಿಲ್ಲ.

ಕನ್ನಡದಲ್ಲಿ ಅಲಂಕಾರಗ್ರಂಥಗಳ ಪ್ರಕಟನೆ ಸಾಕಷ್ಟು ತೃಪ್ತಿಕರ ಎಂದರೂ, ಅವುಗಳ ವಸ್ತು ವಿಮರ್ಶೆ ಮಾತ್ರ ಬಲುಮಟ್ಟಿಗೆ ಅಲಕ್ಷಿತ. ಈ ವಿಮರ್ಶೆ ಆಯಾ ಗ್ರಂಥಗಳ ಉಪೋದ್ಘಾತ ತಾತ್ಪರ್ಯಾರ್ಥಗಳ ಗಡಿದಾಟಿ ವಿಶೇಷವಾಗಿ ಮುಂದೆ ಹೋಗಿಲ್ಲ. ಪರಸ್ಪರ ತುಲನೆಯ ಮೂಲಕ ಸ್ವೀಕರಣ ಸ್ವೋಪಜ್ಞತೆಗಳು, ಲಕ್ಷ್ಯಪದ್ಯಗಳ ಆಕರ ಸ್ವಾರಸ್ಯಗಳು, ಪರಿಭಾಷೆಯ ಅರ್ಥವ್ಯಾಪ್ತಿ ಮತ್ತು ಲಕ್ಷ್ಯಗಳಿಗೆ ಆಕರ ಅನ್ವಯದ ಸಾಧ್ಯತೆಗಳು, ಪ್ರಸ್ಥಾನಗಳು ಇಲ್ಲಿ ಪಡೆದುಕೊಂಡ ಸ್ಥಾನ ಪ್ರಾಶಸ್ತ್ಯಗಳು, ಸಂಸ್ಕೃತ ಅಲಂಕಾರಶಾಸ್ತ್ರಕ್ಕೆ ಕನ್ನಡ ಆಲಂಕಾರಿಕರ ಕೊಡುಗೆ ಈ ಮೊದಲಾದ ಅವೆಷ್ಟೋ ವಿಚಾರಗಳು ಸಾಮಾನ್ಯ ರೀತಿಯಿಂದ ಚರ್ಚಿತವಾಗಿವೆಯಲ್ಲದೆ ತಕ್ಕ ಪ್ರಮಾಣ ವ್ಯಾಪ್ತಿಗಳಲ್ಲಿ ಅಲ್ಲ.

'ಕವಿರಾಜಮಾರ್ಗ'ದ ಕರ್ತೃತ್ವ ವಿಚಾರದ ಸಮಸ್ಯೆಗೆ ನಮ್ಮ ವಿದ್ವಾಂಸರು ಹರಿಸಿರುವ ಗಮನದಲ್ಲಿ ಅರ್ಧಭಾಗ ಕೂಡ ವಸ್ತುವಿಮರ್ಶೆಗೆ ಹರಿಸಿದಂತಿಲ್ಲ. ತೀ.ನಂ.ಶ್ರೀ., ಎಂ.ವಿ.ಸೀ., ಕೆ. ಕೃಷ್ಣಮೂರ್ತಿ ಇವರು ಈ ದಿಕ್ಕಿನಲ್ಲಿ ಒಳ್ಳೆಯ ಕೆಲಸ ಮಾಡಿದ್ದರೂ ಮುಳಿಯ ತಮ್ಮಪ್ಪಯ್ಯನವರು 'ಕವಿರಾಜಮಾರ್ಗ ವಿವೇಕ'ದ ಮೂಲಕವೂ, ಭೀಮರಾವ ಚಿಟಗುಪ್ಪಿಯವರು 'ಕವಿರಾಜಮಾರ್ಗ ಪ್ರಶಸ್ತಿ'ಯ ಮೂಲಕವೂ ವಸ್ತುವಿಮರ್ಶೆ ನಡಸಿದ್ದರೂ, ಈ ಗ್ರಂಥವು ಭಾರತೀಯ ಕಾವ್ಯಮೀಮಾಂಸೆಯ ಕ್ಷೇತ್ರದಲ್ಲಿಯೇ ಅನನ್ಯವಾದುದು ಎಂದು ಪಾಶ್ಚಾತ್ಯ ವಿದ್ವಾಂಸರು ಸಹ ಗುರುತಿಸಿದ್ದರೂ, ಇನ್ನೂ ತನ್ನತನವೆಂಬುದನ್ನು ಇದು ಬಿಚ್ಚಿಕೊಂಡ ಹಾಗೆ ತೋರದು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಸಾಹಿತ್ಯ ಚರಿತ್ರೆಯ ಎರಡನೆಯ ಸಂಪುಟದಲ್ಲಿ ಈ ಕೃತಿಯ ವಿಸ್ತೃತ ವಿವೇಚನೆಯಿರುವುದನ್ನು ಇಲ್ಲಿ ನೆನೆಯಬಹುದಾಗಿದೆ. 'ಕಾವ್ಯಾವಲೋಕನ'ದ ವಿಷಯದಲ್ಲಿ ಬಸವನಾಳ - ಕೇಪು ಶಂಕರನಾರಾಯಣ ತಮ್ಮ ವ್ಯಾಖ್ಯಾನದ ನೆಲೆಯಲ್ಲಿ ಒಳ್ಳೆಯ ಕೆಲಸ ಮಾಡಿದ್ದರೂ ಇನ್ನೂ ಅದರ ಸುರಸವಾದ ವಸ್ತುಸಾರ ಸವಿಮರ್ಶವಾಗಿ ಪ್ರಕಟವಾಗಿಲ್ಲ. ಈ ಮಾತು ಉದಯಾದಿತ್ಯಾಲಂಕಾರ, ಅಪ್ರತಿಮವೀರಚರಿತಗಳಿಗೆ ಸಹ ಒಪ್ಪುತ್ತದೆ. 'ಮಾಧವಾಲಂಕಾರ'ದ ಒಳ್ಳೆಯ ಪಠ್ಯ ಇನ್ನೂ ಬರಬೇಕಾಗಿದೆ. ಕಾವ್ಯಾದರ್ಶದೊಂದಿಗೆ ಅದರ ತುಲನೆ ನಡೆದು ಭಾಷಾಂತರದ ಸೋಲು-ಗೆಲವುಗಳೂ ಕೂಡ ಗೊತ್ತಾಗಬೇಕಾಗಿದೆ. ಸಾಳ್ವನ 'ರಸರತ್ನಾಕರ' 'ಶಾರದಾವಿಲಾಸ'ಗಳಂತೂ ಒಂದು ಚಿನ್ನದ ಗಣಿ. ಇಲ್ಲಿ ಹೇಳತಕ್ಕ, ಗುರುತಿಸತಕ್ಕ ಸಂಗತಿಗಳು ಹೇರಳವಾಗಿವೆ. ಕವಿ ಕಾಮನ 'ಶೃಂಗಾರರತ್ನಾಕರ' ಸಹ ಏಕೋ ವಿದ್ವಾಂಸರ ಗಮನಕ್ಕೆ ಸರಿಯಾಗಿ ಬಂದಿಲ್ಲ. ಒಂದು ಮಾತಿನಲ್ಲಿ ಹೇಳಬಹುದಾದರೆ, ಕನ್ನಡದ ಅಲಂಕಾರಶಾಸ್ತ್ರ ಪಠ್ಯಗಳು ಉಳಿದೆಲ್ಲ ಶಾಸ್ತ್ರಪಠ್ಯಗಳಿಗಿಂತ ಹೆಚ್ಚು ಅನಾದರಣೆಗೆ ಗುರಿಯಾಗಿವೆ, ಬಹುಶಃ 'ಕವಿರಾಜಮಾರ್ಗ' ಒಂದು ಹೊರತುಪಡಿಸಿ. ಪಿಎಚ್.ಡಿ. ವಿದ್ಯಾರ್ಥಿಗಳು ಈ ಕ್ಷೇತ್ರವನ್ನು ತಮ್ಮ ಶೋಧನೆಗೆ

ಸೇರಿಸಿಕೊಳ್ಳದಿರುವುದು ಒಂದು ಅಚ್ಚರಿಯ ವಿಷಯ. ವಿದ್ವಾಂಸರ ಲಕ್ಷ್ಯ ಸಂಸ್ಕೃತ ಅಲಂಕಾರಶಾಸ್ತ್ರ ಗ್ರಂಥಗಳ ಕಡೆ ಹೆಚ್ಚು ತಿರುಗಿ ಕನ್ನಡದವು ಉಪೇಕ್ಷೆಗೊಂಡಿವೆ.

ಕನ್ನಡ ಅಲಂಕಾರಕ್ಷೇತ್ರದ ಅಧ್ಯಯನಗಳು 'ಕನ್ನಡ ಕೈಪಿಡಿ'ಯ ಆ ಭಾಗದಿಂದ ಹೊಸ ದೃಷ್ಟಿಯಲ್ಲಿ ಆರಂಭಗೊಂಡಿತು. ಕೃಷ್ಣ ಶಾಸ್ತ್ರಿಗಳು ಆ ಭಾಗವನ್ನು ಬರೆದು ಅದಕ್ಕೆ ಚಾಲನೆ ನೀಡಿದರು ಎಂದು ಹೇಳಬಹುದಾಗಿದೆ. ಅವರ ಪ್ರೇರಣೆ ಮಾರ್ಗದರ್ಶನಗಳಲ್ಲಿ ಮುನ್ನಡಿ ಇಟ್ಟವರು ಎಂದರೆ ತೀ.ನಂ.ಶ್ರೀ., ಎಂ.ವಿ.ಸೀ. ಮತ್ತು ಕೆ. ಕೃಷ್ಣಮೂರ್ತಿಗಳು ಹಾಗೂ ಇತರ ಕೆಲವರು. ತೀ.ನಂ.ಶ್ರೀ. ಅವರು 'ಭಾರತೀಯ ಕಾವ್ಯಮೀಮಾಂಸೆ'ಯ ಮೂಲಕವೂ ಎಂ.ವಿ.ಸೀ. ಅವರು 'ಕವಿರಾಜಮಾರ್ಗ' 'ಉದಯಾದಿತ್ಯಾಲಂಕಾರ'ಗಳ ಸಂಪಾದನೆ ಹಾಗೂ ವ್ಯಾಖ್ಯಾನಗಳ ಮೂಲಕವೂ, ಕೃಷ್ಣಮೂರ್ತಿಗಳು ಸಂಸ್ಕೃತ ಅಲಂಕಾರಶಾಸ್ತ್ರ ಗ್ರಂಥಗಳ ಸವಿಮರ್ಶ ಅನುವಾದಗಳ ಹಾಗೂ 'ಕನ್ನಡದಲ್ಲಿ ಕಾವ್ಯತತ್ವ' ಎಂಬ ಚಿಕ್ಕ ಪುಸ್ತಕ, ಕವಿರಾಜಮಾರ್ಗದ ತಾತ್ಪರ್ಯಾರ್ಥಪ್ರಕಾಶನಗಳ ಮೂಲಕವೂ ತಮ್ಮ ಪಾಲಿನ ಕೆಲಸವನ್ನು ನಿರ್ವಹಿಸಿದ್ದಾರೆ.

ಕನ್ನಡ ಅಲಂಕಾರಶಾಸ್ತ್ರ ಪ್ರಕ್ರಿಯೆಗಳ ಸಂಬಂಧದಲ್ಲಿ ಕೆ. ಕೃಷ್ಣಮೂರ್ತಿ, ಎನ್. ರಂಗನಾಥ ಶರ್ಮಾ, ಯ. ಕೃಷ್ಣ ಶರ್ಮ, ಸಿ.ಪಿ.ಕೆ., ಈ ಕೆಲವರು ವಿಪುಲವಾಗಿ ಚರ್ಚೆಗಳನ್ನು ನಡಸಿದ್ದಾರೆ. ಪ್ರಕ್ರಿಯೆ ಪ್ರಸ್ಥಾನ ಪದ್ಯಾರ್ಥಗಳ ಈ ನಿಶ್ಚಿತವಾದ ಚರ್ಚೆಗಳು ಹಿಂದೆ ಎಂ. ಎ. ರಾಮಾನುಜಯ್ಯಂಗಾರ್ ಅವರು 'ಕವಿಸಮಯ', 'ಕವಿಕಾರ್ಯ ಪ್ರಶಂಸೆ' ಎಂಬ ಪ್ರತ್ಯೇಕ ಪುಸ್ತಕಗಳನ್ನೇ ರಚಿಸಿ ನಡಸಿದ ಚರ್ಚೆಗಳ ಹಾಗೆಯೇ ಕರ್ಪೂರ ಶ್ರೀನಿವಾಸರಾಯರು ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಿಸಿದ 'ಸಾಹಿತ್ಯಶಾಸ್ತ್ರವಿಚಾರ' ಲೇಖನಗಳ ಹೊಸ ಕಾಲದ ಮುಂದುವರಿಕೆ ಎಂದು ಹೇಳಬಹುದಾದವೂ ಈ ಬಗೆಯಲ್ಲಿ ಚರ್ಚೆಗಳನ್ನು ನಡೆಸುವ ವಿದ್ವಾಂಸರ ಕಾಲ ಆಗಿಹೋಗುತ್ತಿದೆಯೇನೋ ಎಂದು ಈಗೀಗ ತೋರುತ್ತಿದೆ. ಅವಕ್ಕೆ ಬೇಕಾದ ಸಂಸ್ಕೃತ ಭಾಷಾಜ್ಞಾನದ ಕೊರತೆಯೇ ಆ ಪರಿಸ್ಥಿತಿಗೆ ಕಾರಣವೆಂದೂ ಊಹಿಸಬಹುದಾಗಿದೆ.

೭

ಗ್ರಂಥ ಸಂಪಾದನೆ ಕ್ಷೇತ್ರ: ಇದು ಒಂದು ಶಾಸ್ತ್ರವಾಗಿ ಅಧ್ಯಯನ ಅಧ್ಯಾಪನೆಗಳಿಗೆ ವಿಷಯವಾದುದು ೨೦ನೆಯ ಶತಮಾನದ ೬ನೆಯ ದಶಕದ ಆರಂಭಕಾಲದಿಂದ; ಮೈಸೂರು ವಿಶ್ವವಿದ್ಯಾಲಯದ ಕನ್ನಡ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಈ ವಿಷಯ ಪಠ್ಯವಿಷಯವಾಗಿ ಸೇರಿದ ಮೇಲೆ.

ಡಿ. ಎಲ್. ನರಸಿಂಹಾಚಾರ್ಯರು 'ಕನ್ನಡ ಗ್ರಂಥ ಸಂಪಾದನೆ'ಯನ್ನು 1964ರಲ್ಲಿ ಪ್ರಕಟಿಸಿದರು. ಅದು ಮುಂದಿನ ಶೋಧನೆಗಳಿಗೆ, ಬೋಧನೆಗೆ ಚಾಲನೆ ನೀಡಿತು. ಅವರೇ ಈ ವಿಷಯದಲ್ಲಿ ಅದಕ್ಕೆ 20 ವರ್ಷಗಳ ಮೊದಲು ತಮ್ಮ ಉಪನ್ಯಾಸವೊಂದರಲ್ಲಿ (1944), ಎನ್. ಅನಂತರಂಗಾಚಾರ್ಯರು ತಮ್ಮ ಲೇಖನವೊಂದರಲ್ಲಿ (1949) ಅಭ್ಯಾಸ ವಿಷಯವೆಂಬುದಾಗಿ ಪ್ರತಿಪಾದಿಸಿದ್ದುದುಂಟು.

ಈ ಭಾಗದ ಬೆಳೆವಣಿಗೆಗೆ ನಮ್ಮ ವಿಶ್ವವಿದ್ಯಾನಿಲಯಗಳೂ, ಆಸಕ್ತರಾದ ಗ್ರಂಥ ಸಂಪಾದಕರೂ ಬಲುಮಟ್ಟಿಗೆ ಕಾರಣ; ಪ್ರಾಚೀನ ಹಸ್ತಪ್ರತಿ ಭಂಡಾರಗಳು ಸಂಪಾದಕರಿಗೆ ಕೈವೊಕ್ಕ ನಿಧಿಯಾಗಿ

ಒದಗಿದ್ದೂ ಕಾರಣವೇ. ನಮ್ಮ ಗ್ರಂಥಸಂಪಾದಕರು ಶಾಸ್ತ್ರನಿಯಮಗಳನ್ನು ಹಿಡಿದೇ ತಮ್ಮ ಆಯ್ಕೆಯ ಕೃತಿಗಳನ್ನು ಸಂಪಾದಿಸಿದ್ದಾರೆ ಎಂದು ಹೇಳಲಾಗದಿದ್ದರೂ ಅವನ್ನು ಬಲ್ಲವರಾಗಿದ್ದಾರೆ. ಅವುಗಳಿಂದ ಪ್ರಯೋಜನ ಪಡೆದವರೂ ಆಗಿದ್ದಾರೆ.

ಡಿ.ಎಲ್.ಎನ್. ಅವರ ತರುವಾಯದಲ್ಲಿ ಈ ಶಾಸ್ತ್ರ ಕುರಿತಹಾಗೆ ಇನ್ನಷ್ಟು ಕೃತಿಗಳು ಬಂದಿವೆ. ಎಂ. ಎಂ. ಕಲಬುರ್ಗಿ ಅವರು 'ಕನ್ನಡಗ್ರಂಥ ಸಂಪಾದನ ಶಾಸ್ತ್ರ', 'ಸಾಹಿತ್ಯಸಂಪಾದನೆ', ಸೀತಾರಾಮ ಜಾಗಿರ್‌ದಾರ್ 'ಗ್ರಂಥಸಂಪಾದನಾಶಾಸ್ತ್ರ ಪರಿಚಯ' ಎಂಬ ಕೃತಿಗಳನ್ನು ರಚಿಸಿದ್ದಾರೆ. ಗ್ರಂಥಸಂಪಾದನೆ ಹಸ್ತಪ್ರತಿ ಶಾಸ್ತ್ರಗಳ ಬೆಳವಣಿಗೆಗೆಂದೇ ಹುಟ್ಟಿ ಬೆಳೆಯುತ್ತಿರುವ ಬಿ.ಎಂಶ್ರೀ. ಸ್ಮಾರಕ ಪ್ರತಿಷ್ಠಾನ ಹೊರತಂದಿರುವ 'ಮಣಿಹ' (ಪಿ. ಜಿ. ಹಳಕಟ್ಟಿಯವರ ಸಂಸ್ಮರಣಗ್ರಂಥ) ವಿಪುಲವೂ ವಿಸ್ಮಯಕರವೂ ಆದ ಸಾಮಗ್ರಿಯಿಂದ ಕೂಡಿದೆ. ಕನ್ನಡ ಗ್ರಂಥಸಂಪಾದನ ಕ್ಷೇತ್ರದ ಸಾಧನೆ ಸಾಹಸಗಳನ್ನು ಕುರಿತ ಬಿ. ಎಸ್. ಸಣ್ಣಯ್ಯನವರ ಗ್ರಂಥವೊಂದು ಇಷ್ಟರಲ್ಲೇ ಪ್ರಕಟವಾಗಲಿದೆ.

ಗ್ರಂಥಸಂಪಾದನೆಯ ಒಂದು ಶಾಖೆ ಅಥವಾ ಪೂರ್ವಭೂಮಿಕೆ ಹಸ್ತಪ್ರತಿಶಾಸ್ತ್ರ. ಈ ಮಾತನ್ನು ಚಲಾವಣೆಗೆ ತಂದವರು ಬಹುಶಃ ಆರ್. ಸಿ. ಹಿರೇಮಠ. ನಮ್ಮ ಹಸ್ತಪ್ರತಿ ಭಂಡಾರಗಳು ವಿಸ್ತಾರವಾದವು, ಕುತೂಹಲಜನಕವಾದವು. ಅಲ್ಲಿಯ ಸಾಮಗ್ರಿಯನ್ನು ವಿವರಿಸುವ ಸೂಚಿಸಾಹಿತ್ಯ ಕರ್ನಾಟಕದ ಒಳಹೊರಗೆ ವಿಪುಲವಾಗಿ ಪ್ರಕಟವಾಗಿದೆ. ಎಚ್. ದೇವೀರಪ್ಪನವರು ಕನ್ನಡ ಹಸ್ತಪ್ರತಿಗಳ ಇತಿಹಾಸವನ್ನು, ಬಿ. ಎಸ್. ಸಣ್ಣಯ್ಯನವರು ಹಸ್ತಪ್ರತಿಶಾಸ್ತ್ರ ಪರಿಚಯವನ್ನು, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಹಸ್ತಪ್ರತಿಶಾಸ್ತ್ರವನ್ನು, ಬಿ. ಕೆ. ಹಿರೇಮಠರು 'ಕನ್ನಡ ಹಸ್ತಪ್ರತಿಗಳು - ಒಂದು ಅಧ್ಯಯನ' ಎಂಬ ನಿಬಂಧವನ್ನು ಬರೆದು ಪ್ರಕಟಿಸಿದ್ದಾರೆ. ಗ್ರಂಥಸಂಪಾದನೆಯ ಕ್ಷೇತ್ರಕ್ಕೆ ಇದೊಂದು ಸ್ವಾರಸ್ಯಕರವಾದ ಬೆಳವಣಿಗೆ.

ಗ್ರಂಥಸಂಪಾದನೆ ಪ್ರಾಚೀನ ಸಾಹಿತ್ಯಕೃತಿಗಳ ಶುದ್ಧಪಾಠವನ್ನು ನಿಷ್ಕರ್ಷಿಸುವಲ್ಲಿ ಪ್ರಮುಖಪಾತ್ರವಹಿಸುವುದರಿಂದ ಶಬ್ದಾರ್ಥವಿಚಾರ ಕುರಿತು ಸಮೃದ್ಧವಾದ ಲೇಖನಗಳನ್ನು ವಿದ್ವಾಂಸರು ಪ್ರಕಟಿಸಿದ್ದಾರೆ. ಕೆಲವು ಪುಸ್ತಕರೂಪಗಳಲ್ಲಿ ಕ್ರೋಡೀಕರಣಗೊಂಡಿವೆ. ಡಿ.ಎಲ್.ಎನ್. ಅವರ 'ಶಬ್ದವಿಹಾರ', ಪ್ರಕೃತ ಲೇಖಕನ 'ಶಬ್ದಾರ್ಥ ವಿಹಾರ', ಹಂಪ. ನಾಗರಾಜಯ್ಯನವರ 'ಕಮ್ಮಟದ ಕಿಡಿಗಳು' ಸಿ.ಪಿ.ಕೆ. ಅವರ 'ಶೋಧನ', ವೈ. ಸಿ. ಭಾನುಮತಿ ಅವರ 'ಗ್ರಂಥಸಂಪಾದನೆ - ಕೆಲವು ಅಧ್ಯಯನಗಳು' ಇವು ಅಂತಹ ರಚನೆಗಳಾಗಿವೆ.

ಗ್ರಂಥಸಂಪಾದನೆ ಎಂದರೆ ಗ್ರಂಥಗಳನ್ನು ಸಂಪಾದಿಸುವ ಶಾಸ್ತ್ರೀಯ ಕ್ರಮಗಳನ್ನು ಅದರ ಎಲ್ಲ ಮಜಲುಗಳಲ್ಲಿಯೂ ನಿರೂಪಿಸುವುದು ಎನ್ನುವುದು ದಿಟವೇ ಆದರೂ ಕನ್ನಡದಲ್ಲಿ ಅದರ ಇತಿಹಾಸವನ್ನು ಬರೆಯುವಾಗ ಸಂಪಾದಿತವಾದ ಪ್ರಾಚೀನ ಸಾಹಿತ್ಯಕೃತಿಗಳ ಪ್ರಕಟನೆಯ ಇತಿಹಾಸವನ್ನೇ ವಿದ್ವಾಂಸರು ಬರೆಯುತ್ತಿದ್ದುದು ಕಂಡುಬರುತ್ತದೆ. ಆದರೆ ಆ ಪ್ರಾಚೀನ ಸಾಹಿತ್ಯಕೃತಿಗಳ ಸಂಪಾದನೆಯಲ್ಲಿ ಅನುಸರಿಸಿದ ಶಾಸ್ತ್ರೀಯಕ್ರಮಗಳು ಯಾವುವು, ಆ ಕ್ರಮಗಳ ಇತಿಹಾಸದಲ್ಲಿ ಆಗಿರುವ ಬದಲಾವಣೆಗಳೇನು ಎನ್ನುವುದು ವಾಸ್ತವವಾಗಿ ನಿರೂಪಿತವಾಗಬೇಕಾಗಿತ್ತು. 'ಶಬ್ದಾರ್ಥ ವಿಹಾರ'ದ ಒಂದು ಪ್ರಬಂಧದಲ್ಲಿ, ಕಿಟ್ಟೆಲ್ ಮತ್ತು ರೈಸ್ ಅವರ 'ಗ್ರಂಥಸಂಪಾದನ ವಿಧಾನಗಳು' (1979) ಎಂಬುದರಲ್ಲಿ ಅದರ ಮೊದಲ ದಿಗ್ದರ್ಶನ ಮಾಡಿರುವುದನ್ನು ಆಸಕ್ತರು ಗಮನಿಸಬಹುದಾಗಿದೆ.

ಇದೇ ಕ್ರಮದಲ್ಲಿ ರಾಮಾನುಜಯ್ಯಂಗಾರ್, ಎಸ್. ಜಿ. ನರಸಿಂಹಾಚಾರ್, ಆರ್. ನರಸಿಂಹಾಚಾರ್, ಎ. ಆರ್. ಕೃ. ವೆಂಕಣ್ಣಯ್ಯ, ಹಳಕಟ್ಟಿ , ಬಸವನಾಳ, ಹಿರೇಮಠ, ಭೂಸನೂರುಮಠ, ತೀ. ನಂ. ಶ್ರೀ., ಡಿ. ಎಲ್. ಎನ್, ದೇವೀರಪ್ಪ, ಎಲ್. ಬಸವರಾಜು, ಬಿ. ಎಸ್. ಸಣ್ಣಯ್ಯ ಹೀಗೆ ಇತರರ ಸಂಪಾದನ ವಿಧಾನಗಳನ್ನು ಪರಿಶೀಲಿಸಬಹುದಾಗಿದೆ, ಪರೀಕ್ಷಿಸಬಹುದಾಗಿದೆ. ಪೇಟಿ ಮುದ್ರಣದ ಸ್ವರೂಪ ಪ್ರತ್ಯೇಕ ಅಧ್ಯಯನಕ್ಕೆ ಇನ್ನೂ ಅಳವಡಬೇಕಾಗಿದೆ.

ಇದೇ ಶಾಖೆಗೆ ಸೇರಿದಂತೆ ಸೂಚಿಸಾಹಿತ್ಯ ನಿರ್ಮಾಣ ಕ್ರಮಗಳನ್ನು ನಿರೂಪಿಸುವ ಸೂಚಿಶಾಸ್ತ್ರ ಸಹ ಬೆಳೆದಿದೆ. ನಮ್ಮ ವಿಶ್ವವಿದ್ಯಾನಿಲಯಗಳೂ ಖಾಸಗಿ ಸಂಸ್ಥೆಗಳೂ ಬಹುಸಂಖ್ಯೆಯಲ್ಲಿ ಸಂಗ್ರಹಿಸಿರುವ ಹಸ್ತಪ್ರತಿಗಳ ವರ್ಣನಾತ್ಮಕಸೂಚಿಗಳನ್ನು ತಾವೇ ಸಿದ್ಧಪಡಿಸಿ ಪ್ರಕಟಿಸಿವೆ. ಎಸ್. ಶಿವಣ್ಣ, ಬಿ. ಎಸ್. ಸಣ್ಣಯ್ಯ ಮೊದಲಾದವರು ಇಲ್ಲಿ ಪ್ರಮುಖಪಾತ್ರ ವಹಿಸಿದ್ದಾರೆ. ಸಂಶೋಧನೆಗೆ ಅವಶ್ಯವಾದ ವಸ್ತುವಿನ ತಲಪರಿಗೆಗಳಂತಿರುವ ಹಸ್ತಪ್ರತಿ ಭಂಡಾರಗಳು ರಾಷ್ಟ್ರೀಯ ಸ್ವತ್ತು ಎಂದು ಘೋಷಿತವಾಗಿ ಸಂಗ್ರಹಗೊಳ್ಳಬೇಕಾದ ಹಸ್ತಪ್ರತಿಗಳಿಂದ ಇನ್ನೂ ಸಮೃದ್ಧಗೊಳ್ಳುವುದು ಅವಶ್ಯವಿದೆ.

೮

ನಿಘಂಟು ಕ್ಷೇತ್ರ: ಕನ್ನಡದಲ್ಲಿ ಕಳೆದ ಶತಮಾನದಲ್ಲಿ ಬಗೆಬಗೆಯ ನಿಘಂಟುಗಳು, ಪದಸೂಚಿಗಳು, ಪಾರಿಭಾಷಿಕ ಪದಕೋಶಗಳು ಮೊದಲಾದವು ಬಹುಸಂಖ್ಯೆಯಲ್ಲಿ ಪ್ರಕಟವಾಗಿವೆ. ಇದು ಒಂದು ದೊಡ್ಡ ಉಪಯುಕ್ತವಾದ ಕ್ಷೇತ್ರ. ಏನೇ ವಿಪುಲತೆಯಿದ್ದರೂ ನಡೆಯಬೇಕಾದ ಕೆಲಸ, ಏಕ ಮತ್ತು ಬಹುಭಾಷಿಕ ನಿಘಂಟುಗಳು, ವಿಶಿಷ್ಟವಿಷಯ ಪದಕೋಶಗಳು, ಪಾರಿಭಾಷಿಕ ಪದಕೋಶಗಳು, ಸಂಕೇತಕೋಶಗಳು ಈ ಮುಖಗಳಲ್ಲಿ ನಡೆಯಬೇಕಾದ್ದು ಬೆಟ್ಟದಷ್ಟಿದೆ.

'ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು' ಎಂಬ ೮ ಸಂಪುಟಗಳ ಬೃಹತ್ ಕನ್ನಡ ಕೋಶ ಕಳೆದ ಶತಮಾನದ ನಿಘಂಟುನಿರ್ಮಾಣದ ಪ್ರಯತ್ನಗಳಲ್ಲೆಲ್ಲ ಶಿಖರಪ್ರಾಯವಾದುದು. ಅದರ ಕುಂದು ಕೊರತೆಗಳು ಏನೇ ಇದ್ದರೂ ಭಾರತೀಯ ಭಾಷೆಗಳಲ್ಲಿಯೇ ಅದು ವಿಶಿಷ್ಟವಾದುದು, ಅಸಾಧಾರಣವಾದುದು. ಅದೊಂದು ಸಂಶೋಧನೆಯ ಸಾಹಸಪ್ರದರ್ಶನ. ಸಾಮಾನ್ಯ ಶಬ್ದಕೋಶಗಳಿಗಿಂತ ವಿಶಿಷ್ಟವಿಷಯ ಪದಕೋಶಗಳು ಹೆಚ್ಚಿನ ಸಂಶೋಧನೆಯ ಪರಿಶ್ರಮವನ್ನು ನಿರೀಕ್ಷಿಸುತ್ತವೆ. ಈ ಕ್ಷೇತ್ರದಲ್ಲಿ ಎ.ಆರ್.ಕೃ., ತೀ.ನಂ.ಶ್ರೀ., ಡಿ.ಎಲ್.ಎನ್., ಮರಿಯಪ್ಪಭಟ್ಟ, ಕ. ವೆಂ. ರಾಘವಾಚಾರ್, ಜಿ., ವೆಂಕಟಸುಬ್ಬಯ್ಯ, ಎನ್. ಬಸವಾರಾಧ್ಯ, ಟಿ. ವಿ. ವೆಂಕಟಾಚಲಶಾಸ್ತ್ರೀ ಈ ಕೆಲವರ ಪರಿಶ್ರಮ ಉಲ್ಲೇಖಿಸಬೇಕಾದುದು.

ಪ್ರಸ್ತುತ ಸಂಶೋಧನೆಯ ದೃಷ್ಟಿಯಿಂದ ನಿಘಂಟುಶಾಸ್ತ್ರ ಕನ್ನಡದಲ್ಲಿ ಇನ್ನೂ ಶೋಧನೆ ಬೋಧನೆಗಳಿಗೆ ತಕ್ಕ ವಿಷಯವಾಗಿಲ್ಲ. ಇಂಗ್ಲೀಷ್ ಭಾಷೆಯಲ್ಲಿ ಭಾಷಾವಿಜ್ಞಾನದ ಉಪಾಂಗವಾಗಿ ಅದು ಅದ್ಭುತವಾಗಿ ಬೆಳೆದಿದೆ. ಈಚೆಗೆ ಮೈಸೂರು, ಬೆಂಗಳೂರು ಮತ್ತು ಉಡುಪಿಗಳಲ್ಲಿ, ಬೇರೆ ಬೇರೆ ವರ್ಷಗಳಲ್ಲಿ ರಾಷ್ಟ್ರೀಯ ನಿಘಂಟು ನಿರ್ಮಾಣ ವಿಚಾರ ಸಂಕಿರಣಗಳು ನಡೆದಿದ್ದು, ಭಾರತೀಯ ಭಾಷಾಸಂಸ್ಥಾನದಿಂದ ೧೯೮೦ರಲ್ಲಿ Lexicography in India ಎಂಬ ಹೆಸರಿನಲ್ಲಿ ಒಂದು ಪ್ರಕಟನೆ ಹೊರಬಂದಿದ್ದರೂ ಕನ್ನಡದ ವ್ಯಾಪ್ತಿ ಅವಶ್ಯಕತೆಗಳಿಗೆ ತಕ್ಕ ರೀತಿಯಲ್ಲಿ ಸಮಾಲೋಚನೆಗಳು ಇನ್ನೂ ನಡೆದಿಲ್ಲವೆಂದೇ ಹೇಳಬೇಕು. ಅದೇ ಸಂಸ್ಥೆಯ An Introduction to Lexicography

ಯ ಮಾದರಿಯಲ್ಲಿ ಜಿ. ವೆಂಕಟಸುಬ್ಬಯ್ಯನವರು ಕನ್ನಡ ನಿಘಂಟು ಶಾಸ್ತ್ರ ಪರಿಚಯವನ್ನು ಬರೆದಿದ್ದಾರೆ. ೧೯೯೩ರಲ್ಲಿ ಪ್ರಕಟವಾದ ೧೦೦ ಪುಟಗಳ ಈ ಪುಸ್ತಕವೇ ಈ ಬಗೆಯ ಮೊದಲ ಪ್ರಯತ್ನ. ಇಲ್ಲಿಯ ಕೊರತೆಗಳನ್ನೂ ಸೀಮಿತಗಳನ್ನೂ ದಾಟಿ ಇನ್ನೂ ಬಹುದೂರ ನಾವು ಸಾಗಬೇಕಾಗಿದೆ. ಸಮೀಚೀನವಾದ ಕೃತಿಗಾಗಿ ಕಾಯಬೇಕಾಗಿದೆ. ಈಚೆಗೆ ಕನ್ನಡದಲ್ಲಿ ನಿಘಂಟುರಚನೆಯ ಹಲ ಕೆಲವು ಸಮಸ್ಯೆಗಳನ್ನು ವಿವೇಚಿಸುವ ಬರಹಗಳು, ಡಿ.ಎಲ್.ಎನ್. ಬಸವಾರಾಧ್ಯ, ವೆಂಕಟಾಚಲ ಶಾಸ್ತ್ರೀ ಈ ಕೆಲವರು ಬರೆದವು, ಪ್ರಕಟವಾಗಿ ವಿಷಯದ ವ್ಯಾಪ್ತಿ ಸಂಕೀರ್ಣತೆಗಳನ್ನು ತೋರಿಸುತ್ತಲಿವೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟುವಿನ ಪರಿಷ್ಕರಣ ಪುನರ್ಮುದ್ರಣದ ವ್ಯವಸ್ಥೆ ಕಳೆದ ಕೆಲವು ವರ್ಷಗಳಲ್ಲಿಯೇ ಆಗಿದ್ದು ಅದು ತನ್ನ ವ್ಯಾಪ್ತಿಯನ್ನು ಕನ್ನಡ - ಕನ್ನಡ - ಇಂಗ್ಲಿಷ್ ನಿಘಂಟುವಾಗಿ ಹೆಚ್ಚಿಸಿಕೊಂಡಿದೆ. ಇದರ ಪ್ರಧಾನಸಂಪಾದಕನಾಗಿ ಶ್ರಮಿಸಿದ ಪ್ರಕೃತಲೇಖಕ ಈ ಪರಿಷ್ಕರಣ ಕಾರ್ಯವನ್ನು ಸಂಪಾದಕ ಮಂಡಲಿಯ ನೆರವಿನೊಂದಿಗೆ ನಿರ್ವಹಿಸಿದ್ದು ಪ್ರಥಮಸಂಪುಟ ಪ್ರಕಟನೆಗಾಗಿ ಕಾಯುತ್ತಿದೆ.

೬

ಸ್ಥಳನಾಮ - ವ್ಯಕ್ತಿನಾಮ ಶಾಸ್ತ್ರಗಳು : ಭಾಷಾಶಾಸ್ತ್ರದ ಉಪಾಂಗಗಳಾಗಿ ಈಚೆಗೆ 20ನೆಯ ಶತಮಾನದ ಉತ್ತರಾರ್ಧದಿಂದ ಬೆಳೆಯುತ್ತಿರುವ ಶಾಸ್ತ್ರಗಳು ಇವು. ವಾಸ್ತವವಾಗಿ ಇದೊಂದು ಕುತೂಹಲದ ವಿಷಯವಾಗಿ ಕರ್ನಾಟಕದಲ್ಲಿ ಆಧುನಿಕರ ಚಿಂತನೆ ವಿಚಾರಗಳಿಗೆ ಒಳಪಟ್ಟುದು ಈ ಶತಮಾನದ ಪ್ರಾರಂಭದ ದಶಕಗಳಲ್ಲಿಯೇ ಎನ್ನಬಹುದು. ಪಂಜೆ ಮಂಗೇಶರಾಯರು 1931ರ ಸ್ವದೇಶಾಭಿಮಾನಿ ಪತ್ರಿಕೆಯಲ್ಲಿ 'ಸ್ಥಳನಾಮ' ಎಂಬುದಾಗಿಯೇ ಲೇಖನವೊಂದನ್ನು ಬರೆದು, ಅಲ್ಲಿ ಸ್ಥಳನಾಮ ವ್ಯಕ್ತಿನಾಮಗಳೆರಡರ ಸ್ವರೂಪವನ್ನು ಚರ್ಚಿಸಿದ್ದರು. ಅವರ ಮಾತಿನಲ್ಲಿಯೇ ಹೇಳುವುದಾದರೆ, "ನಮ್ಮ ಕನ್ನಡ ವಿದ್ಯಾರ್ಥಿಗಳು ಈ ನಾಡಿನ ಸಂಸ್ಕೃತಿಯ ಅಧ್ಯಾಯಗಳಲ್ಲಿ ಇದುವರೆಗೆ ಓದದೆ ಬಿಟ್ಟುಬಿಡುತ್ತಿದ್ದ ಒಂದು ಮೂಲೆಯ ಅಧ್ಯಾಯ" ಅಭ್ಯಾಸಕ್ಕೆ ವಿಷಯವೆಂಬುದು ಇಲ್ಲಿಯೇ ಇಂಗಿತವಾಯಿತು. ಬಳಿಕ ಆಗಿಂದಾಗ್ಗೆ ಶಂ. ಬಾ. ಜೋಶಿ, ಗೋವಿಂದ ಪೈ, ಪಿ. ಬಿ. ದೇಸಾಯಿ, ಸೇಡಿಯಾಪು ಕೃಷ್ಣಭಟ್ಟ, ಪಾ.ವೆಂ. ಆಚಾರ್ಯ, ದೇಜಗೌ, ಹಿರೇಮಠ, ಗುರುರಾಜ ಭಟ್ಟ, ಕಲಬುರ್ಗಿ, ಚಿದಾನಂದಮೂರ್ತಿ, ಹಂಪ ನಾಗರಾಜಯ್ಯ, ಕೆ. ವಿ. ನಾರಾಯಣ, ಬಿ. ನಂ. ಚಂದ್ರಯ್ಯ, ಆರ್ಯ ಮಣಿಪಾಲ, ವಿ. ಗೋಪಾಲಕೃಷ್ಣ, ಕೆ. ರಘುಪತಿ ಭಟ್ಟ, ಮುರಿಗೆಪ್ಪ, ಮಹೇಶ್ವರಯ್ಯ ಈ ಮುಂತಾದವರು ತಂತಮ್ಮ ವೈಯಕ್ತಿಕ ಪ್ರಯತ್ನದಿಂದ ಗ್ರಂಥಗಳ ಮೂಲಕ, ಲೇಖನಗಳ ಮೂಲಕ ಈ ಕ್ಷೇತ್ರದ ಅಧ್ಯಯನಗಳಿಗೆ ಮಾರ್ಗದರ್ಶನ ಮಾಡಿದ್ದಾರೆ.

ದೇಜಗೌ ಅವರ ನೇತೃತ್ವದಲ್ಲಿ ಭಾರತ ಸ್ಥಳನಾಮ ಸಂಸ್ಥೆ ಮೈಸೂರಿನಲ್ಲಿಯೇ ಜನ್ಮತಳೆದು, ಅದು ವಾರ್ಷಿಕ ಸಮಾವೇಶಗಳ ಜೊತೆಗೆ Journal of Place name society of India ಎಂಬ ವಿದ್ವತ್ ಪತ್ರಿಕೆಯನ್ನು ನಡೆಸಿಕೊಂಡು ಬರುತ್ತಿದೆ (೧೯೭೯). ವಿಸ್ತಾರವಾಗಿ ಸ್ಥಳನಾಮದ ಅಧ್ಯಯನಗಳು ಅಧ್ಯಯನವಿಷಯವಾಗಿ ಜಿಲ್ಲೆಯ ಹಾಗೂ ಸೀಮೆಯ ಸ್ಥಳನಾಮಗಳನ್ನು ಸಂಶೋಧಕರು ಅಧ್ಯಯನ ಮಾಡಿದ್ದಾರೆ. ಈ ಕಾರ್ಯ ಇನ್ನೂ ವ್ಯಾಪಕವಾಗಿ ನಡೆಯಬೇಕು. ಇತ್ತೀಚೆಗೆ ಆಂಧ್ರ ಪ್ರದೇಶದ ಅನಂತಪುರ, ಕಡಪ, ಚಿತ್ತೂರು, ನೆಲ್ಲೂರು ಮುಂತಾದ ಜಿಲ್ಲೆಗಳ

ಹಾಗೂ ಶಾಸನಗಳ ಸ್ಥಳನಾಮಗಳನ್ನು ಕುರಿತಹಾಗೆ ತೆಲುಗು ಭಾಷಾವಿದ್ವಾಂಸರು ಈಗಾಗಲೇ ಅಧ್ಯಯನಗಳನ್ನು ನಡಸಿರುವಂತೆ ಕನ್ನಡ ನಾಡಿನಲ್ಲಿ ನಡೆದಿಲ್ಲ ಎನ್ನುವುದು ವಿಷಾದದ ಸಂಗತಿ. ಭಾರತ ಸ್ಥಳನಾಮಸಂಸ್ಥೆ ಈ ಕಾರ್ಯವನ್ನು ಕೈಗೆತ್ತಿಕೊಂಡು ಚುರುಕಾಗಿ ಮುನ್ನಡಸಬೇಕಾಗಿದೆ. ಇಷ್ಟು ಮಾತ್ರವೇ ಅಲ್ಲ, ಆಂಧ್ರಪ್ರದೇಶದಲ್ಲಿ ಗೃಹನಾಮಗಳ ಬಗ್ಗೆಯೂ ವ್ಯಾಪಕವಾಗಿ ಕೆಲಸ ನಡೆದಿದ್ದು, ಕರ್ನಾಟಕದಲ್ಲಿ ಅಂತಹ ಪ್ರಯತ್ನಗಳು ಪ್ರತ್ಯೇಕವಾಗಿ ಇನ್ನುಮುಂದೆ ನಡೆಯಬೇಕಾಗಿದೆ. ಈ ಪ್ರಯತ್ನಗಳು ಭಾಷಾಶಾಸ್ತ್ರ, ಸಮಾಜವಿಜ್ಞಾನ, ಶಾಸನಶಾಸ್ತ್ರ ಮೊದಲಾದ ಅನ್ಯ ಶಾಸ್ತ್ರಗಳ ಶಿಸ್ತುಗಳ ಸಹಾಯವನ್ನು ಸಹಜವಾಗಿಯೇ ಬೇಡುತ್ತವೆ. ದೇಜಗೌ ಅವರ 'ಸ್ಥಳನಾಮ ವ್ಯಾಸಂಗ' ಈ ಕ್ಷೇತ್ರದ ಪ್ರಥಮ ಪಥಪ್ರದರ್ಶಕ ಕನ್ನಡಗ್ರಂಥ.

೧೦

ಸಾಹಿತ್ಯ ಚರಿತ್ರೆ : ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕವಿ ಕೃತಿಗಳ ಸಂಬಂಧವಾದ ಅವೆಷ್ಟೋ ವಿಚಾರಗಳು ಸಂಶೋಧನೆಗೆ ಸಮಸ್ಯೆಗಳಾಗಿವೆ. ಆರ್. ನರಸಿಂಹಾಚಾರ್ಯರು ತಮ್ಮ 'ಕರ್ಣಾಟಕ ಕವಿ ಚರಿತೆ'ಯ ಮೂರು ಸಂಪುಟಗಳ ಮೂಲಕ ಕನ್ನಡ ಸಾಹಿತ್ಯ ಚರಿತ್ರೆಯ ಮುಂದಿನ ರಚನೆ ಶೋಧನೆಗಳಿಗೆ ಶತಮಾನದ ಆರಂಭದ ದಶಕಗಳಲ್ಲಿಯೇ ನೀಲನಕ್ಷೆಯನ್ನು ಸಿದ್ಧಪಡಿಸಿದರು. ಇಲ್ಲಿಂದ ಮುಂದೆ ಈ ಗ್ರಂಥದಿಂದಲೂ ಪ್ರಕಟಗೊಂಡ ಸಾಹಿತ್ಯಕೃತಿಗಳಿಂದಲೂ ಪ್ರೇರಣೆ ಪಡೆದು ಎ. ವೆಂಕಟಸುಬ್ಬಯ್ಯ, ಎಂ. ಗೋವಿಂದ ಪೈ, ನಾ. ಶ್ರೀ. ರಾಜಪುರೋಹಿತ, ಶೇಷ ಭಿ. ಪಾರಿಶವಾಡ, ಎಂ. ಆರ್. ಶ್ರೀನಿವಾಸಮೂರ್ತಿ, ಟಿ. ಎಸ್. ವೆಂಕಣ್ಣಯ್ಯ, ಚೆನ್ನಕೇಶವ ಅಯ್ಯಂಗಾರ್, ಎಚ್. ಶೇಷಯ್ಯಂಗಾರ್, ಎ. ಆರ್. ಕೃಷ್ಣಶಾಸ್ತ್ರಿ, ಡಿ. ಎಲ್. ನರಸಿಂಹಾಚಾರ್, ರಂ ಶ್ರೀ ಮುಗಳಿ, ಜಿ. ವೆಂಕಟಸುಬ್ಬಯ್ಯ, ಗರ್ಗೇಶ್ವರಿ ವೆಂಕಟಸುಬ್ಬಯ್ಯ, ಭೀಮರಾವ್ ಚಿಟಗುಪ್ಪಿ, ಎಲ್. ಬಸವರಾಜು, ಸಿ. ಮಹದೇವಪ್ಪ, ಎಚ್. ದೇವೀರಪ್ಪ, ಶ್ರೀನಿವಾಸ ಹಾವನೂರ, ಹಂಪ ನಾಗರಾಜಯ್ಯ, ಎಂ. ಎಂ. ಕಲಬುರ್ಗಿ, ಚಿದಾನಂದ ಮೂರ್ತಿ, ಸ. ಸ. ಮಾಳವಾಡ, ಬಿ. ವಿ. ಮಲ್ಲಾಪುರ, ನೇಗಿನಹಾಳ ಈ ಮೊದಲಾದವರೆಲ್ಲ , ಹಳೆಯ ಹಾಗೂ ಹೊಸ ಪೀಳಿಗೆಯ ವಿದ್ವಾಂಸರೆಲ್ಲ, ಏಕಪ್ರಕಾರವಾಗಿ ಶ್ರಮಿಸಿದ್ದಾರೆ. ಹಾಗೆ ನೋಡಿದರೆ, ಕನ್ನಡ ಸಂಶೋಧನೆಯ ಬಹುಭಾಗ ಸಾಹಿತ್ಯವಿಚಾರದ ಶೋಧನೆಗಳಿಗೇ ಸಂಬಂಧಿಸಿದೆ. ಸಂಶೋಧಕರು ಬಹುವಾಗಿ ಈ ಭಾಗದಲ್ಲಿಯೇ ಕೆಲಸ ಮಾಡಿದ್ದಾರೆ. ಇವರಲ್ಲಿ ಎ. ವೆಂಕಟಸುಬ್ಬಯ್ಯ, ಗೋವಿಂದ ಪೈ, ರಾಜಪುರೋಹಿತ, ಎಂ. ಆರ್. ಶ್ರೀ., ಡಿ. ಎಲ್. ಎನ್., ಮುಗಳಿ ಮೊದಲಾದವರು ವಹಿಸಿದ ಪಾತ್ರ ತುಂಬ ಗಣ್ಯವಾದುದು.

ಒಂದು ಕಡೆ ಎಂ. ಎ. ರಾಮಾನುಜಯ್ಯಂಗಾರ್, ಎಸ್. ಜಿ. ನರಸಿಂಹಾಚಾರ್ ಪ್ರಾಚ್ಯ ಕಾವ್ಯಮಾಲೆಯ ಪರಿಶೋಧಕರಾಗಿ ಅಶ್ವಿನೀದೇವತೆಗಳಂತೆ ಪ್ರಾಚೀನ ಕೃತಿಗಳನ್ನು ಒಂದಾದಮೇಲೆ ಒಂದರಂತೆ ಸಂಪಾದಿಸಿ ಪ್ರಕಟಿಸುತ್ತಿದ್ದರೆ, ಇನ್ನೊಂದುಕಡೆ ಬಿ.ಎಂ.ಶ್ರೀ., ಎ.ಆರ್.ಕೃ., ವೆಂಕಣ್ಣಯ್ಯನವರು ಸಂಪಾದನಕಾರ್ಯದಲ್ಲಿ ಆಧುನಿಕ ವಿಧಿವಿಧಾನಗಳನ್ನು ಅನುಸರಿಸಿ ತರುಣ ಸಂಶೋಧಕರನ್ನೂ ಸಂಪಾದಕರನ್ನೂ ಪ್ರೋತ್ಸಾಹಿಸಿ ಮಾರ್ಗದರ್ಶನಮಾಡುತ್ತಿದ್ದರು. ಮೊದಲ ಗುಂಪು ಕೃತಿಗಳನ್ನು ಬೆಳಕಿಗೆ ತರುವಲ್ಲಿ ಉತ್ಸಾಹಿಸಿತು. ಎರಡನೆಯದು ಅವನ್ನು ಉನ್ನತವಿಮರ್ಶೆಯಿಂದ ಆಸಕ್ತ ವಾಚಕರಿಗೆ ಅರ್ಥಪೂರ್ಣವಾಗುವಂತೆ ಮಾಡಿತು. ಇವೆರಡರಿಂದಲೂ ಪ್ರೇರಣೆ ಪ್ರೋತ್ಸಾಹಗಳನ್ನು

ಆಸಕ್ತ ವಾಚಕರಿಗೆ ಅರ್ಥಪೂರ್ಣವಾಗುವಂತೆ ಮಾಡಿತು. ಇವೆರಡರಿಂದಲೂ ಪ್ರೇರಣೆ ಪ್ರೋತ್ಸಾಹಗಳನ್ನು ಪಡೆದು ಎಂ. ಜಿ. ವೆಂಕಟೇಶಯ್ಯ, ಕೆ. ವೆಂಕಟರಾಮಪ್ಪ, ಎನ್ಕೆ, ಮುಗಳಿ, ಮರಿಯಪ್ಪ ಭಟ್ಟ, ತ.ಸು. ಶಾಮರಾಯ, ಸಿ. ವೀರಣ್ಣ ಇವರು ಸಂಕ್ಷಿಪ್ತ ಸಾಹಿತ್ಯಚರಿತ್ರೆಗಳನ್ನು ರಚಿಸಿ ಅಭ್ಯಾಸಿಗಳ ಕೈ ನೆರವಿಗೆ ಒದಗಿದರು. ಇವರು ಸ್ವತಃ ಸಂಶೋಧನೆಯಿಂದ ಸಾಹಿತ್ಯ ಚರಿತ್ರೆಯ ಸಮಸ್ಯೆಗಳನ್ನು ಬಿಡಿಸಲು, ಸಾಮಾನ್ಯವಾಗಿ ತೊಡಗಲಿಲ್ಲ ಎನ್ನುವುದು ನಿಜವಾದರೂ, ಸಿದ್ಧ ಸಂಶೋಧನ ಸಾಮಗ್ರಿಯನ್ನು ಸಾಕಷ್ಟು ಎಚ್ಚರಿಕೆಯಿಂದ ಬಳಸಿತು. ಇವುಗಳಲ್ಲಿ ಮುಗಳಿಯವರ 'ಕನ್ನಡ ಸಾಹಿತ್ಯ ಚರಿತ್ರೆ' ಕವಿಯ ಶಕ್ತಿ ಸಾಮರ್ಥ್ಯಗಳನ್ನೂ ಕೃತಿಮೌಲ್ಯವನ್ನೂ ಯುಗಧರ್ಮವನ್ನೂ ಗುರುತಿಸುವಲ್ಲಿ ಪ್ರಕಟಿಸಿದ ಒಳನೋಟಗಳಿಂದಾಗಿ ಇತರ ರಚನೆಗಳಿಗಿಂತ ಮೇಲೆ ನಿಲ್ಲುವುದು ಸಾಧ್ಯವಾಯಿತು. ಆದರೆ ಇಲ್ಲಿಯೂ ಕೊರತೆಗಳು ಬೇಕಾದಹಾಗಿವೆ.

ಇಷ್ಟಾಗಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ಸಮಗ್ರವಾಗಿ ರಚಿಸುವ ಕೆಲಸ ೨೦ನೆಯ ಶತಮಾನದ ಕೊನೆಯ ಮೂರು ದಶಕಗಳಿಂದ ಈಚೆಗೆ ಕಾರ್ಯಗತವಾಗತೊಡಗಿದ್ದು ಕಾಣುತ್ತದೆ. ಸಮಾನಾಂತರ ವಾಹಿನಿಗಳಾಗಿ ಮೈಸೂರು ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳ ಕನ್ನಡ ವಿಭಾಗಗಳಿಂದ ಈ ಕೆಲಸ ಆರಂಭಗೊಂಡಿದ್ದು, ಮೈಸೂರು ವಿಶ್ವವಿದ್ಯಾಲಯ ಇನ್ನೂ ಮುಗಿಸಬೇಕಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಗಳ ರಚನಾವಿಧಾನ ಮತ್ತು ಸಾಧನೆಗಳನ್ನು ಕುರಿತ ಹಾಗೆಯೇ ಕನ್ನಡದಲ್ಲಿ ಬಿ. ಆರ್. ನರಸಿಂಹ ಮೂರ್ತಿ ಎಂಬುವರ ಒಂದು ನಿಬಂಧವೇ ಪ್ರಕಟವಾಗಿರುವುದನ್ನಿಲ್ಲಿ ನೆನೆಯಬೇಕು.

೨೦ನೆಯ ಶತಮಾನದ ಪೂರ್ವಭಾಗದಲ್ಲಿ ವಿದ್ವಾಂಸರಿಗೆ ಕನ್ನಡ ಸಾಹಿತ್ಯ ಚರಿತ್ರೆಯ ಕವಿಕಾವ್ಯ ಸಮಸ್ಯೆಗಳೆಲ್ಲವನ್ನೂ ಅವುಗಳ ಎಲ್ಲ ಗಹನತೆಯ ನೆಲೆಗಳಲ್ಲಿಯೂ ಗಾಢವಾಗಿ ಚರ್ಚಿಸಿ ಅವಕ್ಕೆ ಪರಿಹಾರಗಳನ್ನು ಕಂಡುಹಿಡಿಯುವುದು ತಮ್ಮ ಪ್ರಥಮ ಕರ್ತವ್ಯ ಎನ್ನಿಸಿತ್ತು. ಪಂಪ, ರನ್ನ, ನಾಗಚಂದ್ರ, ಕುಮಾರವ್ಯಾಸ, ಲಕ್ಷ್ಮೀಶ, ಮುದ್ದಣ ಮೊದಲಾದವರ ಮೇಲೆ ವಿದ್ವಾಂಸರು ಗ್ರಂಥಗಳನ್ನೇ ಬರೆದರು. ಈಗಲೂ ಈ ತೆರನ ಗ್ರಂಥಗಳು ಬರುತ್ತಿವೆ. ಹೀಗಿದ್ದೂ ಸಹ, ಕನ್ನಡದ ಇನ್ನೆಷ್ಟೋ ಗಣ್ಯ ಹಾಗೂ ಗೌಣ ಕವಿಗಳ ಬಗೆಗೆ ತನಿಯಾದ, ತೌಲನಿಕವಾದ ವಿವೇಚನಗಳು ನಡೆಯಬೇಕಾಗಿದ್ದು ಅವು ಸಮರ್ಥ ವಿಮರ್ಶಕರಿಗಾಗಿ ದಾರಿ ಕಾಯುತ್ತಿವೆ. ಒಬ್ಬ ಕವಿ, ಒಂದು ಕವಿಸಮುದಾಯ, ಒಂದು ಕಾಲಘಟ್ಟ, ಒಂದು ಯುಗದ ಅವಧಿ ಇವನ್ನು ಪ್ರತ್ಯೇಕ ಪರಿಶೀಲನಗೆ ಎತ್ತಿಕೊಂಡು ಹೊಸ ಪೀಳಿಗೆಯ ವಿದ್ವಾಂಸರು ೨೦ನೆಯ ಶತಮಾನದ ಉತ್ತರಾರ್ಧದಲ್ಲಿ ಗಮನಾರ್ಹವಾಗಿ ಕೆಲಸ ಮಾಡಿರುವುದೂ ಪ್ರಾಸಂಗಿಕವಾಗಿ ಸಂಶೋಧನೆಗೆ ಕವಿ-ಕಾವ್ಯ ಸಮಸ್ಯೆಗಳನ್ನು ವಿವೇಚಿಸಿರುವುದೂ ಕಂಡುಬರುತ್ತವೆ. ಎಂ. ಚಿದಾನಂದ ಮೂರ್ತಿ, ಹಂಪ ನಾಗರಾಜಯ್ಯ, ಎಂ. ಎಂ. ಕಲಬುರ್ಗಿ, ಎಸ್. ಶಿವಣ್ಣ, ಬಿ. ಎಸ್. ಸಣ್ಣಯ್ಯ, ಶ್ರೀನಿವಾಸ ಹಾವನೂರ ಮುಂತಾದವರ ಪ್ರಯತ್ನಗಳು ಗಮನಾರ್ಹವಾಗಿವೆ. ಇವರ ಸಂಶೋಧನೆಗಳು ಕನ್ನಡ ಸಾಹಿತ್ಯ ಚರಿತ್ರೆಯ ಅವೆಷ್ಟೋ ಸಮಸ್ಯೆಗಳಿಗೆ ಪರಿಹಾರಗಳನ್ನು ಒದಗಿಸಿವೆ. ಇಂಥವರ ಸಂಖ್ಯೆ ಈಚೆಗೆ ಕ್ಷೀಣಿಸುತ್ತಿರುವಂತೆ ತೋರುತ್ತದೆ. ಹೀಗಾಗಿ ಈ ಭಾಗದ ತಿಳಿವಳಿಕೆಯಲ್ಲಿ ಇನ್ನೂ ದಟ್ಟವಾದ ಕತ್ತಲುಕೋಣೆಗಳಿವೆ. ಅಶ್ಮಗರ್ಭಸದೃಶ ಸಮಸ್ಯೆಗಳ ಕೋಷ್ಠಗಳೂ ಇವೆ.

ಒಂದು ಕಾಲಕ್ಕೆ ಶತಮಾನದ ಪೂರ್ವಾರ್ಧದ ಮೊದಲ ದಶಕಗಳಲ್ಲಿ 'ಕವಿರಾಜಮಾರ್ಗ'ದ ಕರ್ತೃತ್ವ ವಿಚಾರ, ಈಚೆಗೆ ಉತ್ತರಾರ್ಧದ ಆರಂಭದ ದಶಕಗಳಲ್ಲಿ ವಡ್ಡಾರಾಧನೆಯ ಕರ್ತೃತ್ವ ಮತ್ತು ಕಾಲವಿಚಾರಗಳು ವಿದ್ವಾಂಸರ ಗಮನವನ್ನು ಬಹುವಾಗಿ ಸೆಳೆದಿವೆ. ಮೊದಲ ವಿಷಯಕ್ಕೆ ಫ್ಲೀಟ್, ಪಾಠಕ್, ಆರ್. ನರಸಿಂಹಾಚಾರ್, ರಾಜಪುರೋಹಿತ, ವೆಂಕಣ್ಣಯ್ಯ, ಭೀಮರಾವ್ ಚಿಟಗುಪ್ಪಿ, ಎಂವಿ.ಸೀ. ಈ ಕೆಲವರು ನಡಸಿರುವ ಚರ್ಚೆಗಳು ಕುತೂಹಲಕರವಾದವು. ಹಾಗೆಯೇ ಎರಡನೆಯ ವಿಷಯಕ್ಕೆ ಡಿ. ಎಲ್. ನರಸಿಂಹಾಚಾರ್, ಆ.ನೇ. ಉಪಾಧ್ಯೆ, ಎಂ. ಎಂ. ಕಲಬುರ್ಗಿ, ಹಂಪ ನಾಗರಾಜಯ್ಯ, ಭೀಮರಾವ್ ಚಿಟಗುಪ್ಪಿ, ಕೆ. ಜಿ. ಕುಂದಣಗಾರ್, ಗೋವಿಂದ ಪೈ ಮೊದಲಾದವರು ನಡೆಸಿರುವ ಚರ್ಚೆಗಳೂ ಸಹ. ಇಷ್ಟೆಲ್ಲ ಚರ್ಚೆಗಳು ನಿರಂತರವಾಗಿ ನಡೆದರೂ, ನಡೆಯುತ್ತಿದ್ದರೂ ಈ ಹಿಂದೆ ಆರ್. ನರಸಿಂಹಾಚಾರ್, ಎ. ವೆಂಕಟಸುಬ್ಬಯ್ಯನವರ ನಡುವೆ ನಡೆಯುತ್ತಿದ್ದ ರೀತಿಯ ವಾದಕೋಲಾಹಲಗಳು ಈಗ ಕಾಣಿಸುತ್ತಿಲ್ಲ. ಅಂದಿನ ಸಾಹಿತ್ಯಾಸಕ್ತಿ ಸಂಶೋಧನಪಟುತ್ವಗಳು ಇಂದು ಕಾಣದೇ ಇರುವುದಕ್ಕೆ ಹಳಗನ್ನಡ ಸಾಹಿತ್ಯದಲ್ಲಿ ಪ್ರೀತಿ ಅಭಿನಿವೇಶಗಳೂ ಬಹು ಭಾಷಾಭಿಜ್ಞತೆಯ ಪರಿಶ್ರಮ ಪಾಂಡಿತ್ಯಗಳೂ ಕಡಮೆಯಾಗುತ್ತಿರುವುದೇ ಕಾರಣಗಳಾಗಿರಬಹುದು.

೧೧

೧೯ನೆಯ ಶತಮಾನದಲ್ಲಿ ಪ್ರಾಚೀನ ಸಾಹಿತ್ಯದ ಆಸಕ್ತಿ ಅಭಿರುಚಿಗಳು ಪಂಡಿತಮಾನ್ಯವಾದ ಪ್ರೌಢಕಾವ್ಯಗಳನ್ನು ರಚಿಸುವ ಕಡೆಗಿತ್ತು. ಹೀಗಾಗಿ ಪ್ರಾಚೀನಸಾಹಿತ್ಯದ ಬಹುಭಾಗ ಬೆಳಕು ಕಾಣದೆ ಕತ್ತಲುಕೋಣೆಗಳಲ್ಲಿ, ಅಟ್ಟಗಳ ಮೇಲಣ ಪೆಟ್ಟಿಗೆಗಳಲ್ಲಿ ಹುದುಗಿತ್ತು. ಕಿಟ್ಟೆಲ್ - ರೈಸ್ ಮೊದಲಾದ ವಿದೇಶದ ವಿದ್ವಾಂಸರೂ ಅವರಿಂದ ಸ್ಫೂರ್ತಿ ಮಾರ್ಗದರ್ಶನಗಳನ್ನು ಪಡೆದ ಆರ್. ನರಸಿಂಹಾಚಾರ್, ಬಿ. ಎಂ. ಶ್ರೀ., ಹಳಕಟ್ಟಿ, ಬಸವನಾಳ, ವೆಂಕಣ್ಣಯ್ಯ, ಎ.ಆರ್.ಕೃ. ಇಂಥವರ ಪ್ರಬಲವೂ ವ್ಯಾಪಕವೂ ಆದ ಪ್ರಯತ್ನಗಳಿಂದ ಪಾಠಶೋಧನೆ ಪ್ರಕಟನೆಗಳಿಗೆ ಹುರುಪುಬಂದಿತು. ಈ ಕಾರ್ಯ ಅಲ್ಲಿಂದ ಸ್ವಲ್ಪ ಮುಂದೆ ಪರಿಚಯ ವಿಮರ್ಶೆ ವ್ಯಾಖ್ಯಾನಗಳಿಗೆ, ತುಲನಾತ್ಮಕ ಅಧ್ಯಯನ ಮೌಲ್ಯನಿರ್ಣಯಗಳಿಗೆ ದಾರಿ ತೆಗೆಯಿತು. ಇನ್ನುಮುಂದೆ ಹೆಚ್ಚು ನಡೆಯಬೇಕಾದ್ದು ಈ ಕೆಲಸ. ಈ ಕೆಲಸದಲ್ಲಿ ಆಕರಗಳನ್ನು ಗುರುತಿಸುವುದು, ಅವುಗಳೊಂದಿಗೆ ಹೋಲಿಸಿ ಸ್ವೀಕಾರ ಸ್ವೋಪಜ್ಞತೆಗಳನ್ನು ವಿಶದಪಡಿಸುವುದು, ಸಾಮಾಜಿಕ ಸಾಂಸ್ಕೃತಿಕ ಹಾಗೂ ಐತಿಹಾಸಿಕ ಸಂದರ್ಭಗಳನ್ನು ಒಗ್ಗೂಡಿಸುವುದು, ಅಲ್ಲಿ ಮಾನವೀಯ ಸೆಲೆಗಳನ್ನೂ ಸಂಘರ್ಷಗಳನ್ನೂ ಪ್ರಕಟಿಸುವುದು ಇಂತಹ ದೃಷ್ಟಿಧೋರಣೆಗಳು ಮುಖ್ಯವಾಗಿವೆ.

೧೨

೨೦ನೆಯ ಶತಮಾನದಲ್ಲಿಯ ಕೆಲವು ಗಣ್ಯವಾದ ರಚನೆಗಳನ್ನು ಈ ಮುಂದೆ ನೆನೆಯಬಹುದಾಗಿದೆ.

A Grammar of the Kannada Language in English comprising the three dialects of the language (F. Kittel), 'ಕರ್ಣಾಟಕ ಕವಿಚರಿತೆ' (ಆರ್. ನರಸಿಂಹಾಚಾರ್), 'ಕನ್ನಡ ಕೈಪಿಡಿ' (ಮೈಸೂರು ವಿಶ್ವವಿದ್ಯಾನಿಲಯ), 'ನಾಡೋಜ ಪಂಪ' (ಮುಳಿಯ ತಿಮ್ಮಪ್ಪಯ್ಯ), 'ಕನ್ನಡ ಸಾಹಿತ್ಯ ಚರಿತ್ರೆ' (ರಂ. ಶ್ರೀ. ಮುಗಳಿ), 'ಕನ್ನಡ ಶಾಸನಗಳ ಸಾಂಸ್ಕೃತಿಕ

ಅಧ್ಯಯನ' (ಎಂ. ಚಿದಾನಂದಮೂರ್ತಿ), 'ಭಾರತೀಯ ಕಾವ್ಯಮೀಮಾಂಸೆ' (ತೀ. ನಂ. ಶ್ರೀಕಂಠಯ್ಯ), 'ಕವಿರಾಜಮಾರ್ಗ ಪರಿಸರದ ಕನ್ನಡಸಾಹಿತ್ಯ' (ಎಂ. ಎಂ. ಕಲಬುರ್ಗಿ), 'ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ' (ವೆಂಕಟೇಶ ಸಾಂಗಲಿ), ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ (ಮೈಸೂರು ವಿಶ್ವವಿದ್ಯಾನಿಲಯ), 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ' (ಬೆಂಗಳೂರು ವಿಶ್ವವಿದ್ಯಾಲಯ), ಕನ್ನಡ ಅಧ್ಯಯನ ಸಂಸ್ಥೆಯ 'ಕನ್ನಡ ಛಂದಸ್ಸಿನ ಚರಿತ್ರೆ' (ಮೈಸೂರು ವಿಶ್ವವಿದ್ಯಾನಿಲಯ), 'ಕನ್ನಡ ಗ್ರಂಥ ಸಂಪಾದನೆ' (ಡಿ. ಎಲ್. ನರಸಿಂಹಾಚಾರ್), 'ಗೋವಿಂದ ಪೈ ಸಂಶೋಧನ ಸಂಪುಟ' (ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ), 'ಜಾನಪದ ಅಧ್ಯಯನ' (ದೇ. ಜವರೇ ಗೌಡ), 'ಜಾನಪದ ಸ್ವರೂಪ' (ಹಾ. ಮಾ. ನಾಯಕ), 'ವಿಚಾರ ಪ್ರಪಂಚ' (ಸೇಡಿಯಾಪು ಕೃಷ್ಣ ಭಟ್ಟ), 'ಕನ್ನಡ ಭಾಷಾ ಚರಿತ್ರೆ' (ಪ್ರ. ಗೋ. ಕುಲಕರಣಿ), 'ಕನ್ನಡ ಚಿತ್ರಕಾವ್ಯ' (ಟಿ. ವಿ. ವೆಂಕಟಾಚಲ ಶಾಸ್ತ್ರೀ), 'ಹೊಸಗನ್ನಡದ ಅರುಣೋದಯ' (ಶ್ರೀನಿವಾಸ ಹಾವನೂರ), 'ಹೊಸಗನ್ನಡ ಕವಿತೆಯ ಛಂದಸ್ಸು' (ಕೆ. ಜಿ. ನಾರಾಯಣ ಪ್ರಸಾದ್) ಕವಿರಾಜ ದರ್ಪಣ (ತೆಕ್ಕುಂಜ ಗೋಪಾಲಕೃಷ್ಣ ಭಟ್ಟ), 'ಪ್ರಬುದ್ಧ ಕರ್ಣಾಟಕ ಚಿನ್ನದ ಸಂಪುಟ' (ಮೈಸೂರು ವಿಶ್ವವಿದ್ಯಾನಿಲಯ), A Descriptive Grammar of Pampa Bharata (B. Ramachandra Rao), ಪ್ರಬುದ್ಧ ಕರ್ಣಾಟಕ ವಿಜ್ಞಾನದ ಚಿನ್ನದ ಸಂಪುಟ (ಮೈಸೂರು ವಿಶ್ವವಿದ್ಯಾನಿಲಯ).

ಭಾಮಹನೇನೋ "ಗುರೂಪದೇಶಾದಧ್ಯೇತುಂ ಶಾಸ್ತ್ರಂ ಜಡಧಿಯೋಪ್ಯಲಮ್" ಎಂದರೆ 'ಮಂದಬುದ್ಧಿಗಳು ಬೇಕಾದರೆ ಗುರುಗಳ ಉಪದೇಶದಿಂದ ಶಾಸ್ತ್ರವನ್ನು ಅಭ್ಯಾಸ ಮಾಡಬಹುದು', (ಕಾವ್ಯಾಲಂಕಾರ ೧-೫) ಎಂಬುದಾಗಿ ಹೇಳಿ ಕಾವ್ಯದ ಅನನ್ಯತೆ ಪ್ರಾಶಸ್ತ್ಯವನ್ನು ಎತ್ತಿಹಿಡಿದಿರಬಹುದು. ಆದರೆ ವಿಮರ್ಶೆ ವ್ಯಾಖ್ಯಾನ ಸಂಶೋಧನೆಗಳು ಮಂದಬುದ್ಧಿಗಳಿಂದ ಆಗುವ ಕೆಲಸಗಳೇನಲ್ಲ, ಅವು ಸಹ ಪರಿಶ್ರಮ ಪ್ರತಿಭೆ ಪಾಂಡಿತ್ಯಗಳು ಮುಪ್ಪುರಿಗೊಂಡಾಗಲೇ ಶ್ರೇಷ್ಠವಾಗಿರುವುದು ಸಾಧ್ಯ.



# ಪಂಜೆ ಶೈಲಿಯ ಪದಬಂಧ :
# ಒಂದು ಸೃಜನಾತ್ಮಕ ವಿವೇಚನೆ

- ಮಾವಳ್ಳಿ ಜಿ. ರಾಮು

ದಿ|| ಪಂಜೆ ಮಂಗೇಶರಾವ್ (ಜನನ 22-2-1874 ಮರಣ 24-10-1937) ಕನ್ನಡ ಸಾರಸ್ವತ ಲೋಕದಲ್ಲಿ ಬಾಲ ಸಾಹಿತ್ಯ, ಸಣ್ಣ ಕತೆ ಕಾದಂಬರಿ ಶಾಸನ, ಶಿಕ್ಷಣ ಲೇಖನಗಳು ಇತ್ಯಾದಿಗಳಿಂದ ಚಿರಸ್ಮರಣೀಯರಾಗಿ ಅಜರಾಮರರಾಗಿದ್ದಾರೆ. ಮಹಾಕವಿ ಕುವೆಂಪುರವರು 'ಪಂಜೆಯವರಿಗೆ' ಎಂಬ ಕವನದಲ್ಲಿ ಅವರ ಸಹಜ ವ್ಯಕ್ತಿತ್ವ ಹಾಗೂ ಸಾಹಿತ್ಯ ಶೃಂಗ ಕೊಡುಗೆ ಸೊಗಸಾಗಿ ಕವನಿಸಿದ್ದಾರೆ. ಅವರ ಉತ್ಕೃಷ್ಟ ಉತ್ತಮಿಕೆಯನ್ನು ಚೌದಶಪದಿಯಲ್ಲಿ ಕಾಣಿಸಿದ್ದಾರೆ.

ಹಾಲು ಸಕ್ಕರೆ ಸೇರಿ ನೀವಾದಿರಾಚಾರ್ಯ,
ನಡೆಯ ಮಡಿಯಲಿ, ನುಡಿಯ ಸವಿಯಲ್ಲಿ ನಿಮ್ಮ ಬಗೆ
ಹಸುಳೆ ನಗೆ : ನಿಮ್ಮ ಕೆಳೆಯೊಲುಮೆ ಹಗೆತನಕೆ ಹಗೆ.
ಕಪ್ಪುರಕೆಕಿಡಿ ಮತ್ತೆ ಸತ್ಯಕ್ಕೆ ಸೌಂದರ‍್ಯ
ಸಂಗಮಿಸಿದಂತೆ, ರಂಜಿಸಿದೆ ಜೀವನ ಸೂರ‍್ಯ
ನಿಮ್ಮದೆಮ್ಮಯ ನುಡಿಯ ಗುಡಿಗೆ, ಮಂಗಳ ಕಾಂತಿ,
ಪರಿಮಳಂಗಳನಿತ್ತು, ನಿಮ್ಮ ಬಾಳಿನ ಶಾಂತಿ
ಮತ್ತೆ ರಸಕಾರ್ಯಗಳಿಗುಪಮೆ ವೀಣಾತೂರ‍್ಯ !
ಕಚ್ಚಿದರೆ ಕಬ್ಬಾಗಿ, ಹಿಂಡಿದರೆ ಜೇನಾಗಿ,
ನಿಮ್ಮುತ್ತಮಿಕೆಯನೆ ಮೆರೆದಿರಯ್ಯ ! ಚಪ್ಪಾಳೆ
ಮೂಗುದಾರವನಿಕ್ಕಿ, ನಡೆಯಿಸಿದರದು ಬಾಳೆ,
ಹಿರಿಯ ಸಿಹಿ ಚೇತನಕೆ? ಕೀರ್ತಿಲೋಭಕೆ ಬಾಗಿ
ಬಾಳ್ಬಂಡಿ ಸೊಗಸೆ ಹೆಗಲಿತ್ತವರು ನೀವಲ್ಲ :
ತೇರ‍್ಮಿಣಿಯನೆಳದಿರಲ್ಲದೆ ಮತ್ತೆ ಮಣಿದಿಲ್ಲ :-

ಆದರೆ ಅವರ ಬಹು ಮುಖ್ಯ ಕೊಡುಗೆಯೆಂದೆನಿಸುವ 'ಪದಬಂಧ ಶೈಲಿ' ಅಷ್ಟಾಗಿ ವರಿಷ್ಠರು ಗಮನಿಸದಿದ್ದ ಕಾರಣದಿಂದ ಸಾರ್ವಜನಿಕರು ಮರೆತು ಬಿಡುತ್ತಿರುವ ವಿಷಯವಾಗಿದೆ. ಪ್ರಸ್ತುತ ಲೇಖನ ಈ ಮರೆಯಾಗುತ್ತಿರುವ ರಚನಾಕ್ರಮದ ಪದಬಂಧವನ್ನೇ ಕುರಿತುದಾಗಿದೆ ಮತ್ತು ಅದರ ವೈಶಿಷ್ಟ್ಯ ಪ್ರತಿಪಾದಿಸುವ ಸೃಜನಾತ್ಮಕ ವಿವೇಚನೆಯನ್ನು ಒಳಗೊಂಡಿದೆ.

ಸಂಸ್ಕೃತದ 'ಯಮಕ ಶೈಲಿ' ಇಂಗ್ಲೀಷಿನ 'ಪಾಲಿನ್ ಡ್ರೋಮ್ಸ್' ಉತ್ತರ ಕರ್ನಾಟಕದ 'ಕಿರುಚಳಿ ಮರುಚುಳಿ' ಇಗೋ ಕನ್ನಡದಲ್ಲಿ ಪ್ರೊ : ಜಿ. ವೆಂಕಟಸುಬ್ಬಯ್ಯನವರ 'ಗತಿ ಪ್ರತ್ಯಾಗತ' ಇತ್ಯಾದಿ ಕರೆಯಲ್ಪಡುವ ಶೈಲಿಯ ಮೇಲ್ಪಂಕ್ತಿ ಸೂತ್ರವನ್ನು ಅನುಸರಿಸಿ, ಅದೇ ರೀತಿಯ ಅಕ್ಷರಗಳ ಸಂಯೋಜನೆಯನ್ನು ಕನ್ನಡದಲ್ಲಿ ಪಂಜೆಯವರು ಮೊಟ್ಟಮೊದಲಿಗೆ ಪ್ರಾರಂಭಿಸಿದರು.

ಕುಬೇರನಿಗೇನಿರಬೇಕು, ವಿಕಟಕವಿ, ಮದ್ರಾಸಿನ ಸಿದ್ರಾಮ, ಜಲಜ, ಸನ್ಯಾಸ, ಸರಸ, ಡಬೇರನಿಗೇನಿರಬೇಡ, ಕನಕ, ಕಿಟಕಿ, ಕೀರ್ತನ ನರ್ತಕೀ, ಟೊಮಾಟೊ, ಸಿಡಿಪಿಡಿಸಿ ಮತ್ತನುಅನುತ್ತಮ, ನಳಿದೋಳಿನ ಎಂಬ ಪದಬಂಧಗಳು ಅವರ ಲೇಖನಿಯಿಂದ ಉದ್ಭವಿಸಿದುವು. ಸರಳವಾಗಿ ಪದಬಂಧ ಶೈಲಿಯ ಸೂತ್ರ (ಫಾರ್ಮುಲ) ಹೀಗಿದೆ.

"ವರ್ಣಮಾಲೆಯ ಅಕ್ಷರಗಳ ಜೋಡಣೆಯಿಂದ ಬಾಂಧವ್ಯದರ್ಥ ವಿನ್ಯಾಸದಿಂದುಂಟಾದ ಪದ ಅಥವಾ ವಾಕ್ಯ ರಚಿಸಿ ಅದನ್ನು ಮುಂದಿನಿಂದಾಗಲೀ, ಹಿಂದಿನಿಂದಾಗಲೀ ಓದಿದರೆ ಅರ್ಥ ಮತ್ತು ಅಕ್ಷರಗಳ ಸಂಯೋಜನೆಯ ಒಂದೇ ರೀತಿಗೆ 'ಪಂಜೆ ಶೈಲಿಯ ಪದಬಂಧ' ಎಂದೆ ನಾಮಕರಣ ಹಾಗೂ ಶೀರ್ಷಿಕೆ ಕೊಡಲಾಗಿದೆ. ಇದಕ್ಕೆ ಇಂಗ್ಲೀಷಿನಲ್ಲಿ ಅತ್ಯುತ್ತಮ ಸೊಗಸಾದ ನಿದರ್ಶನ ನೆಪೋಲಿಯನ್ ಬೋನಾ ಪಾರ್ಟಿಯವರ ಹೇಳಿಕೆ :

Able was I ere I saw Elba

ಪಂಜೆಯವರ ನಂತರ ಈ ಪದ ಸಂಯೋಜನೆಗೆ ಇತರರು ಗಮನ ಕೊಟ್ಟಂತೆ ಕಾಣುವುದಿಲ್ಲ. ಪಂಜೆಪೂರ್ವದ ಕನ್ನಡ ಸಾರಸ್ವತ ದಿಗ್ಗಜಗಳಾದ ಪಂಪ, ರನ್ನ, ಜನ್ನ, ಹರಿಹರ, ಕುಮಾರವ್ಯಾಸ, ಲಕ್ಷ್ಮೀಶ, ರತ್ನಾಕರ ವರ್ಣಿ ಮುಂತಾದವರು ಈ ಪದಬಂಧ ಶೈಲಿಗೆ ಕೈ ಹಾಕಿರಲಿಲ್ಲವೆ? ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. 'ಪಂಪ' 'ರನ್ನಜನ್ನರ' ಪದಗಳು ಯಾವ ಕಡೆಯಿಂದ ಓದಿದರೂ ಒಂದೇ ಆದರೂ ಈ ವಿಷಯ ಸಂಶೋಧನೆಗೆ ಸಂಬಂಧಿಸಿದುದು. ಮತ್ತು ತಾತ್ಕಾಲಿಕವಾಗಿ ಊಹಾಪೋಹಗೆ ಸಮಂಜಸವಲ್ಲ. ಸದ್ಯಕ್ಕೆ ಪಂಪನಿಂದ ಕುವೆಂಪುವರೆವಿಗೂ ಮತ್ತು ಅನಂತರದ ಎಲ್ಲಾ ಸಾಹಿತ್ಯ ರಚಕರೂ ಈ ದಿಶೆಯಲ್ಲಿ ಗಮನ ಹರಿಸಿಲ್ಲ. ಪಂಜೆ ಮಂಗೇಶರಾವ್ ಅವರು ಮಾತ್ರ ಪದಬಂಧ ಶೈಲಿಯಲ್ಲಿ ತೊಡಗಿ ಅಗ್ರ ಆದ್ಯ ಮನ್ನಣೆ ಗಳಿಸಿದವರು. ಆದ್ದರಿಂದಲೇ ಲೇಖನದ ಶೀರ್ಷಿಕೆ ಸಾರ್ಥಕವಾಗಿ ಬಳಕೆಯಾಗಿದೆ - ಒಂದು ಸೃಜನಾತ್ಮಕ ವಿವೇಚನೆ.

ಮೇಲೆ ನಿರೂಪಿಸಿರುವ ಸಮಸ್ಯೆಯನ್ನು ಸ್ವಲ್ಪಮಟ್ಟಿಗಾದರೂ ಪರಿಹರಿಸಲು ನನ್ನ ಈ ಲೇಖನದ ಮೂಲೋದ್ದೇಶವಾಗಿದೆ. ಪಂಜೆಯವರು ದಾರಿದೀಪವಾಗಿ ಬಿಟ್ಟುಹೋದ ಹೆಜ್ಜೆಗಳ ಪರಂಪರೆ ಕೈಗೆತ್ತಿಕೊಂಡು ಹೊಸ ಪದಬಂಧದ ಪದವಾಕ್ಯಗಳನ್ನು ನಿರ್ಮಿಸಿ ಇಲ್ಲಿ ಮುಂದುವರಿಸಲಾಗಿದೆ. ಈ ಪ್ರಯೋಗಶೀಲತೆಯ ಪ್ರಯತ್ನ ಎಲ್ಲಾ ಸಾಹಿತ್ಯಾಸಕ್ತರಲ್ಲೂ ಹೆಚ್ಚಿಸಲು ಕನ್ನಡ ಅಕ್ಷರಾನುಕ್ರಮಣಿಕೆ ಮೇರೆಗೆ ಮಾದರಿಗಾಗಿ ಉದಾಹರಿಸಿದ್ದೇನೆ. ಪಂಜೆಯವರ ಅನುಗ್ರಹ ಆಶೀರ್ವಾದ ಪೂರಕವೆಂಬ ಪೂಜ್ಯ ಭಾವದಿಂದ ಹಾಗೂ ಅವರ ಸ್ಮರಣಾರ್ಥ ಅಭಯದ ನೆರವಿನ ಭರವಸೆಯಿಂದ.

ಸ್ವರಗಳು

ಅ : ಅದ್ರಿಭವ್ಯಭದ್ರಿಅ

ಉ : (1) ಉಕ್ಕುವಕ್ಕರೆಗೆ ರೆಕ್ಕವಕ್ಕುಉ

(2) ಉಸಿರಾಟರಾಸಿಉ

ಎ : (1) ಎತ್ತಿದರೆದತ್ತಿಎ

(2) ಎಲೆಮನೆ ಮಲೆಎ

ಏ : ಏರಿಸುತ್ತಾಸುರಿಏ

ಒ : (1) ಒಣಪ್ರಾಣಒ

ಓ : (1) ಓತಪ್ರೋತಓ

ವ್ಯಂಜನಗಳು :

ಕ : (1) ಕಲ್ಯಾಣಕಾರ್ಯ, ಕಾಣಲ್ಯಾಕ

(2) ಕೆಟ್ಟಮತಿಗಳಗತಿಮಟ್ಟಕ್ಕೆ

(3) ಕುಶಲಕಲೆಕಲಶಕು

ಖ : (1) ಖರೇಸುರೇಖ

ಗ : (1) ಗಿಡಮರತರುಲತೆಯಂತೆಲರುತರಮಡಗಿ

(2) ಗಲ್ಲಾದಿಗ್ಗಜರು, ಜಗ್ಗದಿಲ್ಲಾಗ

ಚ : (1) ಚೀರುತಿವೆತಿರುಚೀ

ಜ : (2) ಜನುಮಕ್ಕೆ ಮನನ

ಟ : (1) ಟಪಾಲುಪಾಟ

ತ : (1) ತಮ್ಮಬರೆದರೆಬಮ್ಮತ್ರ

(2) ತೆರದಸೋದರತೆ

ದ : (1) ದಿನದವತಾರಿ, ತಾವದನದಿ

(2) ದಾಸನೆಂದರಿದೆನೆಂಸದಾ

(3) ದುಪ್ಪಟ್ಟೊಪ್ಪದು

ಧ : (1) ಧರ್ಮಾರ್ಥಂಧ

ನ : (1) ನವರಸಾರ್ಥಸಾರವನ

(2) ನೆತ್ತಮನಾಡನೆಡನಾಮತ್ತನೆ

(3) ನಾಲಗೆಯಭಯಗೆಲನಾ

ಪ : (1) ಪರಿಭವಭರಿಪ

(2) ಪರಿಹಾರಧನವನ್ನುವನಧರಹಾರಿಪ

(3) ಪರೂರಿನಲ್ಲಿ ನರಿರೂಪ

(4) ಪುರೂರವನ ವರರೂಪು

ಬ : (1) ಬೇರೆಂದರಿದಲೆಂಬೇ

ಭ : (1) ಭಲಾರೇಖರೇಲಾಭ

ಮ : (1) ಮತ್ತನುಆನುತ್ತಮ

(2) ಮುರಾರಿಹರಿರಾಮು

(3) ಮಂತ್ರಸ್ತೋತ್ರಮಂ

ಯ : (1) ಯದ್ವಾತದ್ವಾಯ

(2) ಯಮಪುರಿಯುರಿಪುಮಯ

(3) ಯುಕ್ತಿಮುಕ್ತಿಯು

ರ : (1) ರಸಾವೇಶವೇಸಾರ

(2) ರೊಟ್ಟಿಕೊಟ್ಟಿರೊ

ಲ : (1) ಲಂಚಪ್ರಚಲಂ

(2) ಲಂಬಮೇಬಲಂ

(3) ಲಾಲಿಸಲಿಸಲಿಲಾ

ವ : (1) ವನವಿಹಾರದಸೋದರಹಾವಿನವ

(2) ವೈರಭಾವಭಾರವೈ

ಶ : (1) ಶರೀರೀಶ

(2) ಶೀಲಾಫಲಾಶೀ

(3) ಶಕ್ಯಂಶ

(4) ಶತಾಂಶ

ಸ : (1) ಸಿರಿಹಾಸಹಾರಿಸಿ

(2) ಸುಲಿದಮೂಲ್ಯಮೂದಲಿಸು

ಹ : (1) ಹತ್ತಿಮೆತ್ತೆಮೆತ್ತಿಹ

(2) ಹುಳಹೊಳಹು

ಅಕ್ಷರಮಾಲೆಯ ಅನುಕ್ರಮಣಿಕೆ ಅನುಸರಿಸಿ ಪೋಣಿಸಿದ ಪಂಜೆಶೈಲಿಯ ವಾಕ್ಯಗಳು, ಮುತ್ತುರತ್ನಗಳಂತೆ ಉದಾಹರಣಾರ್ಥವಾಗಿ ಮೇಲೆ ತೋರಿಸಲಾಗಿದೆ. ಕಿಟಕಿಯಲ್ಲಿ ಪ್ರದರ್ಶಿಸಿದ ಅಂಗಡಿಯ ಅಮೂಲ್ಯ ಆಕರ್ಷಕ ವಸ್ತುಗಳ ಪರಿ, ಇವುಗಳ ಅವಲೋಕನದಿಂದ ಕೂಡಲೇ ಓದುಗರ ಗಮನ ಸೆಳೆಯುವ ವಿಷಯವೆಂದರೆ - ಮೂರು ಅಕ್ಷರಗಳ 'ಧರ್ಮಾಂಧ' ಎಂಬ ಸಣ್ಣ ಪದದಿಂದ ಇಪ್ಪತ್ತೊಂದು ಅಕ್ಷರಗಳುಳ್ಳ ಹಿರಿದಾದ ವಾಕ್ಯ "ಕೊಳವುಳಿದುದಡಕೆ ನೆಗೆದಾಗನೆ ಕೆಡದುದುಳಿವುಳಕೊ" ವರೆಗೂ ವಿಸ್ತರಿಸಿದ ಆಯಾಮ ಹಾಗೂ ತತ್ಪರಿಣಾಮದ ಬೆಳವಣಿಗೆಯ ಸಾಧ್ಯತೆಯ ಆಶಾದಾಯಕ ದಿಕ್ಕುಗಳು ಇದು ಪಂಜೆಶೈಲಿಯ ನಿಷ್ಠ ಬರಹಗಾರರಿಗೆ ಎಸೆದಂತಹ ಸವಾಲಾಗಿಯೂ ತೋಚುತ್ತದೆ ಮತ್ತು ಮುಂದಕ್ಕೆ ಹೊಸಬಗೆಯ ಶಬ್ದಭಂಡಾರ ರಚನೆಗೆ ಅವಕಾಶ ಕಲ್ಪಿಸಿಕೊಡುವ ಮಾದರಿಯಾಗುತ್ತದೆ. ಅಧ್ಯಯನ ಶೀಲರು, ಸಂಶೋಧಕರು ಈ ಶೀರ್ಷಿಕೆಯಡಿಯಲ್ಲಿ ಎಷ್ಟು ಪ್ರಯತ್ನಸಿದರೆ ಅಷ್ಟು ಮೈಲುಗಲ್ಲುಗಳು ಪಂಜೆಶೈಲಿಯ ಪ್ರಗತಿ ಮನ್ನಡೆಯುವ ಭಾಗ್ಯ ಪಡೆಯುತ್ತಾರೆ. ಈ ಶೈಲಿಯ ಆಳಹರಹುಗಳ 'ನಿಧಿಬೋಧಿನಿ' ಅಥವಾ 'ಪಕ್ಷೇನಿಕ್ಷೇಪ' ಅಂಥ ಶೈಲಿಯ ಪ್ರಜ್ಞೆವುಳ್ಳ ನಿಷ್ಠಾವಂತರನ್ನೇ ಅವಲಂಬಿಸಿದೆ ಎಂಬುದಂತೂ ಖಚಿತ.

ಲೋಕಜೀವನ ಸಾರವನ್ನು ಪಂಜೆಶೈಲಿಯ ಮೂಲತತ್ವ ಆಧಾರ ರೂಪಕವಾಗಿ ಶ್ರೀ ಡಿ. ವಿ. ಜಿ.ಯವರು 'ಮಂಕುತಿಮ್ಮನ ಕಗ್ಗದ ೧೮೭ನೇ ಪದ್ಯಕ್ರಮದಲ್ಲಿ ಕೆಳಕಂಡಂತೆ ನುಡಿದಿದ್ದಾರೆ, ಹಾಡಿ ಹರಸಿದ್ದಾರೆ, ಶುಭ ಹಾರೈಸಿದ್ದಾರೆ.

ನುಡಿಗಟ್ಟಿನಾಟದಕ್ಕರ ಚೀಟಿಯೊಟ್ಟಿನಲಿ :<br>
ತಡಕಿ ನಾವಾಯ್ದಾಯ್ದು ನುಡಿ ಜೋಡಿಪಂತೆ ::<br>
ಬಿಡಿ ಜೀವ ಸಂಗಾತಿ ಜೀವಗಳನರಸಿ ತಾಂ :<br>
ಪಡೆದಂದು ಪೂರ್ಣವದು - ಮಂಕುತಿಮ್ಮ ::

ಡಿ.ವಿ.ಜಿ.ಯವರು ಪಂಜೆಶೈಲಿಯ ಸೂತ್ರದ ತಿರುಳನ್ನೇ ಸಾರವತ್ತಾಗಿ ಅನನುಕರಣ, ಅನುಪಮ ಹಾಗೂ ಬೇರಾವ ರೀತಿಯಲ್ಲೂ ಅಸಾಧ್ಯವೆಂಬ ಸಂಕ್ಷಿಪ್ತತೆಯಲ್ಲಿ ಮೇಲಿನ ಪದ್ಯ ಕಂಡರಿಸಿದ್ದಾರೆ. ಇದು ಡಿ.ವಿ.ಜಿ.ಯವರು ಪಂಜೆಯವರಿಗೆ ಮತ್ತು ಅವರ ಶೈಲಿಯನ್ನು ಮುಂದುವರಿಸಿಕೊಂಡು ಹೋಗುವ ಸಾಹಿತ್ಯಾಸಕ್ತರಿಗೆ ಸಲ್ಲಿಸಿರುವ ನೆನಪಿನ ಕಾಣಿಕೆಯೋ? ಅಥವಾ ಮಾರ್ಗಸೂಚಿಯೋ? ಬಗೆ ಕದಡುವ ವಿಷಯವಾದರೂ, ಒಬ್ಬ ಹಿರಿಯ ಕವಿಚೇತನಕ್ಕೆ ಇನ್ನೊಬ್ಬ ಹಿರಿಯ ಕವಿಚೇತನದ ನಮನಗಳ ವಿಧವೆಂದು ಭಾವಿಸಲು ಅಡ್ಡಿಯಿಲ್ಲ.

**ಇತಿಮಿತಿಯ ಅಂಕುಶ**

ಹೀಗೆ ಪಂಜೆಶೈಲಿಯ ಪದಬಂಧದ ರಚನಾ ಕೌಶಲ್ಯ ಬಹಳ ಸರಳ ಸೂತ್ರವುಳ್ಳದ್ದು ಹಾಗೂ ಎಲ್ಲಾ ಅಕ್ಷರಸ್ಥರಿಗೂ ಸಾಧ್ಯವಾಗುವ ಅಕ್ಷರಗಳ ಹೊಂದಾಣಿಕೆಯ ಪ್ರಯೋಜನಕಾರಿ ಕಸರತ್ತು. ಆದರೆ ಈ ಸರಳಸೂತ್ರದ ಅಸಂಖ್ಯ ಪದಕಟ್ಟುವ ಪದ್ಧತಿಯ ಶೈಲಿಗೆ ಇತಿಮಿತಿಗಳ ಚೌಕಟ್ಟು ಇಲ್ಲವೇ ಎಂಬ ಪ್ರಶ್ನೆಗೆ ಉತ್ತರವಾಗಿ ಪಂಜೆಶೈಲಿಯ ಪದಬಂಧವು ಹೊರತಾಗಿಲ್ಲ ಎಂದು ಗೊತ್ತಾಗುತ್ತದೆ. ಹಾಗೂ ಇಂಥ ಇತಿಮಿತಿಯ ಸೌಷ್ಟತೆಯ ಸಾರ್ಥಕತೆ, ಪ್ರಾಮುಖ್ಯತೆ ಎತ್ತಿ ಹಿಡಿದಂತಾಗಿ ಶೈಲಿಯ

ರಚಕರಿಗೆ ದಾರಿ ದೀಪವಾಗಿ ಎಡವಿ ಮುಗ್ಗರಿಸುವುದನ್ನು ತಪ್ಪಿಸುತ್ತದೆ. ಈಗ ಇತಿಮಿತಿಗಳನ್ನು ಕಂಡುಕೊಳ್ಳೋಣ : -

ಪಂಜೆಶೈಲಿಯ ಆರಂಭದಲ್ಲಿನ ಹಾಗೂ ಕೊನೆಯ ಅಕ್ಷರ ಮೂಲತಃ ಒಂದೇ ಆಗಿರಬೇಕು ಹಾಗೂ ಅದೇ ಅನುಕ್ರಮಣಿಕೆಯಂತೆ ಒಡನಾಡಿಯಾಗಿ ಮಿಕ್ಕ ಅಕ್ಷರಗಳು ಜೋಡಣೆಯಲ್ಲಿ ಹೊಂದಿಸಿ ಬಳಕೆಯಲ್ಲಿ ಒಳಮೂಡಬೇಕು ಎಂಬುದು ಪಂಜೆ ಶೈಲಿಯ ಸೂತ್ರ. ಅಂತೆಯೇ ಅದನ್ನು ಉಲ್ಲಂಘಿಸುವ ಅಥವಾ ಸೂತ್ರಕ್ಕೆ ಒಳಗಾಗದಿರುವ ಸ್ವರಗಳ ಪೈಕಿ : ಇ, ಈ, ಋ, ೠ, ಐ, ಅಂ, ಅಃ : ವ್ಯಂಜನಗಳ ಪೈಕಿ : ಫ, ಜ್ಞ, ಛ, ಜ, ವ, ಣ, ಷ, ಳ ಎಂಬುದನ್ನು ಗುರುತಿಸಬಹುದು. ಅತಿ ಮುಖ್ಯವಾಗಿ ಚೌಕಟ್ಟಿನ ಆರಂಭದ ಅಕ್ಷರಗಳಾಗಿ ಮೇಲ್ಕಂಡ ಇತಿಮಿತಿ ಅಕ್ಷರಗಳನ್ನು ಪಂಜೆ ಶೈಲಿಯಲ್ಲಿ ಬಳಕೆ ಮಾಡಲು ಸಾಧ್ಯವಾಗಿಲ್ಲ.

ಶೈಲಿವಿಹೀನ ಪಂಜೆಯ ಪದಬಂಧ

ಸೂತ್ರದನ್ವಯ ಮೇಲ್ನೋಟಕ್ಕೆ ಸರಿಯಾಗಿ ಕಂಡುಬಂದರೂ, ಸೂಕ್ಷ್ಮವಾಗಿ ವೈಜ್ಞಾನಿಕ ಮನೋಭಾವದ ಶಿಸ್ತಿನಿಂದ ಅವಲೋಕಿಸಿದರೆ, ಇತಿಮಿತಿಯ ಚೌಕಟ್ಟುಗಿಂತಲೂ ಮಹತ್ವವಿರುವ 'ಶೈಲಿವಿಹೀನ ಪದಬಂಧ' ಪದ : ವಾಕ್ಯ ಜೋಡಣೆಯ ಸಮಯದಲ್ಲಿ ಲಭಿಸುತ್ತದೆ. ಈ ಶೈಲಿವಿಹೀನ ಪಂಜೆ ಪದಬಂಧ, ಶುದ್ಧ ಪಂಜೆಶೈಲಿಯ ಪದಬಂಧ ರಚನೆಯನ್ನು ನಿಷ್ಕ್ರಿಯತೆಯ ಮಾರ್ಗದಲ್ಲಿ ಕೆಡವಲು ಎರಡು ಹಂತದಲ್ಲಿ ಕಾಡುತ್ತದೆ.

1) ಮೊದಲನೆ ಹಂತದಲ್ಲಿ ಪ್ರತಿ ಪದಬಂಧಕ್ಕೂ ಅರ್ಥ ಸ್ಪಷ್ಟತೆಯ ನಿಲವು ನಿಖರವಾಗಿರದಿದ್ದರೆ ಶೈಲಿವಿಹೀನಪಂಜೆಯ ಪದಬಂಧವಾಗುತ್ತದೆ. ಉದಾಹರಣೆಗೆ 'ಪಕೋಡಕೋಪ' 'ಗಾಳಿಬಾಳಿಗಾ' 'ಗೋರಿತೇರಿಗೋ' 'ನೇತ್ರಪುತ್ರನೇ' 'ಲೋಚನಚಲೋ' ಸುಸಂಬಂಧವಾಗಿ ಪಂಜೆಶೈಲಿ ಪಾತ್ರ ಪಡೆದರೂ, ಅರ್ಥ ಮಸುಕು ಮಸುಕಾಗಿ ವಿಶ್ಲೇಷಣೆಯ ಅರ್ಥಕೋಶಕ್ಕೆ ಸೋಲುತ್ತದೆ. ಆದ್ದರಿಂದ ಅರ್ಥ ಅಸ್ಪಷ್ಟತೆಯ ತೊಡಕು ನಿವಾರಣೆ ಬಹಳ ಅತ್ಯಗತ್ಯ ಮತ್ತು ಪ್ರಥಮ ಸ್ಥಾನದ ಮುಖ್ಯಾಂಶ ಕೋರಿ ರಚನೆಯಲ್ಲಿ ತೊಡಗಲು ಆದ್ಯ ಲಕ್ಷ್ಯ ನೀಡಬೇಕು.

2) ಎರಡನೇ ಹಂತದಲ್ಲಿ ಅಕ್ಷರಗಳ ಸಮುದಾಯ ಸಂಯೋಜನೆಯ ವಿನ್ಯಾಸ ಹಿಂದೆ, ಮುಂದೆ ಸಮಾನಾಂತರವಾಗಿ ಪರಿಕಲ್ಪಿಸಬೇಕು. ತಪ್ಪಿದಲ್ಲಿ ಶೈಲಿ ವಿಹೀನತೆಗೆ ಕಾರಣವಾದ ವ್ಯಾಪ್ತಿಗೆ ಸಾಕ್ಷಿಯಾಗುತ್ತದೆ. ಈ ಕೆಳಕಾಣಿಸಿದ ಪದಬಂಧಗಳಿಂದ ವಿಹೀನತೆಯ ಅಂಶ ಸಾದರಪಡಿಸಲಾಗಿದೆ.

1) ಧರ್ಮದ 2) ತುಂಬಬಂತು 3) ತೀರಿಸೋರೀತಿ 4) ವ್ಯೋಮಕ್ಷೇಮವ್ಯೋ

"ಧರ್ಮದ" ಪದಬಂಧದಲ್ಲಿ ಮೊದಲ ಅಕ್ಷರದ ಮಹಾಪ್ರಾಣ ಅಂತ್ಯಾಕ್ಷರದ ಅಲ್ಪಪ್ರಾಣವಾಗಿ ಅರ್ಥವತ್ತಾಗಿದ್ದರೂ ಸಮರ್ಪಕ ಸಮಾನಾಂತರದ ಪರಿಕಲ್ಪನೆ ಇಲ್ಲ.

ಅದೇ ಅಕ್ಷರದ ಅಕ್ಷರ ಬಳಕೆಯಾಗದೆ ಸೋತಿದೆ. ಎರಡನೆಯ ಪದಬಂಧ 'ತುಂಬ ಬಂತು' ಎಂಬುದರಲ್ಲಿ 'ಂ' ಮೊದಲನೆ 'ತು' ನಂತರದ ಪರಿಕಲ್ಪನೆಯಾದರೂ ಕೊನೆಯ 'ತು' ಜೊತೆಯಲ್ಲಿ

ಉಪಯೋಗವಾಗದೆ 'ಬ' ಅಕ್ಷರ ಜೊತೆಯಾಗಿದೆ. ಆದ್ದರಿಂದ ಶೈಲಿಯ ಸಂಪೂರ್ಣ ಅಕ್ಷರಾನುಕ್ರಮಣಿಕೆಯಲ್ಲಿ ಸಫಲವಾಗಿಲ್ಲ. ಇದೇ ರೀತಿ ಮೂರನೆಯ ಪದಬಂಧ 'ತೀರಿಸೋರೀತಿ'ಯಲ್ಲಿ ದೀರ್ಘ 'ತೀ' ಕೊನೆಗೆ ಹೊಂದಿಕೊಂಡಿರದೆ 'ರೀ' ಸಹಚರ್ಯೆಯಲ್ಲಿ ಕಾಣಸಿಗುವುದು ಶೈಲಿ ವಿಹೀನತೆಯ ನಿದರ್ಶನವಾಗಿದೆ. ನಾಲ್ಕನೆಯ ಪದಬಂಧ ಯೋಮಕ್ಷೇಮವೋ ಎಂಬುದರಲ್ಲಿ 'ಯ' ವತ್ತು ಮೊದಲ ಅಕ್ಷರಕ್ಕಿದ್ದರೂ ಕೊನೆಯ ಅಕ್ಷರಕ್ಕೆ ಹಮ್ಮಿಕ್ಕೊಂಡಿಲ್ಲ. ಹೀಗೆ ಹಲವಾರು ಶೈಲಿವಿಹೀನ ಪದಬಂಧ ಉದಾಹರಿಸಬಹುದು.

ಮೇಲ್ಕಂಡ ಇತಿಮಿತಿ ಹಾಗೂ ಶೈಲಿವಿಹೀನ ಪಂಜೆಯ ಪದಬಂಧ ಸಂಗತಿಗಳ ಬಗ್ಗೆ ಎಚ್ಚರವಹಿಸಿ, ಪರಿಶುದ್ಧ ಅರ್ಥಪೂರ್ವ, ನಿಯಮಬದ್ಧ ಪಂಜೆಶೈಲಿ ಪೋಣಿಸಿ ಹೆಣೆದು ಹುರಿಗಟ್ಟಿದರೆ ಅರ್ಥಾತ್ ಪಂಜೆ ಶೈಲಿಯ ಪ್ರಜ್ಞೆ ಇರಿಸಿ, ಉಳಿಸಿ, ಬೆಳೆಸಿದರೆ, ಅಂತಹ ಪ್ರಯತ್ನಶಾಲಿಗಳಿಗೆ ಪದ ಬಳಕೆಯ ಕೌಶಲ್ಯ ಹೆಚ್ಚುತ್ತದೆ. ಮನೋರಂಜನೆಯ ಬೆಡಗು ದೊರಕುತ್ತದೆ. ಹೊಸ ಪದಭಂಡಾರಕ್ಕೆ ನಾಂದಿಯಾಗಿ ಕುತೂಹಲಕಾರಿ ಕಸರತ್ತಾಗುತ್ತದೆ. ಇವು ವೈಯಕ್ತಿಕ ಫಲದಾನಂದಗಳಾದರೆ ಕನ್ನಡ ಸಾಹಿತ್ಯಿಕ ದೃಷ್ಟಿಯಿಂದ ಇಂಗ್ಲೀಷಿನ 'ಪಾಲಿನ್‌ಡ್ರೋಮ್ಸ್' ಸಂಸ್ಕೃತದ 'ಯಮಕ' ಶೈಲಿಗಳೊಂದಿಗೆ ಹೊಯ್‌ಕಯ್ಯಾಗಿ ಪಂಜೆ ಶೈಲಿಯ ಪದಬಂಧ ಸರಿಸಮನಾಗಿ ಅವುಗಳಷ್ಟೇ ಕನ್ನಡ ಭಾಷೆಗೆ ಶೋಭೆ ಹಾಗೂ ಪ್ರಾಧಾನ್ಯತೆ ಒದಗಿಸಿಕೊಡುತ್ತದೆ ಎಂಬುದರಲ್ಲಂತೂ ಸೂರ್ಯ ಪ್ರಭೆಯಷ್ಟೆ ಸತ್ಯಾಂಶ ಉಳ್ಳದ್ದು. ಇಂತಹ ಜ್ಞಾನಾಭಿವೃದ್ಧಿ ಹಾಗೂ ಭಾಷಾಭಿವೃದ್ಧಿಗೆ ಸಹಕಾರಿಯಾಗಿರುವ ಅಕ್ಷರಗಳ ಚಮತ್ಕೃತಿಯ ವೈಭವದ ಕಾರ್ಯ ಬಹಳ ಫಲದಾಯಕ ಮತ್ತು ಸಂದರ್ಭೋಚಿತವಾಗಿ ಔನ್ನತ್ಯ ಪ್ರಾಯವಾದುದು.



# ವಿಜಯನಗರ ಕಾಲದಲ್ಲಿ ಶ್ರೀವೈಷ್ಣವಸಾಹಿತ್ಯದ ಶೋಧ

- ಪ್ರೊ।। ನಾ. ಗೀತಾಚಾರ್ಯ

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ವಿಜಯನಗರಕಾಲವು ಅತ್ಯಂತ ಚಟುವಟಿಕೆಯ ಕಾಲವೆಂದು ದಾಖಲಾಗಿದೆ. ಈ ಕಾಲದಲ್ಲಿ ನಡೆದ ಸಾಹಿತ್ಯ ಚಟುವಟಿಕೆ ಬೇರೆ ಯಾವ ಕಾಲದಲ್ಲೂ ನಡೆದಿಲ್ಲವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ವಿಜಯನಗರ ಸಾಮ್ರಾಜ್ಯ ಹೇಗೆ ಇತಿಹಾಸದಲ್ಲಿ ಕಳೆಕಟ್ಟಿ ಸಂಭ್ರಮದಿಂದ ಬೆಳೆಯಿತೋ ಹಾಗೆಯೇ ಅದರೊಂದಿಗೆ ಕನ್ನಡ ಸಾಹಿತ್ಯವೂ ಬೆಳೆಯಿತು ಎಂದು ಹೇಳಬಹುದು. ಕನ್ನಡ, ಸಂಸ್ಕೃತ, ತೆಲುಗು, ತಮಿಳು ಈ ನಾಲ್ಕು ಭಾಷೆಗಳಲ್ಲಿ ಜೈನ, ವೈಷ್ಣವ, ವೀರಶೈವ ಈ ಮೂರು ಧರ್ಮಗಳಲ್ಲೂ ಅನೇಕ ಕೃತಿಗಳು ಸೃಷ್ಟಿಯಾಗಿವೆ. ಕನ್ನಡದಲ್ಲಿ ಪುರಂದರ-ಕನಕ-ಕುಮಾರವ್ಯಾಸ ಸಂಸ್ಕೃತದಲ್ಲಿ ಶ್ರೀನಾಥ ಕವಿ, ತೆಲುಗಿನಲ್ಲಿ ಅಲ್ಲಸಾನಿ ಪೆದ್ದಣ್ಣ ಮುಂತಾದವರು ಕವಿ ಸಾರ್ವಭೌಮರಾಗಿ ಕಾಣಿಸಿಕೊಂಡಿದ್ದಾರೆ. ಕ್ರಿ.ಶ. 1400 ರಿಂದ 1600ರ ವರೆಗೆ 150ಕ್ಕೂ ಹೆಚ್ಚು ಜನ ಕವಿಗಳು, 400ಕ್ಕೂ ಹೆಚ್ಚು ಕೃತಿಗಳು ಈ ಕಾಲದಲ್ಲಿ ಕಂಡುಬಂದಿರುವುದನ್ನು ಸುಲಭವಾಗಿ ಪಟ್ಟಿಮಾಡಬಹುದಾಗಿದೆ. “ಒಂದು ಸಮೀಕ್ಷೆಯ ಪ್ರಕಾರ ಆ ಕಾಲದಲ್ಲಿ 180ಕ್ಕೂ ಹೆಚ್ಚಾಗಿದ್ದ ಕನ್ನಡ ಕವಿಗಳು ನಾಮಾಂಕಿತಗಳು ತಿಳಿಯದ ವಚನಕಾರನ್ನು ಬಿಟ್ಟು 300ಕ್ಕೂ ಹೆಚ್ಚಾಗಿ ಗ್ರಂಥಗಳನ್ನು ರಚಿಸಿರುತ್ತಾರೆ ಎಂದು ಶ್ರೀ ಟಿ. ಸಿ. ಎಂ. ಕೊಟ್ರಯ್ಯ ಅವರು ಅಭಿಪ್ರಾಯ ಪಡುವುದನ್ನು ಇಲ್ಲಿ ಉಲ್ಲೇಖಿಸಬಹುದು.[1] ಕುಮಾರವ್ಯಾಸ, ವ್ಯಾಸರಾಯ, ವಾದಿರಾಜ, ಪುರಂದರದಾಸ, ಕನಕದಾಸ, ಬೇಲೂರು ವೈಕುಂಠದಾಸ, ಷಡಕ್ಷರ ಕವಿ, ರತ್ನಾಕರ ವರ್ಣಿ, ಕುಮಾರ ವಾಲ್ಮೀಕಿ (ನರಹರಿ ಪಂಡಿತ) ಅಭಿನವವಾದಿ ವಿದ್ಯಾನಂದ (ಕಾವ್ಯಸರ), ಗುಬ್ಬಿ ಮಲ್ಲಣಾರ್ಯ (ವೀರಶೈವಾಮೃತ ಪುರಾಣ) ಚಾಟು ವಿಠಲನಾಥ, ಲಕ್ಷ್ಮೀಶ, ಶಿವತತ್ವಚೂಡಾಮಣಿಯ ಕವಿ ಹೀಗೆ ಅನೇಕ ಕನ್ನಡ ಕವಿಗಳನ್ನು ಹೆಸರಿಸಬಹುದು.

ವಿಜಯನಗರದ ಅರಸರ ಆರಂಭಕಾಲದ ರಾಜಧರ್ಮ ವೀರಶೈವವಾಗಿ ‘ವಿರೂಪಾಕ್ಷ’ ಎಂಬ ಕನ್ನಡಾಕ್ಷರದ ರಾಜಮುದ್ರೆಯಿದೆಯಾದರೂ ಸಾಳುವ ಮತ್ತು ತುಳುವ ಅರಸರ ಕಾಲದಲ್ಲಿ ವಿಶೇಷವಾಗಿ ಕೃಷ್ಣದೇವರಾಯನ ಕಾಲದಲ್ಲಿನ ರಾಜಧರ್ಮ ಶ್ರೀವೈಷ್ಣವವಾಗಿದೆ. ಈ ಧರ್ಮ ವಿಷ್ಣುವರ್ಧನನ ಕಾಲದಲ್ಲಿಯೂ ರಾಜಧರ್ಮವಾಗಿದ್ದುದನ್ನು ಗಮನಿಸಬಹುದು. ರಾಮಾನುಜರು ಹೊಯ್ಸಳರ ಕಾಲದಲ್ಲೇ ಕರ್ನಾಟಕವನ್ನು ತಮ್ಮ ಧರ್ಮದ ಪ್ರಮುಖ ಕಾರ್ಯಕ್ಷೇತ್ರವನ್ನಾಗಿಸಿಕೊಂಡು ರಾಜಮನ್ನಣೆಯನ್ನು ಪಡೆದು ಸಮಾಜದಲ್ಲಿ ಸಾಕಷ್ಟು ಪ್ರಭಾವ-ಪ್ರಚಾರ ಹೊಂದಿದ್ದುದ್ದರ ಫಲದಿಂದ ದಕ್ಷಿಣ ಕರ್ನಾಟಕದಾದ್ಯಂತ ಜನಸಾಮಾನ್ಯರಲ್ಲಿ ಸಮಾಜದ ಮುಖ್ಯ ವಾಹಿನಿಯಲ್ಲಿ ಸುಲಭವಾಗಿ ಗ್ರಹಿಸಬಹುದಾಗಿದೆ. ಇದಕ್ಕೆ ಪೂರಕವಾಗಿ ಈ ಅಭಿಪ್ರಾಯವನ್ನು ಗಮನಿಸಬಹುದು. “ವಿಜಯನಗರದಿಂದ ತಮ್ಮ ಸಾಮ್ರಾಜ್ಯವನ್ನಾಳಿದ ಸಾಳುವ ಮತ್ತು ತುಳುವ ವಂಶದ ಅರಸರು ಶ್ರೀವೈಷ್ಣವ ಧರ್ಮಕ್ಕೆ ವಿಶೇಷವಾದ ರಾಜಮನ್ನಣೆ, ಪ್ರೋತ್ಸಾಹಗಳನ್ನು ಉದಾರವಾಗಿ

---

ಹಂಪಿಯಲ್ಲಿ ನಡೆದ 14ನೇ ಇತಿಹಾಸಿಕ ಸಮ್ಮೇಳನದಲ್ಲಿ (ಜುಲೈ ೮, ೯, ೧೦ - ೨೦೦೦) ಮಂಡಿಸಿದ ಪ್ರಬಂಧ.

1. ಇತಿಹಾಸ ಅಕಡೆಮಿಯ 14ನೇ ಸಮ್ಮೇಳನಾಧ್ಯಕ್ಷರ ಅಧ್ಯಕ್ಷಭಾಷಣ ಮುದ್ರಿತ ಪ್ರತಿ ಪುಟ ೫, ೨೦೦೦ ಹಂಪೆ

ಕೊಡಲಾರಂಭಿಸಿದರು. ಆ ಕಾರಣಗಳಿಂದಾಗಿ ಶ್ರೀ ವೈಷ್ಣವ ಧರ್ಮವು ಹಂಪೆಯ ಪ್ರದೇಶಕ್ಕೆ ಹೊರಗಿನಿಂದ ಮತ್ತು ಹೊಸದಾಗಿ ಬಂದ ಧರ್ಮವಾಗಿದ್ದರೂ ಬಹುಶೀಘ್ರದಲ್ಲಿಯೇ ಜನಾದರಣೀಯವಾಯಿತು. ಹಾಗೂ ಹೆಚ್ಚಿನ ಪ್ರಚಾರವನ್ನು ಪಡೆಯುವಲ್ಲಿ ಸಫಲವಾಯಿತು. ಅದರ ಪರಿಣಾಮವಾಗಿ ಶ್ರೀ ವೈಷ್ಣವಧರ್ಮದ ಅನುಯಾಯಿಗಳಾದ ಆಳ್ವಾರರುಗಳ ಶಿಲಾಮೂರ್ತಿಗಳು ಅಲ್ಲಲ್ಲಿ ಸ್ಥಾಪನೆಗೊಂಡವು. ಮಂದಿರಗಳೂ ಅಸ್ತಿತ್ವಕ್ಕೆ ಬಂದವು. ಅಲ್ಲದೇ ಅವರ ಧಾರ್ಮಿಕ ಸಂಕೇತಗಳಾದ 'ವಡಗಲೈ', 'ತೇಂಗಲೈ' ತ್ರಿಪುಂಡ್ರಗಳು (ನಾಮಗಳು) ದೇವಾಲಯಗಳ ಮತ್ತು ಮಂಟಪಗಳ ಕಂಬಗಳಮೇಲೆ ಕೆತ್ತಲ್ಪಟ್ಟು ಈಗಲೂ ಅಲ್ಲಲ್ಲಿ ಕಾಣಬರುತ್ತವೆ.[2] ಈ ಹೇಳಿಕೆಯಲ್ಲಿಯ ಹೊಸದಾಗಿ ಮತ್ತು ಹೊರಗಿನಿಂದ ಬಂದ ಧರ್ಮವೆಂಬ ಅಂಶವನ್ನು ಸ್ವಲ್ಪ ವಿಚಾರಮಾಡಬೇಕಾದ ಅಗತ್ಯವಿದೆ. ಹೊಯ್ಸಳರ ಕಾಲದಲ್ಲೇ ಕರ್ನಾಟಕವನ್ನು ಪ್ರವೇಶಿಸಿದ ಶ್ರೀವೈಷ್ಣವಧರ್ಮ ರಾಜಮನ್ನಣೆ ಪಡೆದು ಜನಾನುರಾಗಗಳಿಸಿ ಸಾಮಾನ್ಯಧರ್ಮವಾಗಿ ಸಮಾಜದಲ್ಲಿ ರೂಢಿಯಲ್ಲಿದ್ದುದನ್ನು ಒಪ್ಪಿಕೊಂಡರೆ ಇದು ವಿಜಯನಗರದ ವೇಳೆಗೆ ಕರ್ನಾಟಕದ ಸಮಾಜದಲ್ಲಿ ಬಳಕೆಯಲ್ಲಿದ್ದ ಇನ್ನೊಂದು ಪ್ರಮುಖ ಧರ್ಮವಾಗಿರುತ್ತದೆ. ಈ ಧರ್ಮೀಯರು ಪ್ರಮುಖ ಸ್ಥಾನಗಳಲ್ಲಿ ಇದ್ದು ರಾಜನ ಮೇಲೆ ಪ್ರಭಾವ ಬೀರುವ ಮಟ್ಟಕ್ಕೆ ಬೆಳೆದಿದ್ದರಲ್ಲದೆ ಸಾಹಿತ್ಯಿಕ-ಸಾಂಸ್ಕೃತಿಕ-ಶೈಕ್ಷಣಿಕವಾಗಿ ಬಲಾಢ್ಯರಾಗಿದ್ದುದರಿಂದಲೇ ರಾಯನ ಆಸ್ಥಾನದ ಅಷ್ಟದಿಗ್ಗಜ ಪರಂಪರೆ, ತಾತಾಚಾರ್ಯರಂಥವರಿಗೆ ತಿರುಪತಿಯ ಮೇಲ್ವಿಚಾರಣೆ, ರಾಜಗುರು ಗೌರವ, ಇಡೀ ರಾಜ್ಯದ ಧರ್ಮಾಧಿಕಾರಿ ಸ್ಥಾನ ಇತ್ಯಾದಿಗಳು ಲಭ್ಯವಾಗಿವೆ ಎಂದು ಹೇಳಬಹುದು. ಹೊಸ ಧರ್ಮವಾಗಿ ಪ್ರವೇಶಿಸಿದ್ದರೆ ಇಷ್ಟೆಲ್ಲ ಮನ್ನಣೆ ಸಾಧ್ಯವಾಗುತ್ತಿತ್ತೆ ಎಂಬ ಪ್ರಶ್ನೆ ಏಳುತ್ತದೆ.

ಆಸ್ಥಾನ ಕವಿಗಳ 'ಅಷ್ಟದಿಗ್ಗಜ' ಪರಂಪರೆ ಕೃಷ್ಣದೇವರಾಯನ ಆಸ್ಥಾನದ ವಿಶೇಷ ಸಂಗತಿಯಾಗಿದ್ದು ಇದಕ್ಕೆ ಶ್ರೀವೈಷ್ಣವ ಧರ್ಮದ ಪ್ರಭಾವವೇ ಕಾರಣವೆಂದು ಕೆಲವು ಇತಿಹಾಸಜ್ಞರು ಅಭಿಪ್ರಾಯಪಡುತ್ತಾರೆ. ಶ್ರೀಕೃಷ್ಣದೇವರಾಯ ಶ್ರೀವೈಷ್ಣವ ಧರ್ಮಾವಲಂಬಿಯಾಗಿದ್ದುದರಿಂದ[3] ಅವನ ರಾಣಿವಾಸದಲ್ಲಿ ಅಥವಾ ಆಪ್ತವಲಯದಲ್ಲಿ ಪ್ರಾಯಶಃ ಇದಕ್ಕೆ ಪ್ರಬಲವಾದ ಒತ್ತಾಸೆಯಿದ್ದುದರಿಂದ ಆ ಧರ್ಮದಲ್ಲಿ ಈ ಮೊದಲೇ ರೂಢಿಯಲ್ಲಿದ್ದ ಈ ಅಷ್ಟದಿಗ್ಗಜ ಪರಂಪರೆಯನ್ನು ರಾಯ ಅಳವಡಿಸಿಕೊಂಡಿದ್ದಾನೆಂದು ವಾದವಿದೆ.[4] ಈ ಪರಂಪರೆಯಿದ್ದುದರ ಬಗ್ಗೆ, ಇದರಲ್ಲಿ ಕೇವಲ ತೆಲುಗು ಕವಿಗಳಷ್ಟೇ ಇದ್ದುದೇಕೆ ಎಂಬ ಬಗ್ಗೆ ಇತಿಹಾಸಕಾರರಲ್ಲಿ ಚರ್ಚೆಯಿದ್ದರೂ ಇದರ ಮೇಲಿರುವ ಶ್ರೀವೈಷ್ಣವ ಪ್ರಭಾವವನ್ನಂತೂ ತಳ್ಳಿಹಾಕಲಾಗುವುದಿಲ್ಲ. ಈ ಎಲ್ಲ ಅಂಶಗಳಿಂದ ಕೃಷ್ಣದೇವರಾಯನ

---

[2] ಅದೇ ಪುಟ 9

[3] ಕೃಷ್ಣದೇವರಾಯ ಸ್ವತಃ ಆಮುಕ್ತಮೌಲ್ಯದಂತಹ ಶ್ರೀವೈಷ್ಣವಧರ್ಮನಿಷ್ಠಕೃತಿಯನ್ನು ಬರೆಯುವಷ್ಟು ಪ್ರಭಾವಿತನಾಗಿರಬೇಕಾದರೆ ಅವನ ರಾಣಿವಾಸದಲ್ಲಿಯೇ ಒಬ್ಬಳು ಶ್ರೀವೈಷ್ಣವ ಧರ್ಮೀಯಳು ಆಗಿದ್ದಿರಬೇಕೆಂಬ ಅನುಮಾನ ಮೂಡುತ್ತಿದೆ. ತಿರುಮಲಾಂಬೆ ಶ್ರೀರಂಗಪಟ್ಟಣದವಳಾಗಿದ್ದು ಅವಳ ಮೂಲದಿಂದಲೇ ಇದು ಏಕಾಗಿರಬಾರದು? ವಿಚಾರಮಾಡಬೇಕಾಗಿದೆ :

[4] ನಿರುಪಮಾ, 'ಆಮುಕ್ತಮೌಲ್ಯದ', ಆರತಿ ಪಬ್ಲಿಕೇಷನ್, 1994, ಪು:14, ಸಾಹಿತ್ಯ ಗೋಷ್ಠಿಗಳಲ್ಲಿ ಅಷ್ಟದಿಗ್ಗಜಗಳಿರುವುದು ಶ್ರೀವೈಷ್ಣವ ಸಂಪ್ರದಾಯವಾಗಿತ್ತು ಎಂಬ ತಮ್ಮ ಹೇಳಿಕೆಗೆ ಪೂರಕವಾಗಿ ಮೇಲ್ಕಂಡ ಪ್ರಭಾಕರಾ ಮತ್ತರ ಆಮುಕ್ತಮೌಲ್ಯದ ಪರ್ಯಾಯಲೋಕನದ ಪೀಠಿಕೆ ಮತ್ತು ಪಿ. ಗೋವಿಂದಾಚಾರ್ಯರ 'ಲೈಫ್ ಆಫ್ ರಾಮಾನುಜದ' ಆಧಾರಗಳನ್ನು ನೀಡಿ ಶ್ರೀವೈಷ್ಣವ ಆಚಾರ್ಯರಾದ ರಾಮಾನುಜರು ಮತ್ತು ಮಣವಾಳಮುನಿಗಳ ಬಳಿ ಈ ಸಂಪ್ರದಾಯವಿತ್ತೆನ್ನುತ್ತಾರೆ.

ಕಾಲ ಶ್ರೀವೈಷ್ಣವಧರ್ಮದ ವೈಭವದ ಕಾಲವಾಗಿತ್ತು ಎನ್ನಲಡ್ಡಿಯಿಲ್ಲ. ಮತ್ತೆ ಈ ಧರ್ಮ ಚಿಕ್ಕದೇವರಾಯನ ಕಾಲದಲ್ಲೂ ರಾಜಧರ್ಮವಾಗಿ ಮೆರೆದಿರುವುದನ್ನು ಇತಿಹಾಸಕಾರರು ದಾಖಲಿಸಿದ್ದಾರೆ. ಶ್ರೀವೈಷ್ಣವಧರ್ಮ ಕರ್ನಾಟಕದ ಮೂರು ಪ್ರಮುಖ ರಾಜರುಗಳ ಆಸ್ಥಾನ ಮಾನ್ಯತೆ ಪಡೆದು ರಾಜಧರ್ಮವಾಗಿ ಬಂದಿದ್ದರೂ ಚಿಕ್ಕದೇವರಾಯನ ಕಾಲದವರೆಗೆ ಇತರ ಧರ್ಮಗಳಲ್ಲಿಯಂತೆ ಈ ಧರ್ಮದಲ್ಲಿ ಸಾಹಿತ್ಯ ಏಕೆ ಸೃಷ್ಟಿಯಾಗಲಿಲ್ಲ ಎಂಬ ಬಗ್ಗೆ ಸಾಹಿತ್ಯ ಚರಿತ್ರಕಾರರು ಚರ್ಚೆ ಮಾಡಿದ್ದಾರೆ. ಅದಕ್ಕೆ ಹಲವು ಊಹೆಗಳನ್ನು ನೀಡುತ್ತ ಚಿಕ್ಕದೇವರಾಯನ ಕಾಲದವರೆಗೂ ಶ್ರೀವೈಷ್ಣವ ಧರ್ಮದಲ್ಲಿ ಸಾಹಿತ್ಯ ಸೃಷ್ಟಿಯಾಗಲಿಲ್ಲ ಎಂಬುದನ್ನೇ ಸ್ಥಾಪಿಸಿದ್ದಾರೆ. "ಶ್ರೀವೈಷ್ಣವ ಧರ್ಮದಲ್ಲಿ ಇತರರು ಮತಾವಲಂಬಿಗಳಾಗಬಹುದೇ ವಿನಾ ಶ್ರೀವೈಷ್ಣವ ಬ್ರಾಹ್ಮಣರಾಗಲು ಸಾಧ್ಯವಿಲ್ಲ. ಇತರರು ಅಲ್ಲಿಯ ಆಚರಣೆ, ವಿಧಿ, ವಿಧಾನಗಳು ಮತ್ತು ತಮಿಳು ಧಾರ್ಮಿಕ ಗ್ರಂಥಗಳ ಪರಿಚಯ-ಪಠಣ ಕ್ರಿಯೆಯಲ್ಲಿ ತೊಡಗಲು ಅವಕಾಶವಿಲ್ಲ. ಆದ್ದರಿಂದಲೇ ವಿಶಿಷ್ಟಾದ್ವೈತವನ್ನು ಪ್ರತಿಪಾದಿಸುವ ಗ್ರಂಥಗಳು ಕನ್ನಡದಲ್ಲಿ ಪ್ರಸಾರಗೊಳ್ಳಲೂ ಇಲ್ಲ, ಸೃಷ್ಟಿಯಾಗಲೂ ಇಲ್ಲ.[5] "ಅದರ ಅನುಯಾಯಿಗಳು ಈ ಪಂಥದ ಪ್ರಚಾರಕ್ಕೆ ಅಗತ್ಯವಾದ ಸಾಹಿತ್ಯ ನಿರ್ಮಾಣದತ್ತ ಅಷ್ಟು ಗಮನ ಹರಿಸಲೇ ಇಲ್ಲ".[6] ಎಂಬಂತಹ ಅಭಿಪ್ರಾಯಗಳು ಸೃಷ್ಟಿಯಾದವೇ ವಿನಾ ಈ ನಿಟ್ಟಿನಲ್ಲಿ ಇದ್ದಿರಬಹುದಾದ ಸಾಹಿತ್ಯದಶೋಧಕ್ಕೆ ಪ್ರಯತ್ನ ನಡೆಯಲಿಲ್ಲ.

ಆದರೆ ೯೦ರ ದಶಕದಲ್ಲಿ ಈ ಸಂಬಂಧದಲ್ಲಿ ನಡೆದ ಅಧ್ಯಯನ ಶೋಧ ಪ್ರಕಟನೆಗಳ ಫಲವಾಗಿ ಈ ಅಭಿಪ್ರಾಯ ಬದಲಾದಂತಾಗಿದೆ.[7] ಕೃಷ್ಣದೇವರಾಯನ ಕಾಲದಿಂದಲೇ ಈ ಧರ್ಮ ತತ್ವವನ್ನು ಪ್ರತಿಪಾದಿಸುವ ಹಲವು ಕೃತಿಗಳು ಕಾಣಿಸಿಕೊಂಡಿರುವುದು ಮುಖ್ಯ ಸಂಗತಿಯಾಗಿದೆ. ಇದರಿಂದ ವೈದಿಕಧರ್ಮದ ಇನ್ನೊಂದು ಮುಖ್ಯ ಶಾಖೆಯಾಗಿರುವ ವಿಶಿಷ್ಟಾದ್ವೈತ ತತ್ವವನ್ನು ಪ್ರತಿಪಾದಿಸುವ ಸಾಹಿತ್ಯಕೃತಿಗಳೂ ಕನ್ನಡದಲ್ಲಿ ಸೃಷ್ಟಿಯಾಗಿವೆ ಎಂಬುದು ಸಾಬೀತಾಗಿದೆ. ವಿಶೇಷವಾಗಿ ಕೀರ್ತನ ಸಾಹಿತ್ಯದಲ್ಲಿ ಈ ತತ್ವವನ್ನು ಪ್ರತಿಬಿಂಬಿಸಿರುವ ಸಾಹಿತ್ಯ ವಿಪುಲವಾಗಿದ್ದು ವಿಜಯನಗರದ ಕಾಲದಿಂದಲೂ ಅಂದರೆ ಹರಿದಾಸ ಸಾಹಿತ್ಯದ ಉಚ್ಛ್ರಾಯ ಕಾಲದಿಂದಲೂ ಇದ್ದು ೨೦ನೇ ಶತಮಾನದಲ್ಲಿಯೂ ಮುಂದುವರಿಯುತ್ತಿದೆ. ಸು. ೧೪ ಜನ ಕೀರ್ತನಕಾರರು ೧೦೦೦ಕ್ಕೂ ಹೆಚ್ಚಿನ ಶ್ರೀವೈಷ್ಣವ ಕೀರ್ತನೆಗಳನ್ನು ಈಚೆಗೆ ಸಂಪಾದಿಸಿರುವುದು[8] ಇದಕ್ಕೊಂದು ಬಲವಾದ ನಿದರ್ಶನವಾಗಿದೆ.

ಕನ್ನಡದಲ್ಲಿ ಶ್ರೀವೈಷ್ಣವ ಸಾಹಿತ್ಯ ಪ್ರಥಮವಾಗಿ ಕಾಣಿಸಿಕೊಂಡಿರುವುದು ವಿಜಯನಗರದ ಕಾಲದಲ್ಲಿ ಎಂದು ಸದ್ಯಕ್ಕೆ ಅಭಿಪ್ರಾಯಪಡಬಹುದು. ಪುರಂದರ-ಕನಕರ ಹಿರಿಯ ಸಮಕಾಲೀನರೂ ಮತ್ತು ವ್ಯಾಸರಾಯ-ವಾದಿರಾಜರ ಸಮಕಾಲೀನರೂ ಆಗಿರುವ ಬೇಲೂರು ವೈಕುಂಠದಾಸರು ಈ ಪರಂಪರೆಯ ಪ್ರಥಮ ಕವಿ ಎನಿಸಿಕೊಳ್ಳುತ್ತಾರೆ.[9] ಎಲ್ಲ ವಿದ್ವಾಂಸರೂ ವೈಕುಂಠದಾಸರನ್ನು

---

[5] ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ. ಪು. 303

[6] ಡಾ|| ಪ್ರಧಾನಗುರುದತ್, ಶ್ರೀಕೃಷ್ಣಕಥೆಯ ಉಗಮವಿಕಾಸ, 33, 1990

[7] ನಾ. ಗೀತಾಚಾರ್ಯ, ಮೂವರು ಶ್ರೀವೈಷ್ಣವ ಹರಿದಾಸರ ಕೀರ್ತನೆಗಳು 1999

[8] ಕರ್ನಾಟಕ ಸರ್ಕಾರದ ಹರಿದಾಸ ಸಾಹಿತ್ಯ ಪ್ರಕಟನ ಯೋಜನೆಗಾಗಿ ಸಮಗ್ರ ಹರಿದಾಸ ಸಾಹಿತ್ಯ ಸಂಪುಟ ೩೫ರಲ್ಲಿ ಎರಡು ಸಂಪುಟಗಳಲ್ಲಿ ಈ ಕೀರ್ತನೆಗಳು ಪ್ರಸ್ತುತ ಲೇಖಕರಿಂದ ಸಂಪಾದಿತವಾಗಿದ್ದು ಹಸ್ತಪ್ರತಿಯನ್ನು ಕನ್ನಡ ಸಂಸ್ಕೃತಿ ಇಲಾಖೆಗೆ ಸಲ್ಲಿಸಲಾಗಿದೆ.

[9] ನೋಡಿ : ಆದ್ಯ ಶ್ರೀವೈಷ್ಣವ ಕೀರ್ತನಕಾರರಾಗಿ ಬೇಲೂರು ವೈಕುಂಠದಾಸರು, ಇತಿಹಾಸದರ್ಶನ ೨೦೦೦, ಪುಟ :

ಉಲ್ಲೇಖಿಸಿದ್ದರೂ ಕೆಲವರು ಶ್ರೀವೈಷ್ಣವ ಸಂಪ್ರದಾಯದವರು ಎಂದೇ ಗುರುತಿಸಿದರೂ, ಈ ಸಂಪ್ರದಾಯದ್ದೇ ಒಂದು ಪ್ರತ್ಯೇಕ ಸಾಹಿತ್ಯ ಪರಂಪರೆ ಇದ್ದುದರ ಕಲ್ಪನೆ ಇಲ್ಲದಿದ್ದುದರಿಂದ ಇದ್ದ ಮಾಧ್ವಪರಂಪರೆಯಲ್ಲಿಯೇ ಇವರನ್ನು ಚರ್ಚಿಸಲಾಗಿದೆ. ಮಾಧ್ವಸಂಪ್ರದಾಯದ ಹರಿದಾಸರ ಹಾಡುಗಳ ಸಂಕಲನದಲ್ಲಿ ಅಲ್ಲೊಂದು ಇಲ್ಲೊಂದು ಇವರ ಕೀರ್ತನೆಗಳು ಪ್ರಕಟವಾದರೂ ಇವರ ಕೀರ್ತನೆಗಳನ್ನೇ ಪ್ರತ್ಯೇಕ ಸಂಕಲನದ ರೂಪದಲ್ಲಿ ಪ್ರಕಟಿಸುವುದಾಗಲಿ, ಕೀರ್ತನೆಗಳನ್ನು ವಿವರವಾಗಿ ಚರ್ಚಿಸುವುದಾಗಲಿ ಯಾರೂ - ಹರಿದಾಸ ಸಾಹಿತ್ಯದ ಪಿ.ಎಚ್.ಡಿ. ಅಧ್ಯಯನಕಾರರೂ - ಮಾಡುವ ಗೊಡವೆಗೆ ಹೋಗಲಿಲ್ಲವಾಗಿ ಇವರು ಅಜ್ಞಾತರಾಗಿಯೇ ಉಳಿದಿದ್ದರು.

ಈವರೆಗೆ ಇವರ ಅಂಕಿತ 'ವೈಕುಂಠ ಕೇಶವ' ಮತ್ತು 'ವೇಲಾಪುರವಾಸ'ಗಳ ಹೆಸರಿನಲ್ಲಿ ಸುಮಾರು ೬೫ ಕೀರ್ತನೆಗಳು ಲಭ್ಯವಾಗಿದ್ದು ವಾದಿರಾಜರು, ಕನಕದಾಸರಾದಿಯಾಗಿ ಎಲ್ಲ ಪ್ರಮುಖ ಕೀರ್ತನಕಾರರೂ ಇವರನ್ನು ಸ್ತುತಿಸಿರುವ ಸುಮಾರು ೧೧ ಕೀರ್ತನೆಗಳು ದೊರಕಿವೆ. ಆ ಕಾಲಕ್ಕೆ ಬೇಲೂರಿನ ಕೇಶವನ ಸನ್ನಿಧಿಯಲ್ಲೇ ತಮ್ಮ ಸಾಧನೆಯನ್ನು ಮಾಡುತ್ತಿದ್ದ ವಯೋವೃದ್ಧರಾಗಿದ್ದ ವೈಕುಂಠದಾಸರು ಎಲ್ಲ ಹರಿದಾಸರಿಗೂ ಕರ್ನಾಟಕದ ಅನ್ನಮಾಚಾರ್ಯರಾಗಿದ್ದರೆನ್ನುವಷ್ಟರಮಟ್ಟಿಗೆ ಪ್ರಮುಖರಾಗಿದ್ದರು. ಇವರು ಕೀರ್ತನೆಗಳಲ್ಲದೆ ಎರಡು ಪುಟ್ಟ ಕೃತಿಗಳನ್ನು ರಚಿಸಿದ್ದಾರೆ. 'ಗಜೇಂದ್ರಮೋಕ್ಷ' ಮತ್ತು 'ಶನೇಶ್ವರದಂಡಕ'ಗಳು ಇವರ ಅಂಕಿತದಲ್ಲಿ ಲಭ್ಯವಾಗಿದ್ದರೂ ಇನ್ನೂ ಚರ್ಚೆಯಾಗಬೇಕಾಗಿದೆ. ಏಕೆಂದರೆ ಗಜೇಂದ್ರಮೋಕ್ಷ ಪುರಂದರ, ಕನಕದಾಸರ ಅಂಕಿತದಲ್ಲೂ ಲಭ್ಯವಿದ್ದು ಇದರ ಕರ್ತೃತ್ವದ ಬಗೆಗೆ ಗೊಂದಲವೇರ್ಪಟ್ಟಿದೆ. ಆದರೆ ಇದರ ಕಥೆ ವೈಷ್ಣವ (ಮಾಧ್ವ) ಸಂಪ್ರದಾಯದಲ್ಲಿ ಇದ್ದರೂ ಶ್ರೀವೈಷ್ಣವ ಸಂಪ್ರದಾಯದಲ್ಲಿ ವಿಶೇಷವಾಗಿ ಆಚರಣೆಯಲ್ಲಿದೆ. ಇಂದಿಗೂ ಶ್ರೀವೈಷ್ಣವ ಸಂಪ್ರದಾಯ ನಿಷ್ಠರ ಮನೆಗಳಲ್ಲಿ ಗಜೇಂದ್ರಮೋಕ್ಷದ ಫೋಟೋಗಳು ಇರುವುದಲ್ಲದೆ ಈ ಸಂಪ್ರದಾಯದ ದೇವಾಲಯಗಳ ಉತ್ಸವಗಳಲ್ಲಿ ಗಜೇಂದ್ರಮೋಕ್ಷದ ಅಲಂಕಾರವನ್ನು ವಿಶೇಷವಾಗಿ ಮಾಡಲಾಗುತ್ತದೆ. ಕಾಲದ ದೃಷ್ಟಿಯಿಂದ ಬೇಲೂರು ವೈಕುಂಠದಾಸರೇ ಉಳಿದಿಬ್ಬರಿಗಿಂತ ಹಿರಿಯರೆನಿಸಿದ್ದಾರೆ. ಪದ್ಯಗಳಲ್ಲಿ ಕಂಡುಬರುವ ಪಾಠ ವ್ಯತ್ಯಾಸವೂ ವೈಕುಂಠದಾಸ ಕೃತದ ಬಗೆಗೇ ಬೆಳಕು ಚೆಲ್ಲುತ್ತಿರುವುದರಿಂದ ಈ ಕೃತಿಯನ್ನು ವೈಕುಂಠದಾಸರದೆಂದೇ ನಿರ್ಧರಿಸುವುದು ಸೂಕ್ತವೆನಿಸುತ್ತದೆ. ಈ ಕೃತಿ ಭಾಮಿನಿ ಷಟ್ಪದಿಯಲ್ಲಿದೆ.

ಇವರ ಇನ್ನೊಂದು ಕೃತಿ ಶನೇಶ್ವರ ದಂಡಕದಲ್ಲಿ ಕರ್ತೃತ್ವದ ಗೊಂದಲವಿಲ್ಲದಿದ್ದರೂ ತತ್ವನಿಷ್ಠೆಯ ಸಮಸ್ಯೆಯಿದೆ. ಶ್ರೀವೈಷ್ಣವ ಸಾಹಿತ್ಯದಲ್ಲಿ ವ್ಯಕ್ತವಾಗಿರುವ ಒಂದು ಮುಖ್ಯವಾದ ತಾತ್ವಿಕ ನಿಲುವೆಂದರೆ 'ಶ್ರೀಹರಿಏಕನಿಷ್ಠೆ'. ಹರಿಯನ್ನು ಹೊರತುಪಡಿಸಿ ಅನ್ಯದೈವಗಳನ್ನು ಸ್ತುತಿಸದಿರುವುದು. ಕಾರಣ ಹರಿಯೇ ಸರ್ವಾಂತರ್ಯಾಮಿ, ಸಕಲದೈವತ್ವಕ್ಕೂ ಒಡೆಯ, ಉಳಿದವರೆಲ್ಲರೂ ಅವನಿಂದ ನಿಯಮಿತ ರಾಗಿರುವವರು. ಅವನೊಬ್ಬನನ್ನು ಸ್ತುತಿಸಿದರೆ ಮೋಕ್ಷದಾರಿ ಸುಗಮ ಎಂಬ ಮನೋಭಾವ. ಈ ತಾತ್ವಿಕ ನಿಲುವಿನ ಹಿನ್ನೆಲೆಯಲ್ಲಿ ಈವರೆಗೆ ದೊರಕಿರುವ ಶ್ರೀವೈಷ್ಣವ ಕೀರ್ತನಕಾರರೆಲ್ಲರೂ ಬರುತ್ತಾರಾದರೂ ಕ್ವಚಿತ್ತಾಗಿ ಕೆಲವರಲ್ಲಿ ಅನ್ಯದೈವದ ಸ್ತುತಿಯೂ ಕಂಡುಬರುತ್ತದೆ.[10] ಇಂತಹ ಕೃತಿಗಳಲ್ಲಿ

---

[10] ಈ ಪರಂಪರೆಯಲ್ಲಿ ಬರುವ ಚನ್ನಪಟ್ಟಣದ ಅಹೋಬಲದಾಸರು. ಆಸೂರಿ ರಾಮಸ್ವಾಮಿ ಅಯ್ಯಂಗಾರ್ಯರ (ಮಾಂಗಿರೀಶ) ಕೃತಿಗಳಲ್ಲಿ ಈ ಅಂಶವಿದೆ. ಆ ಸೂರಿಯವರಂತೂ ರಾಘವೇಂದ್ರರು ಮತ್ತು ಸಾಯಿಬಾಬರನ್ನು ಕುರಿತು ಅನೇಕ ಕೃತಿಗಳನ್ನು ರಚಿಸಿದ್ದಾರೆ.

ಅವರನ್ನು ಅಧೀನದೈವಗಳನ್ನಾಗಿಯೇ ಚಿತ್ರಿಸಿ ಶ್ರೀಹರಿಯ ಪಾರಮ್ಯವನ್ನೇ ಎತ್ತಿಹಿಡಿದಿರುತ್ತಾರೆ. ಈ ನಿಟ್ಟಿನಲ್ಲಿ ವಿಚಾರಮಾಡಿದಾಗ ವೈಕುಂಠದಾಸರ ಶನೇಶ್ವರ ದಂಡಕವೂ ಇದಕ್ಕೆ ಅನುಗುಣವಾಗಿರುವುದರಿಂದ ಇದನ್ನು ವೈಕುಂಠದಾಸಕೃತ ಎನ್ನುವುದರಲ್ಲಿ ಅಡ್ಡಿಯೇನಿಲ್ಲ. ಇದು ಸಂಸ್ಕೃತ ಭೂಯಿಷ್ಠವಾದ ಗದ್ಯದಲ್ಲಿರುವ ಪುಟ್ಟ ಕೃತಿ. ಹೀಗಾಗಿ ವಿಜಯನಗರ ಇತಿಹಾಸದ ಉಚ್ಛ್ರಾಯಕಾಲದಲ್ಲಿ ಪುರಂದರರಾದಿಯಾಗಿ ಕನ್ನಡ ಸಾಹಿತ್ಯವೂ ಉಚ್ಛ್ರಾಯ ಸ್ಥಿತಿಯಲ್ಲಿರುವಾಗಲೇ ವಿಶಿಷ್ಟಾದ್ವೈತ ಸಂಪ್ರದಾಯದಲ್ಲಿಯೂ ಸಾಹಿತ್ಯ ರಚನೆಯಾಗಿತ್ತು. ಈ ಪರಂಪರೆಯೂ ಮುಖ್ಯವಾಹಿನಿಯೊಂದಿಗೆ ಬೆಳೆಯುತ್ತಿತ್ತು ಎಂದು ಹೇಳಬಹುದಾಗಿದೆ.

ಇದಕ್ಕೆ ಪೂರಕವಾಗಿ ವೈಕುಂಠದಾಸರ ಶಿಷ್ಯಪರಂಪರೆಯೂ ಇತ್ತು ಎಂಬುದರತ್ತ ವಿದ್ವಾಂಸರು ಗಮನಹರಿಸಬೇಕಾಗಿದೆ. ವೈಕುಂಠದಾಸರ ಪ್ರಮುಖ ಶಿಷ್ಯರಾಗಿ ಕನಕದಾಸರನ್ನು ಗುರುತಿಸುವುದು ಸೂಕ್ತವೆನಿಸುತ್ತದೆ. ಕನಕದಾಸರೂ ಶ್ರೀವೈಷ್ಣವ ಸಂಪ್ರದಾಯದ ಕೀರ್ತನಕಾರರು ಎಂಬುದನ್ನು ತೀರ್ಮಾನವಾಗಿ ಹೇಳಬೇಕಾದ ಅಗತ್ಯವಿದೆ. ಕನಕದಾಸರ ಮತದ ವಿಚಾರವಾಗಿ ಈಗಾಗಲೇ ಸಾಕಷ್ಟು ಚರ್ಚೆಯಾಗಿದ್ದು ಹಲವರು ವಿಶಿಷ್ಟಾದ್ವೈತ ಸಂಪ್ರದಾಯದವನೆಂದು ಹೇಳಿದ್ದಾರೆ. ಇದಕ್ಕೆ ಪೂರಕವಾಗಿ ಅನೇಕ ನಿದರ್ಶನಗಳೂ ದೊರೆಯುತ್ತವೆ. ಕ್ವಚಿತ್ತಾಗಿ ಭಿನ್ನಧೋರಣೆಯ ನಿದರ್ಶನಗಳೂ ಇದ್ದು ಇವುಗಳನ್ನೇ ಮುಖ್ಯಮಾಡಿಕೊಂಡು ಸಾಹಿತ್ಯವಲಯ ಯಾವೊಂದು ನಿರ್ದಿಷ್ಟ ಮತಕ್ಕೂ ಅನ್ವಯಿಸದೆ ಭಾಗವತ ಸಂಪ್ರದಾಯದವನು ಎಂದಷ್ಟೇ ಹೇಳಿ ವ್ಯಾಸರಾಯರ ಶಿಷ್ಯನೆಂದು ಅಭಿಪ್ರಾಯಪಟ್ಟಿದೆ. ಆದರೆ ಕನಕದಾಸರು ಶ್ರೀವೈಷ್ಣವ ಮತಾನುಯಾಯಿಗಳೇ ವಿನಾ ಮಾಧ್ವ ಮತಾನುಯಾಯಿಗಳಲ್ಲ ಎಂಬುದು ನನ್ನ ಅಧ್ಯಯನದಿಂದ ಗೋಚರವಾಗುತ್ತಿದೆ. ಅವರ ಕೀರ್ತನೆಗಳು ಬಹುಪಾಲು ಈಧರ್ಮದ ತತ್ವಗಳಿಗೆ ಹೆಚ್ಚು ಅನ್ವಯವಾಗುತ್ತವೆ. ಅಷ್ಟೇ ಅಲ್ಲದೆ ನೇರವಾಗಿಯೇ ಈ ಧರ್ಮದ ಪಾರಿಭಾಷಿಕ ಪದಗಳು ಗುರು ಪರಂಪರೆಯರ ಸ್ತುತಿ, ಕನಕದಾಸರ ಕೀರ್ತನೆಗಳಲ್ಲಿ ಹೇರಳವಾಗಿ ದೊರಕುತ್ತದೆ. ಇವರ ಕೃತಿಗಳಲ್ಲಿ ಶ್ರೀ ಹರಿಭಕ್ತಿಸಾರ 'ಮೋಹನ ತರಂಗಿಣಿ' ಸ್ಪಷ್ಟವಾಗಿ ಶ್ರೀವೈಷ್ಣವ ಧರ್ಮನಿಷ್ಠವಾಗಿವೆ. ಈ ಧರ್ಮಗುರುಗಳಾದ ರಾಮಾನುಜಾಚಾರ್ಯರು, ತಾತಾಚಾರ್ಯರು ಮತ್ತು ಆಳ್ವಾರರುಗಳನ್ನು ಸ್ತುತಿಸಿರುವ ಕೀರ್ತನೆಗಳನ್ನೇ ಕನಕದಾಸರು ರಚಿಸಿದ್ದಾರೆ. ವಿದ್ವಾಂಸರು ಈ ಅಂಶಗಳನ್ನು ಗುರುತಿಸುತ್ತ ಇದರ ಮೂಲಕ ಕನಕದಾಸರ ಶ್ರೀವೈಷ್ಣವ ನಿಷ್ಠೆಯನ್ನೂ ಉಲ್ಲೇಖಿಸಿದ್ದರೂ ಅವರನ್ನು ವ್ಯಾಸರಾಯ ಶಿಷ್ಯನೆಂಬುದನ್ನು ನಿರಾಕರಿಸಲು ಹೋಗಿಲ್ಲ. ಕಾರಣ ಕೆಲವು ದಂತಕಥೆಗಳ ಮೂಲಕ ಈ ಅಂಶ ಪ್ರಚಾರದಲ್ಲಿದ್ದು ಪ್ರಸಿದ್ಧಿಗೆ ಬಂದಿರುವುದು. ಕೃತಿಗಳನ್ನೇ ಆಳವಾಗಿ ಅಧ್ಯಯನ ಮಾಡಿದರೆ ಇದಕ್ಕೆ ಯಾವ ಆಧಾರವೂ ದೊರಕುವುದಿಲ್ಲ. ವ್ಯಾಸರಾಯರು ಕನಕದಾಸರ ಪ್ರಸಿದ್ಧಿಯನ್ನು ಗುರುತಿಸಿ ತಮ್ಮ ಮಠಕ್ಕೆ ಕರೆಸಿ ಆದರಿಸಿ ಗೌರವಿಸಿರುವುದರಿಂದ ಅವರ ಮಡಿವಂತ ಶಿಷ್ಯರಿಂದ ವಿರೋಧ ವ್ಯಕ್ತವಾಗಿದ್ದು, ಆ ಹಿನ್ನೆಲೆಯಲ್ಲಿ ವ್ಯಾಸರಾಯರು ತೋರಿರುವ ಔದಾರ್ಯದ ಧಾರ್ಮಿಕ ಸೌಹಾರ್ದತೆಯ ದೃಷ್ಟಿಯಿಂದ ಈ ದಂತ ಕಥೆಗಳನ್ನು ಅರ್ಥೈಸಬೇಕೇವಿನಾ ಅವರ ಶಿಷ್ಯರೇ ಆಗಿದ್ದರೆಂದು ಕಲ್ಪಿಸುವುದಕ್ಕೆ ಯಾವ ಸಾಧ್ಯತೆಯೂ ಕಂಡುಬರುವುದಿಲ್ಲ. ಈ ದೃಷ್ಟಿಯಿಂದ ಕನಕದಾಸರ ಧರ್ಮವನ್ನು ವಿಶ್ಲೇಷಿಸಿದರೆ ಅದು ಶ್ರೀವೈಷ್ಣವ ಧರ್ಮವೆಂದೇ ಅನ್ನಿಸುತ್ತದೆ. ಇವರ ಗುರುಗಳಾಗಿ ತಾತಾಚಾರ್ಯರನ್ನೋ, ವೈಕುಂಠದಾಸರನ್ನೋ ಗುರುತಿಸುವುದೇ ಹೆಚ್ಚು ಸೂಕ್ತವೆಂದು ತೋರುತ್ತದೆ. ವೈಕುಂಠದಾಸರಿಗೂ

ಕನಕದಾಸರಿಗೂ ಹೆಚ್ಚು ಸಂಪರ್ಕವಿದ್ದುದು ಅವರುಗಳ ಕೀರ್ತನೆಗಳ ಅಧ್ಯಯನದಿಂದ ಬೆಳಕಿಗೆ ಬಂದಿದೆ. 'ಬಂಟನಾಗಿ ಬಾಗಿಲಕಾಯೋ ವೈಕುಂಠದಾಸರ ದಾಸರ ದಾಸರ ಮನೆಯ' ಎಂಬ ಕನಕದಾಸರ ಕೀರ್ತನೆಯಲ್ಲಿ ವೈಕುಂಠದಾಸರನ್ನೂ ಅವರು ಗುರು ಸ್ಥಾನದಲ್ಲಿಟ್ಟಿರುವುದು ಮತ್ತು ತಾತಾಚಾರ್ಯರನ್ನಂತೂ ಗುರುಸ್ಥಾನದಲ್ಲಿಟ್ಟೇ ಸ್ತುತಿಸಿರುವುದು ಸ್ಪಷ್ಟವಿದೆ.

ಈ ಹಿನ್ನೆಲೆಯಲ್ಲಿ ಕನಕದಾಸರನ್ನು ಶ್ರೀವೈಷ್ಣವ ತತ್ವಾನುಯಾಯಿಗಳಾಗಿದ್ದರು ಎಂದೇ ಹೇಳಬೇಕಾಗುತ್ತದೆ. ಹೀಗಾಗಿ ವಿಜಯನಗರದ, ಅದರಲ್ಲೂ ಕೃಷ್ಣದೇವರಾಯನ ಕಾಲದ ಪ್ರಮುಖ ಕವಿಗಳಲ್ಲಿ ಕನಕದಾಸರೂ ಒಬ್ಬರಾಗಿದ್ದು ಅವರು ಶ್ರೀವೈಷ್ಣವ ಕೀರ್ತನ ಪರಂಪರೆಯ ಪ್ರಮುಖ ಕವಿ ಎಂದು ಹೇಳಬಹುದಾಗಿದೆ. ಮೋಹನ ತರಂಗಿಣಿಯಲ್ಲಿ ವಿಜಯನಗರದ, ಕೃಷ್ಣದೇವರಾಯನ ವರ್ಣನೆಯೇ ಆಗಿರುವಷ್ಟು ಹೋಲಿಕೆಯಿದೆ. ಕೃಷ್ಣ-ರುಕ್ಮಿಣಿ, ರತಿ-ಮನ್ಮಥ, ಉಷ-ಅನಿರುದ್ಧರ ಶೃಂಗಾರವರ್ಣನೆಯನ್ನು ಕವಿ ಅತ್ಯಂತ ಸುಂದರವಾಗಿ ಹೇಳಿದ್ದಾನೆ. ಇವುಗಳು ಕೃಷ್ಣದೇವರಾಯ ಮತ್ತು ಅವನ ಮಕ್ಕಳ ಶೃಂಗಾರ ವರ್ಣನೆಯೇ ಆಗಿರುವಂತಿವೆ. ಕೃಷ್ಣನನ್ನು ಕೃಷ್ಣದೇವರಾಯನ ಹೆಸರು ಬಿರುದುಗಳಲ್ಲೇ ಪದೇ ಪದೇ ಉಲ್ಲೇಖಿಸಿದ್ದಾರೆ. ಕೃಷ್ಣದೇವರಾಯನ ರಾಜಧರ್ಮವಾಗಿದ್ದ ಶ್ರೀವೈಷ್ಣವ ಧರ್ಮದಲ್ಲಿ ಧರ್ಮದ ಹೊರಗಿದ್ದು ಧರ್ಮಾವಲಂಬಿಯಾಗಿ ಈ ಧರ್ಮದ ತತ್ವ ತಿರುಳುಗಳನ್ನು ಕನಕದಾಸರು ಅತ್ಯಂತ ಸೂಕ್ಷ್ಮವಾಗಿ ಮತ್ತು ಸ್ಪಷ್ಟವಾಗಿ ಉಲ್ಲೇಖಿಸಿದ್ದಾರೆ. ಇವರ ಇತರ ಕೃತಿಗಳೂ ಈ ನಿಷ್ಠೆಯಲ್ಲೇ ನಿಲ್ಲುವುದರಿಂದ ಕೃಷ್ಣದೇವರಾಯನ ಕಾಲದಲ್ಲಿ ಶ್ರೀವೈಷ್ಣವ ಧರ್ಮದಲ್ಲೂ ಕನ್ನಡ ಸಾಹಿತ್ಯ ಸೃಷ್ಟಿಯಾಗಿರುವುದಷ್ಟೇ ಅಲ್ಲ ಪ್ರಸಿದ್ಧಿಯನ್ನೂ ಪಡೆದು ಕನ್ನಡ ಸಾಹಿತ್ಯದಲ್ಲಿಯೇ ವಿಶಿಷ್ಟವಾಗಿದೆ ಎಂದು ಈ ಮೂಲಕ ಸ್ಪಷ್ಟಪಡಿಸಬಹುದು.

ಸಾಹಿತ್ಯ ಚರಿತ್ರೆಯಲ್ಲಿ ಚರ್ಚಿತವಾಗಿರುವ ಮುಖ್ಯ ಧರ್ಮಗಳ ಜೊತೆಯಲ್ಲಿ ಇನ್ನುಮುಂದೆ ಶ್ರೀವೈಷ್ಣವ ಧರ್ಮದ ಹಿನ್ನೆಲೆಯಲ್ಲೂ ಸಾಹಿತ್ಯವನ್ನು ಚರ್ಚಿಸಬೇಕಾದ ಅಗತ್ಯವಿದೆ. ಸ್ವತಃ ಕೃಷ್ಣದೇವರಾಯನ ಆಮುಕ್ತ ಮೂಲ್ಯದ ಶ್ರೀವೈಷ್ಣವ ಧರ್ಮ ಪ್ರತಿಪಾದಿತವಾಗಿದ್ದು ಇದನ್ನು ಎಲ್ಲ ಇತಿಹಾಸಜ್ಞರೂ ಅವನೇ ಬರೆದದ್ದೆಂದೇ ಚರ್ಚಿಸಿದ್ದಾರೆ. ಆದರೂ ಕೆಲವರು ಅನುಮಾನ ವ್ಯಕ್ತಪಡಿಸಿದ್ದಾರೆ. ಇದು ಕೃಷ್ಣದೇವರಾಯ ಕೃತಿ ಎನ್ನುವುದಕ್ಕಿಂತ ಅವನ ಅಂಕಿತದಲ್ಲಿ ಶ್ರೀವೈಷ್ಣವ ಕವಿಯೊಬ್ಬ ಬರೆದಿದ್ದಿರಬಹುದೆಂಬ ಕೆಲವರ ಚಿಂತನೆಯೇ ಹೆಚ್ಚು ಸೂಕ್ತವೆನಿಸುತ್ತದೆ. ಕೃಷ್ಣದೇವರಾಯನ ರಾಣಿ ವಾಸದಲ್ಲಿ ಅಥವ ಆಶ್ರಯದಲ್ಲಿ ಶ್ರೀವೈಷ್ಣವ ಧರ್ಮೀಯ ಕವಿಗಳಿದ್ದು ಅವರ ಮೂಲಕವೋ ಅಥವ ಅಷ್ಟ ದಿಗ್ಗಜಗಳಲ್ಲಿ ಒಬ್ಬರು (ಈಗಾಗಲೇ ಅಲ್ಲಸಾನಿ ಪೆದ್ದನಾಕೃತವೆಂದು ಕೆಲವರ ವಾದವಿದೆ) ಬರೆದಿರುವ ಸಾಧ್ಯತೆಯಿದೆ ಎನಿಸುತ್ತದೆ. ಇವನ ಕಾಲದ್ದೆಂದೇ ಹೇಳುವ 'ರಾಯವಾಚಕಮು' ಕೃತಿಗೆ ಕನ್ನಡ ಮೂಲದ ಆಕರವೊಂದು ಲಭ್ಯವಾಗಿರುವಂತೆ[11] 'ಆಮೂಕ್ತಮಾಲ್ಯದ' ಕೃತಿಗೂ ಕನ್ನಡ ಮೂಲವೊಂದು ಇದ್ದಿರಬಹುದೆ? ಎಂಬ ಒಂದು ಊಹೆಮೂಡಲು ಸಾಧ್ಯವಿದೆ. ಏನೇ ಆಗಲಿ 'ಆಮುಕ್ತ ಮಾಲ್ಯದ' ದಂತಹ ಪ್ರಮುಖ ಸಾಮಾಜಿಕ ಸಾಹಿತ್ಯದ ಮೌಲ್ಯವುಳ್ಳ ಕೃತಿ ಈ ಧರ್ಮದಲ್ಲಿ

[11] ನೋಡಿ : ಶ್ರೀಕೃಷ್ಣದೇವರಾಯ ದಿನಚರಿ ಮತ್ತು ರಾಯವಾಚಕಮು ಕಾಲ್ಪನಿಕ ಅಧ್ಯಯನ. ಪ್ರೊ|| ಬಿ. ರಾಮಸ್ವಾಮಿ 'ಕಾವ್ಯ ಇತಿಹಾಸ', ಬಿ.ಎಂ. ಶ್ರೀ ಪ್ರತಿಷ್ಠಾನ, ಬೆಂಗಳೂರು

ಈ ಕಾಲದಲ್ಲಿ ಬಂದಿರುವಾಗ ಕನ್ನಡದಲ್ಲಿ ಶ್ರೀವೈಷ್ಣವ ಸಾಹಿತ್ಯವೇ ಇರಲಿಲ್ಲ ಎಂದು ಹೇಳುವುದಾದರೂ ಹೇಗೆ? ಇತ್ತು ಎಂಬುದಂತೂ ಈಗ ಸ್ಪಷ್ಟವಾದಂತಾಗಿದೆ.

ಇವುಗಳೊಂದಿಗೆ ಕುಮಾರವ್ಯಾಸ ಮತ್ತು ಈ ಸಾಮ್ರಾಜ್ಯದ ಕೊನೆಯಲ್ಲಿ ಬರುವ ಲಕ್ಷ್ಮೀಶ ಕೂಡ ಈ ಧರ್ಮದ ಕವಿಗಳೇ ಆಗಿ ಕಾಣಿಸಿಕೊಳ್ಳುತ್ತಾರೆ. ವಿದ್ವಾಂಸರು ಇವರ ಮತವನ್ನೂ 'ಭಾಗವತ' ಎಂದಷ್ಟೇ ಹೇಳಿ ಬಿಟ್ಟು ಬಿಡುತ್ತಾರೆ. ಖಚಿತವಾಗಿ ತ್ರಿಮತಗಳಲ್ಲಿ ಯಾವೊಂದು ಮತದಲ್ಲೂ ಇವರನ್ನು ಗುರುತಿಸಿಲ್ಲದಿದ್ದರೂ ಶ್ರೀವೈಷ್ಣವ ಮತಕ್ಕೆ ಹೆಚ್ಚು ಹತ್ತಿರವಾಗಿದ್ದಾರೆಂದೇ ಹೇಳುತ್ತಾರೆ. ಲಕ್ಷ್ಮೀಶನ ಹೆಸರಿನಲ್ಲಿ ಕೆಲವು ಕೀರ್ತನೆಗಳು ಲಭ್ಯವಾಗಿದ್ದು ಅವು ಸ್ಪಷ್ಟವಾಗಿ ವಿಶಿಷ್ಟಾದ್ವೈತ ಪ್ರತಿಸಾದನೆಯಲ್ಲಿ ಕಂಡುಬರುವುದರಿಂದ ಲಕ್ಷ್ಮೀಶನನ್ನೂ ಶ್ರೀವೈಷ್ಣವಕವಿ ಎಂದೇ ಹೇಳಲು ಯಾವ ಅಡ್ಡಿಯೂ ಇಲ್ಲ. ಕುಮಾರವ್ಯಾಸನೂ ಶ್ರೀವೈಷ್ಣವ ತತ್ವವನ್ನೇ ತನ್ನ ಕೃತಿಯಲ್ಲಿ ಪ್ರತಿಪಾದಿಸಿರುವುದು ಸ್ಪಷ್ಟವಾಗಿ ಕಂಡು ಬರುವುದು. ಈ ಬಗ್ಗೆ ಹೆಚ್ಚಿನ ಅಧ್ಯಯನದ ಅಗತ್ಯವಿದೆ. ವಿಶಿಷ್ಟಾದ್ವೈತ ತತ್ವದ ಚಿಂತನೆಗಳು ಗಟ್ಟಿಗೊಳ್ಳುತ್ತಹೋದಂತೆ ಅದರ ನೆರಳಿನಲ್ಲಿ ಈ ಕೃತಿಗಳೆಲ್ಲ ಮರುಹುಟ್ಟು ಪಡೆಯಲಿವೆ.

ಹೀಗಾಗಿ ವಿಜಯನಗರದ ಮತ್ತು ಕೃಷ್ಣದೇವರಾಯನ ಕಾಲದಲ್ಲಿ ಶ್ರೀವೈಷ್ಣವ ಸಾಹಿತ್ಯವೂ ಪ್ರಮುಖ ಸ್ಥಾನವನ್ನೂ ಪಡೆದಿತ್ತು. ರಾಜಧರ್ಮವಾಗಿದ್ದ ಧರ್ಮದಲ್ಲಿ ಸಹಜವಾಗಿ ಸಾಹಿತ್ಯ ಮೌಲ್ಯದ ಕೃತಿಗಳು ಕಾಣಿಸಿಕೊಂಡಿದ್ದವು. ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತ ತತ್ವಪ್ರತಿಪಾದನೆಯೂ ಸಮರ್ಥವಾಗಿ ಮೂಡಿಬಂದಿದೆ ಎಂದು ನಿಸ್ಸಂಕೋಚವಾಗಿ ಹೇಳಬಹುದು.



# ಶ್ರೀ ವಾಸವಾಂಬಾಪುರಾಣ - ಲಘುಪರಿಚಯ

*- ಎಸ್.ಕೆ. ಲಕ್ಷ್ಮೀ*

**ಕರ್ತೃವಿಚಾರ :**

ಶ್ರೀ ವಾಸವಾಂಬಾ ಪುರಾಣದ ಕರ್ತೃವಾದ ಶ್ರೀ ಬೇಟೆರಾಯ ದೀಕ್ಷಿತರು ೧೮೬೬ರಲ್ಲಿ ತುಮಕೂರು ಜಿಲ್ಲೆಯ ಕುಣಿಗಲ್ ಪ್ರದೇಶದ ಸಂಪ್ರದಾಯಸ್ಥ ಕುಟುಂಬದಲ್ಲಿ ಜನಿಸಿದರು. ಶ್ರೀ ಈಶ್ವರಪ್ಪ ಶಾಸ್ತ್ರಿ ಮತ್ತು ಶ್ರೀ ಶಂಕರಪ್ಪನವರಲ್ಲಿ ವಿದ್ಯಾಭ್ಯಾಸವನ್ನು ಪಡೆದು ವಿ. ವಿ. ಶಾಲೆಯಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಬೋಧಕ ವೃತ್ತಿಯೊಡನೆ ಪ್ರವಚನ ಪ್ರವೃತ್ತಿಯಿಂದ ಕರ್ನಾಟಕದ ಎಲ್ಲೆಡೆಯಲ್ಲೂ ಸಂಚರಿಸಿದರು. ಶ್ರೀ ನಾ. ಗೀತಾಚಾರ್ಯರು ಬರೆದ ಬಿ.ಎಂ.ಶ್ರೀ. ಪ್ರತಿಷ್ಠಾನದಿಂದ ಪ್ರಕಟಿತ ತುಮಕೂರು ಜಿಲ್ಲೆಯ ಕೀರ್ತನಕಾರರು ಎಂಬ ಹೊತ್ತಿಗೆಯಲ್ಲಿ ದೀಕ್ಷಿತರ ಬಗ್ಗೆ ಸಾಕಷ್ಟು ಮಾಹಿತಿಗಳು ದೊರೆತಿವೆ.

ವಾಲ್ಮೀಕಿ ರಾಮಾಯಣದ ಪಾಂಡಿತ್ಯವನ್ನು ಪಡೆದಿದ್ದ ದೀಕ್ಷಿತರು ಹುಬ್ಬಳ್ಳಿ, ಧಾರವಾಡ, ಬೆಳಗಾವಿ ಮುಂತಾದ ಕ್ಷೇತ್ರಗಳಲ್ಲಿ ಪ್ರವಚನಗಳನ್ನು ನೀಡುತ್ತಿದ್ದರು. ಜನರ ಮೆಚ್ಚುಗೆಯನ್ನು ಪಡೆದು ರಾಮಕಥಾಭೂಷಣ ಇತ್ಯಾದಿ ಬಿರುದುಗಳನ್ನು ಪಡೆದರು. ಉಭಯಭಾಷಾಪಂಡಿತರಾದ ದೀಕ್ಷಿತರು ಸಂಗೀತಜ್ಞರೂ ಮತ್ತು ಆಶುಕವಿಯೂ ಆಗಿ ಲೋಕಪ್ರಿಯರಾದರು.

ದೀಕ್ಷಿತರು ೭೪ ದೇವರನಾಮಗಳನ್ನು ೧೯ ಸಂಪ್ರದಾಯ ಗೀತೆಗಳನ್ನು, ಒಂದು ರಾಮಕಥೆಯನ್ನು, ೮ ಚೂರ್ಣಿಕೆಗಳನ್ನು ರಚಿಸಿದ್ದಲ್ಲದೆ ಅನಸೂಯ ಚರಿತೆ, ಹನುಮದ್ ವಿಜಯವಿಲಾಸ, ಕಲಿಧರ್ಮ ಬೋಧಿನಿ, ಶಕುಂತಲ ಇತ್ಯಾದಿ ಸಾಹಿತ್ಯ ಕೃತಿಗಳನ್ನು ಕನ್ನಡವಲ್ಲಿ ಬರೆದಿದ್ದಾರೆ. ಸರಳವಾದ ಸುಂದರವಾದ ಸಂಸ್ಕೃತದಲ್ಲಿ ಬರೆಯಲ್ಪಟ್ಟ ವಾಸವಾಂಬಾ ಪುರಾಣವು ದೀಕ್ಷಿತರ ಭಾಷಾ ಪ್ರಭುತ್ವವನ್ನು ಕಥಾನಿರೂಪಣಾ ಸಾಮರ್ಥ್ಯವನ್ನೂ ಸಹ ಸಾರುತ್ತವೆ. ವಾಸವಾಂಬಾ ಪುರಾಣದ ಹನ್ನೆರಡನೆಯ ಅಧ್ಯಾಯದಲ್ಲಿ ದೀಕ್ಷಿತರು ಸ್ವವಿಚಾರವನ್ನು ಹೀಗೆ ತಿಳಿಸಿದ್ದಾರೆ.

"ಕಶ್ಚಿದ್ವಿಪ್ರವರೋ ಭೂಮೌ ಭವಿಷ್ಯತಿ ಬಹು ಶ್ರುತಃ. ವೇದಶಾಸ್ತ್ರಾರ್ಥತತ್ವಜ್ಞ ಸ್ಮೃತಿ ಮಾನ್ಸತಿಭಾನ್ವಿತಃ. ಶ್ರೀರಾಮ ಭಕ್ತೋ ಧರ್ಮಾತ್ಮಾ ಸಾತ್ವಿಕಸ್ವಜನಪ್ರಿಯಃ. ಮಿತಭಾಷೀ ಮಧುರವಾಗಾಂಜನೇಯಕೃಪಾನ್ವಿತಃ. ನಾಮ್ನಾ ಶ್ರೀ ಬೇಟೆರಾಯ ಶ್ರೀ ದೀಕ್ಷಿತೋ ಬಹುವಿಶ್ರುತಃ. ರಾಮಾಯಣಂ ತತ್ರ ತತ್ರ ಸುರಮ್ಯಂ ಕಥಯನ್ಸುಧೀಃ. ಭೂವಲ್ಲೀನಾಮಕಪುರಂ ವಾಸವಾಂಬಾ ಪ್ರಚೋದನಾತ್. ಆಗಮಿಷ್ಯತಿ ತಸ್ಮಿನ್‌ನಗರೇಶ್ವರ ಸನ್ನಿಧೌ. ನಿವಸಿಷ್ಯತಿ ಸಾದೇವೀ ವಾಸವಾಂಬಾ ಮುದಾನ್ವಿತಾ. ಸ್ವರೂಪದರ್ಶಯಿತ್ವ ಸಾ ಸ್ಥಿತ್ವಾತನ್ನಿಕಟೇನಿಶಂ. ಇದಂ ಪುರಾಣಮಮಲಂತಸ್ಮೈ ವಕ್ಷ್ಯತಿ ಸಾದರಂ. ದೇವ್ಯಾ ಯಥೋಕ್ತಂ ತತ್ಸರ್ವಂ ಲೇಖಯಿಷ್ಯತಿ ದೀಕ್ಷಿತಃ. ವಕ್ತೀಸಾವಾಸವಾಂಬಾಹಿ ಲೇಖಕಃ ಸ ತು ದೀಕ್ಷಿತಃ" ಎಂದು ವೇದ ಶಾಸ್ತ್ರಾರ್ಥ ಜ್ಞಾನವನ್ನು, ಸ್ಮೃತಿಯನ್ನು, ಪ್ರತಿಭೆಯನ್ನು ಪಡೆದ ವಿಖ್ಯಾತನಾದ ಬ್ರಾಹ್ಮಣೋತ್ತಮನು ಜನಿಸುವನು. ಸಾತ್ವಿಕನೂ, ರಾಮಭಕ್ತನಾದ ಅವನು ಮಿತಭಾಷಿಯು ಮತ್ತು ಆಂಜನೇಯ ಕೃಪಾಪಾತ್ರನು.

---

ದಿನಾಂಕ ೧೫-೯-೨೦೦೧ ರಂದು ನಡೆದ ಬೇಟೆರಾಯದೀಕ್ಷಿತ ದತ್ತಿ ಉಪನ್ಯಾಸ

ಬೇಟೆರಾಯ ದೀಕ್ಷಿತನೆಂಬ ಹೆಸರಿನಿಂದ ಅಲ್ಲಲ್ಲಿ ರಮ್ಯವಾಗಿ ರಾಮಾಯಣ ಪ್ರವಚನ ಮಾಡುತ್ತಾ ವಾಸವಾಂಬೆಯ ಇಚ್ಛೆಯಿಂದ ಭೂವಲ್ಲಿ ಎಂಬ ನಗರಕ್ಕೆ ಬರುವನು. ಅಲ್ಲಿ ನಗರೇಶ್ವರ ದೇವಾಲಯದಲ್ಲಿ ವಾಸವಾಂಬೆಯು ಪ್ರಸನ್ನಳಾಗಿ ಸ್ವರೂಪವನ್ನು ಪ್ರದರ್ಶಿಸಿ ಈ ಉತ್ತಮವಾದ ಪುರಾಣವನ್ನು ಹೇಳುವಳು. ಅಂತೆಯೇ ದೇವಿಯ ಕಥನೆಯನ್ನೆಲ್ಲಾ ಯಥಾವತ್ತಾಗಿ ದೀಕ್ಷಿತರು ಬರೆಯುವರು.

ಹೀಗಾಗಿ ದೀಕ್ಷಿತರ ವಾಸವಾಂಬಾ ಪುರಾಣವು ಸಂಪೂರ್ಣವಾಗಿ ದೇವಿಯ ಕೃಪೆಯ/ ಕಥನದ ಪರಿಣಾಮವು. "ತಾನು ಕೇವಲ ಒಂದು ನೆಪಮಾತ್ರ" ಎಂದು ತಾವೇ ಉದ್ಗರಿಸಿದ್ದಾರೆ. ಇದಕ್ಕೆ ಅನುಗುಣವಾಗಿ ಪ್ರತಿ ಅಧ್ಯಾಯದ ಅಂತ್ಯದಲ್ಲಿಯೂ ವಾಸವಾಂಬೆಯಿಂದ ಹೇಳಲ್ಪಟ್ಟ, ದೀಕ್ಷಿತರಿಂದ ಬರೆಯಲ್ಪಟ್ಟ ಅಧ್ಯಾಯವು ಸಮಾಪ್ತಿಯಾದುದು ಎಂದು ಲಿಖಿತವಾಗಿದೆ.

**ವಾಸವಾಂಬಾ ಪುರಾಣ - ಶೀರ್ಷಿಕೆ :**

"ಪುರಾ ಅಪಿ ನವಂ" ಎಂಬಂತೆ ಹಳೆಯದಾದರೂ ಹೊಸದಾಗಿರುವುದೇ ಪುರಾಣ ಎಂಬ ಪದದ ವಿವರಣೆ. ಅಮರಕಾರನು ಪುರಾಣದ ಲಕ್ಷಣವನ್ನು "ಸರ್ಗಶ್ಚ ಪ್ರತಿಸರ್ಗಶ್ಚ ಮನ್ವಂತರಾಣಿಚ ವಂಶಾನುಚರಿತಂಚೇತಿ ಲಕ್ಷಣಾನಾಂ ತು ಪಂಚಕಂ" ಎಂದು ವಿವರಿಸಿದ್ದಾನೆ. ಹೀಗಾಗಿ ಸೃಷ್ಟಿ, ಪುನಃಸೃಷ್ಟಿ, ವಂಶ, ಕಾಲ, ವಂಶಗಳ ಚರಿತೆಯ ವಿಷಯಗಳ ನಿರೂಪಣೆಯೇ ಪುರಾಣವು. ಇದನ್ನೇ ದೀಕ್ಷಿತರು "ಸರ್ಗಾದಿ ಪಂಚಭೇದೇನಯುಕ್ತಂ ಸರ್ವಾರ್ಥದಾಯಕಂ" ಎಂದರೆ ಸರ್ಗಾದಿ ಐದು ಲಕ್ಷಣಗಳಿಂದ ಕೂಡಿದ ವಾಸವಾಂಬಾ ಪುರಾಣವನ್ನು ಪ್ರಕಾಶಿಸುತ್ತೇನೆ ಎಂದಿದ್ದಾರೆ.

ವಾಸವಾಂಬಾ ಎಂಬ ಹೆಸರು ಬಹಳ ಸಾಂಕೇತಿಕವಾಗಿದೆ. ಶೀರ್ಷಿಕೆಯ ಬಗ್ಗೆ ವಿವರಣೆಯು ಹೀಗಿದೆ : ವಾಸವಾ ಎಂಬ ಪದಕ್ಕೆ ಅನೇಕ ಪರಿಭಾಷೆಗಳಿವೆ. (ಅ) ಎಲ್ಲೆಡೆಯಲ್ಲಿಯೂ ವಾಸಮಾಡುವುದರಿಂದ ವಾಸವಾ ಎಂದು ಹೆಸರು. (ಆ) ವಸು ಎಂದರೆ ನಾರಾಯಣ. ಅವನ ಸೋದರಿಯಾದ್ದರಿಂದ ವಾಸವಾ (ಇ) ವಸು ಎಂದರೆ ಚಿತ್ ಶಕ್ತಿ (ಈ) ದ್ರವ್ಯ ಅದರ ರೂಪಿಯೇ ವಾಸವೆಯು. (ಉ) ವಸು - ಬ್ರಾಹ್ಮೀ ಮಾಯೆ. ಹೀಗಾಗಿ ವಾಸವಾ. ಅವಳು ಸರ್ವಜನನಿಯಾದ್ದರಿಂದ ಅಂಬೆಯೆಂದು ಪಾರ್ವತಿಯೆಂದು ಪ್ರಸಿದ್ಧಿಯಾಗಿದ್ದಾಳೆ.

ವಾಸವಾಂಬಾ ಪುರಾಣವು ೧೨ ಅಧ್ಯಾಯಗಳು, ೫೭೮ ಶ್ಲೋಕಗಳಿರುವ ಉತ್ತಮ ಕೃತಿಯಾಗಿದೆ.

**ವಾಸವಾಂಬಾಪುರಾಣದ ಕಥೆ :**

ವೈಶ್ಯ ಮುನಿಗಳು ನೈಮಿಷಾರಣ್ಯದಲ್ಲಿ ಸಾಲಂಕಾಯನ ಮುನಿಯ ಬಳಿ ಬಂದು "ಉತ್ತಮವಾದ, ಹಿಂದೆಂದೂ ಕೇಳಿರದ ವೈಶ್ಯಪುರಾಣವನ್ನು ಹೇಳು" ಎಂದು ನಿವೇದಿಸಿದರು. ಆಗ ಸಂತಸದಿಂದ ಮುನಿಯು ಕನ್ಯಕಾಪರಮೇಶ್ವರಿಯೇ ಅಧಿದೇವತೆಯಾದ, ಸರ್ವಪಾಪಹರವಾದ ವಾಸವಾಂಬಾ ಪುರಾಣವನ್ನು ಹೇಳುವೆನೆಂದು ಹೀಗೆ ನುಡಿದನು.

ಬ್ರಹ್ಮನ ತೊಡೆಯಿಂದ ಜನಿಸಿದ ವೈಶ್ಯರು ಶುಚಿ ಮತ್ತು ಶಾಂತಮನಸ್ಕರಾಗಿ, ತೀರ್ಥಯಾತ್ರೆ, ಛತ್ರ ನಿರ್ಮಾಣ ಅನ್ನದಾನಾದಿ ಧರ್ಮಕಾರ್ಯದಲ್ಲಿ ತೊಡಗಿದ್ದರು. ಸಂತಾನ

ಸುಖವನ್ನು ಅನುಭವಿಸಿ, ತೃಪ್ತಿಯಿಂದ ಜೀವನ ನಡೆಸಿದರು. ಆದರೆ ತಪಸ್ಸನ್ನಾಚರಿಸಿಲ್ಲ, ಶಿವಾ
ನುಗ್ರಹಪಾತ್ರರಾಗಿಲ್ಲವೆಂದು ಚಿಂತಿಸಿ ಗುರುವಿನಿಂದ ಮಂತ್ರೋಪದಿಷ್ಟರಾಗಿ ಗಂಗಾತೀರದಲ್ಲಿ
ತಪ್ಪೋನಿಷ್ಠರಾದರು. ನಂತರ ಶಿವನ ಸಾಮೀಪ್ಯವನ್ನು ಹೊಂದಿದರು. ಶಿವಲೋಕದಲ್ಲಿ
ಚಿತ್ರಕಂಧರನೆಂಬ ಗಂಧರ್ವನೋರ್ವನು ಸೋಮಕಾಂತನ ಪುತ್ರಿಯಾದ ವೈಶ್ಯಕನ್ಯೆಯನ್ನು
ಬೇಡಿದನು. ವೈಶ್ಯನಿಂದ ನಿಶ್ಚಿತವಾದ ಉತ್ತರವು ದೊರಕದೆ ನೀನು ಸಕುಟುಂಬನಾಗಿ ಅಗ್ನಿಯಿಂದ
ದಹಿಸಲ್ಪಡುವೆ ಎಂದು ಕನ್ಯೆಯನ್ನು ಶಪಿಸಿದನು. ಪ್ರತಿಕ್ರಿಯೆಯಾಗಿ ಸೋಮಕಾಂತನೂ ನಿನ್ನ
ತಲೆಯು ಸೀಳಲಿ ಎಂದು ಗಂಧರ್ವನನ್ನು ಕಳುಹಿಸಿದನು. ಶಾಪಪ್ರಭಾವದಿಂದ ಶಂಕರನು
ವೈಶ್ಯಮುನಿವರ್ಗವನ್ನು ಕೆಲಕಾಲ ಭೂಲೋಕಕ್ಕೆ ಕಳುಹಿಸಿದನು. ವೈಶ್ಯಸ್ತ್ರೀಯರು ಇಚ್ಛಾರಹಿತವಾಗಿ
ಪಾರ್ವತಿಯನ್ನು ಶ್ರದ್ಧಾಪೂರ್ವಕವಾಗಿ ಪ್ರಾರ್ಥಿಸಿದಾಗ, ಉಮೆಯು ತಾನೇ ಸ್ವತಃ
ವೈಶ್ಯಕುಟುಂಬದಲ್ಲಿ ಜನಿಸುವಳೆಂದು ವಚನ ನೀಡಿದಳು. ನಂತರ ಭೂಲೋಕದಲ್ಲಿ ಗಿರಿ
ನಗರಗಳಲ್ಲಿ ನಗರೇಶ್ವರನ ದೇವಾಲಯವನ್ನು ನಿರ್ಮಿಸಿ ಸಾತ್ವಿಕ ಜೀವನದಲ್ಲಿ ತೊಡಗಿದರು.
ಪ್ರತಿಷ್ಠಾನಗರದಲ್ಲಿ ಸುಮಶ್ರೇಷ್ಠಿ ಹಾಗೂ ಕುಸುಮಾಂಬಾ ಎಂಬ ದಂಪತಿಗಳು ಅನಪತ್ಯರಾಗಿ
ದುಃಖಿತಪ್ತರಾಗಿದ್ದರು. ನಂತರ ಪುತ್ರಕಾಮೇಷ್ಟಿಯಾಗವನ್ನು ವಿಧ ್ಯುಕ್ತವಾಗಿ ನೆರವೇರಿಸಿ
ವಾಸವಾಂಬಾ ಎಂಬ ಪುತ್ರಿಯನ್ನು ಮತ್ತು ಒಬ್ಬ ಪುತ್ರನನ್ನು ಪಡೆದರು. ಚತುರ್ಭುಜೆಯಾದ
ಅತಿಸುಂದರಿಯೂ, ಕೋಮಲೆಯೂ ಆದ ವಾಸವೆಯನ್ನು, ಪರ್ಯಟನೆಮಾಡುತ್ತಿದ್ದ ರಾಜನಾದ
ವಿಷ್ಣುವರ್ಧನನು ನಗರೇಶ್ವರದೇವಾಲಯದಲ್ಲಿ ನೋಡಿ ಅಚ್ಚರಿಯಾದನು. ಮದನಪೀಡಿತನಾದ
ಅವನು ಬಾಲೆಯ ವಿಷಯವನ್ನರಿತು, ಸುಮಶ್ರೇಷ್ಠಿಯ ಬಳಿ ತನ್ನ ಇಚ್ಛೆಯನ್ನು ವ್ಯಕ್ತಪಡಿಸಿದನು.
ಕ್ಷತ್ರಿಯ ಮತ್ತು ವೈಶ್ಯ ಸಂಬಂಧವು ಅನುಚಿತವೆಂದು ತಿಳಿಸಿದರೂ ಶಾಂತವಾಗದೆ ಪುನಃ ಪುನಃ
ಪೀಡಿಸಿದಾಗ ಧರ್ಮಿಷ್ಠರು ಬರಲಿರುವ ಮಾಧವಮಾಸದಲ್ಲಿ ವಿವಾಹವಾದರೆ ಉತ್ತಮವೆಂದು
ಸೂಚಿಸಿದರು. ಅಷ್ಟರಲ್ಲಿ ಧರ್ಮನಿಷ್ಠರಾದ ಕೆಲವೈಶ್ಯಮುನಿಗಳು ಸುಮಶ್ರೇಷ್ಠಿಯೊಡನೆ
ಅಗ್ನಿಪ್ರವೇಶಮಾಡಲು ನಿಶ್ಚಯಿಸಿದರು. ಆ ಮುಹೂರ್ತದಲ್ಲಿ ವಾಸವೆಯು ತನ್ನ ಸ್ವರೂಪವನ್ನು
ತೋರಿಸಿ ಅವಳನ್ನು ಹಿಂಬಾಲಿಸಿದವರನ್ನೆಲ್ಲರನ್ನೂ ಹೋಮಕುಂಡದ ಮಾರ್ಗವಾಗಿ ಕೈಲಾಸಕ್ಕೆ
ಕರೆದೊಯ್ದಳು. ಇತ್ತ ವಿಷ್ಣುವರ್ಧನನು ಭೀಕರ ವಾರ್ತೆಯನ್ನು ಕೇಳಿ ತಲೆಸೀಳಿ ಮೃತನಾದನು.

### ಕೃತಿಯ ರಮ್ಯತೆ :

ವಾಸವಾಂಬಾ ಪುರಾಣದ ಭಾಷೆಯು ಸುಂದರವೂ ಸುಲಲಿತವಾಗಿದೆ. ಪದಜೋಡಣೆ,
ಪ್ರಾಸಬದ್ಧರಚನೆಯಂತೂ ವಾಲ್ಮೀಕಿ ರಾಮಾಯಣ ಭಾಷೆಯ ಅನುಕರಣೆಯಾಗಿದ್ದು, ಓದುಗರಿಗೆ
ದೀಕ್ಷಿತರ ರಾಮಾಯಣಪ್ರಭುತ್ವವನ್ನು, ಮೆಚ್ಚುಗೆಯನ್ನು ತೋರುತ್ತದೆ. ಈ ಪುರಾಣದಲ್ಲಿ
ವರ್ಣನೆಗಳು ಅತಿ ರಮ್ಯವಾಗಿದೆ. ಪ್ರಥಮಾಧ್ಯಾಯದಲ್ಲಿ ನೈಮಿಷಾರಣ್ಯದ ವಿವರಣೆಯು ಅತಿ
ಉತ್ಕೃಷ್ಟವಾಗಿದೆ. ಶ್ರಮನಾಶಮಾಡುವ ಅಲ್ಲಿಯ ಆಶ್ರಮವು ರಾಜರ್ಷಿಗಳಿಂದಲೂ,
ಬ್ರಹ್ಮರ್ಷಿಗಳಿಂದಲೂ ವಾಸಿಸಲ್ಪಟ್ಟು ಬ್ರಹ್ಮಲೋಕದಂತಹ ಪ್ರಭೆಯನ್ನು ಹೊಂದಿದೆ. ವೈಶ್ಯ
ಋಷಿಗಳು ಧ್ಯಾನಮಗ್ನರಾಗಿ ಸಿದ್ಧಚಾರಣರಿಂದ ಸೇವಿಸಲ್ಪಟ್ಟು ಮೃಗಪಕ್ಷಿಗಳ ವೈರತ್ವವಿಲ್ಲದಿರುವ
ಭಾವನೆಯು ಮನಮುಟ್ಟುವಂತೆ ಚಿತ್ರಿಸಲ್ಪಟ್ಟಿದೆ. ತರುಲತೆಗಳು ಚಿಗುರಿ, ಹೂಹಣ್ಣುಗಳು
ತೂಗಾಡಿ, ನಮ್ರತೆಯ ಸೂಚನೆಯಿಂದ, ಸೌಂದರ್ಯವು ಮನೋಹರವಾಗಿದೆ.

ಶಿವನ ತ್ರಿಪುರಾಸುರವಧೆಯೂ ಅಲಂಕಾರಪೂರ್ವಕವಾಗಿ ಪ್ರತ್ಯಕ್ಷಚಿತ್ರಣ ನೀಡುತ್ತದೆ. ಶಂಕರನು ಭೂಮಂಡಲವೆಂಬ ರಥವನ್ನೇರಿ ಮೇರುಪರ್ವತವನ್ನು ಬತ್ತಳಿಕೆಯಾಗಿಸಿ, ಸರ್ವವ್ಯಾಪಿಯಾದ ನಾರಾಯಣನೆಂಬ ಬಾಣದಿಂದ ಯುದ್ಧಮಾಡುವನು. ಬ್ರಹ್ಮನು ಸಾರಥಿಯಾಗಿ, ವೇದಗಳೇ ಕುದುರೆಗಳಾಗಿ ಚಂದ್ರಸೂರ್ಯರೇ ಚಕ್ರಗಳಾಗಿ ಇಂದ್ರಾದಿದೇವತೆಗಳೇ ಸೈನಿಕರಾಗಿ, ಶ್ರೇಷ್ಠ ಸರ್ಪಗಳನ್ನು ಹಗ್ಗವಾಗಿಸಿ ತ್ರಿಪುರವನ್ನು ಭಸ್ಮಮಾಡಿದ ವರ್ಣನೆಯು ಮನಮೋಹಕವಾಗಿದೆ.

ದೇವಗಂಗಾಲಹರಿಯಿಲ್ಲದ ಸಂಸ್ಕೃತ ಇತಿಹಾಸವು ನೀರಸ. ಆದ್ದರಿಂದಲೇ ದೀಕ್ಷಿತರು ಈ ಪುರಾಣದಲ್ಲಿ ರಸವತ್ತಾದ ಝರಿಯನ್ನೇ ಹರಿಸಿದ್ದಾರೆ. ವೈಶ್ಯರೆಲ್ಲರೂ ತಪೋನುಷ್ಠಾನಕ್ಕಾಗಿ ಮನೋಹರವಾದ ಗಂಗಾತೀರವನ್ನು ಸೇರುತ್ತಾರೆ. ಭಗೀರಥಸುತೆಯಾದ, ಜಹ್ನುಕನ್ಯೆಯಾದ, ನಿರ್ಮಲವಾದ ದೇವಿಯು ಶಿವನ ಜಟೆಯಲ್ಲಿ ನೆಲೆಸಿ ಪುನೀತಳಾಗಿದ್ದಾಳೆ. ದೇವಗಂಧರ್ವರು ಸ್ನಾನಮಾಡುವ, ಸ್ವರ್ಗಫಲವನ್ನು ನೀಡುವ ಭಾಗೀರಥಿಯು ಅಪ್ಸರಸ್ತ್ರೀಯರ ಕುಂಕುಮದಿಂದ ಅಲಂಕೃತಳು. ಹೀಗಾಗಿ ದೀಕ್ಷಿತರು ಓದುಗರ ಮನಸ್ಸಿಗೆ ದಿವ್ಯ ಗಂಗೆಯ ದರ್ಶನವನ್ನೊದಗಿಸಿದ್ದಾರೆ.

ರಾಜನಾದ ವಿಷ್ಣುವರ್ಧನನು ವಾಸವಾಂಬೆಯೊಡನೆ ವಿವಾಹವಾಗಲು ಬಯಸಿದಾಗ, ಕುಸುಮಶ್ರೇಷ್ಠಿಯು ತನ್ನ ಕುಲಧರ್ಮನಾಶದ ಭೀತಿಯಿಂದ ಮೊದಲು ನಿರಾಕರಿಸುತ್ತಾನೆ. ನಂತರ ಬಲಾತ್ಕಾರದಿಂದ ಒಪ್ಪಿದ ವಾಸವಾಂಬೆಯ ಪಿತೃವು ಜ್ಯೋತಿಷಿಯನ್ನು ಕರೆಯಿಸಿ ಮುಹೂರ್ತವಿಡಲು ತಿಳಿಸುವನು. ಆ ಸಮಯದಲ್ಲಿ ಪಂಡಿತನು ರಾಜನು ಬರಲಿರುವ ಮಾಧವ ಮಾಸದಲ್ಲಿ ವಿವಾಹವಾದರೆ "ಮೂರ್ಧ್ನ ಮನೋರಥಃ ಫಲಿಷ್ಯತಿ" ಎಂದು ತಿಳಿಸುವನು. ಇಲ್ಲಿ ದೀಕ್ಷಿತರು ಚಮತ್ಕಾರವಾದ ಶ್ಲೇಷಾಲಂಕಾರದಿಂದ ತಮ್ಮ ಕೃತಿಯ ಸೊಬಗನ್ನೂ, ಹಿರಿಮೆಯನ್ನು ಹೆಚ್ಚಿಸಿದ್ದಾರೆ. 'ಫಲಿಷ್ಯತಿ' ಎಂದರೆ ಎಲೈ ರಾಜನೇ ನಿನ್ನ ಉತ್ಕಟೇಚ್ಛೆಯು ಈಡೇರುವುದಿಲ್ಲವೆಂದು ಅಭಿಪ್ರಾಯ ಒಂದೆಡೆಯಾದರೆ, "ನಿನ್ನ ತಲೆಯು ಸೀಳುತ್ತದೆ"ಯೆಂದು ಮತ್ತೊಂದರ್ಥ. ಹೀಗಾಗಿ ರಾಜನು ಪಂಡಿತನ ಹೇಳಿಕೆಯ ಅರಿವಿಲ್ಲದೆ ಸಂತುಷ್ಟನಾಗುತ್ತಾನೆ. ಶ್ಲೇಷಪದ ಜೋಡಣೆಯಿಂದ ಕಥಾವಸ್ತು ಗಂಭೀರವಾಗಿ ಸಾಗುತ್ತದೆ.

ವಾಸವಾಂಬೆಯ ಸೌಂದರ್ಯ ವರ್ಣನೆಯು ಅತಿ ಉತ್ತಮವಾಗಿದೆ. ಕವಿಯು ಅವಳ ಗುಣ, ಪಾವಿತ್ರ್ಯ, ಮಹಿಮೆ, ರೂಪವನ್ನೇನೆಂದು ಬಣ್ಣಿಸಲಿ? ವೈಕುಂಠದಲ್ಲಿ ಮಹಾಲಕ್ಷ್ಮಿಯೂ, ಸತ್ಯಲೋಕದಲ್ಲಿ ಸರಸ್ವತಿಯೂ, ಕೈಲಾಸದಲ್ಲಿ ಪಾರ್ವತಿಯೂ, ದೇವಲೋಕದಲ್ಲಿ ಶಚೀದೇವಿಯೂ, ಗೋಲೋಕದಲ್ಲಿ ರಾಧೆಯೂ, ತೇಜೋಲೋಕದಲ್ಲಿ ಸುಪ್ರಭೆಯೂ ಮತ್ತು ತಪೋಲೋಕದಲ್ಲಿ ಗಾಯತ್ರಿಯೂ, ಭೂಲೋಕದಲ್ಲಿ ವಾಸವಾಂಬೆಯಾಗಿ ಜನಿಸಿರುವಳು ಎಂದಿದ್ದಾರೆ.

ಇನ್ನು ಅಂತ್ಯದಲ್ಲಿ ಲಿಖಿತವಾದ ಯಜ್ಞಶಾಲೆಯ ಕಥನೆಯು ಹಿತಕರವಾಗಿದೆ. ವಿಶಾಲವೂ ವಿಮಲವೂ ಆದ ಯಜ್ಞಶಾಲೆಯ ಸುತ್ತಲೂ ಸಹಸ್ರಾರು ಬಾಳೆಕಂಬಗಳಿದ್ದು, ಹಸಿರು ಮಾವಿನ ತೋರಣದಿಂದ ಶೋಭಾಯಮಾನವಾಗಿದೆ. ವೇದಶಾಸ್ತ್ರಪುರಾಣಜ್ಞ ಬ್ರಾಹ್ಮಣರಿಂದ ಅಲಂಕರಿಸಲ್ಪಟ್ಟು, ವೀಣಾವೇಣುಮೃದಂಗ ಪುಣ್ಯಘೋಷಗಳಿಂದ ನಿನಾದಿಸುತ್ತಿದೆ. ರಂಗವಲ್ಲಿ, ಧೂಪ ದೀಪಗಳಿಂದ ವಿರಾಜಿಸುತ್ತಿದೆ. ಇಂತಹ ದೃಶ್ಯವನ್ನು ನೋಡುವವರೇ ಧನ್ಯರು.

**ಸ್ತೋತ್ರಸಾಹಿತ್ಯ :**

ವಾಸವಾಂಬಾಪುರಾಣವು ಸ್ತೋತ್ರಗಳಿಂದ ಸಂಪದ್ಭರಿತವಾಗಿದೆ. ಅಲ್ಲಲ್ಲಿ ಸಾಕಷ್ಟು ಸ್ತುತಿಗಳಿವೆ. ಮುಖ್ಯವಾಗಿ ೩ನೇ ಅಧ್ಯಾಯದಲ್ಲಿ ಬರುವ ಶಿವಸ್ತುತಿಯು ೧೧ ಶ್ಲೋಕಗಳಲ್ಲಿ ಶಿವನ ಗುಣಗಾನಮಾಡುತ್ತದೆ. ೭ನೇ ಅಧ್ಯಾಯದಲ್ಲಿ ಪಾರ್ವತೀಪಂಚರತ್ನಸ್ತೋತ್ರವು ದೇವಿಯ ಮಹಿಮೆಯನ್ನು ಕೊಂಡಾಡುತ್ತದೆ. ೮ನೇ ಅಧ್ಯಾಯದಲ್ಲಿ ಬರುವ ಶಿವಪಂಚಾಕ್ಷರೀಸ್ತೋತ್ರವು ಶ್ರೀ ಶಂಕರನನ್ನು ಪರಬ್ರಹ್ಮ ನಿರ್ಗುಣ ಅವಸ್ಥೆಯಲ್ಲಿ ವರ್ಣಿಸಿದೆ. ದೇವಿ ವಾಸವಾಂಬೆಗೆ ದೀಕ್ಷಿತರು ೧೧ನೇ ಅಧ್ಯಾಯದಲ್ಲಿ ನವರತ್ನಗಳ ಮಾಲೆಯನ್ನೇ ಸಮರ್ಪಿಸಿದ್ದಾರೆ. ಎಂತಹ ಧನ್ಯರಾದ ಧನಿಕರು ದೀಕ್ಷಿತರು. ಈ ಸ್ತೋತ್ರದಲ್ಲಿ ವಾಸವಾಂಬೆಯ ಅಂಗಾಂಗವರ್ಣನೆ, ಗತಿಯ ರೀತಿ, ಮಹಿಮೆಯೆಲ್ಲವೂ ಅಳವಡಿಸಲ್ಪಟ್ಟಿವೆ.

ಈ ಎಲ್ಲಾ ಸ್ತೋತ್ರಗಳ ಶೈಲಿ, ಭಾಷಾಮಾಧುರ್ಯವು ಓದುಗನಲ್ಲಿ ಭಕ್ತಿರಸವನ್ನು ಅಂಕುರಿಸಿ ಬೆಳೆಸುತ್ತದೆ. ಈ ಪುರಾಣದ ಸ್ತೋತ್ರಸಾಹಿತ್ಯವೇ ಸುಮಾರು ೪೫ - ೫೦ ಶ್ಲೋಕಗಳಾಗಿ ಪ್ರತ್ಯೇಕ ಪಠನಕ್ಕೂ, ಪಾರಾಯಣಕ್ಕೂ ಅರ್ಹವು. ಪ್ರತಿ ಸ್ತೋತ್ರದ ಅಂತ್ಯದಲ್ಲಿ ಫಲಶ್ರುತಿಯೂ ಇರುವುದರಿಂದ ಒಂದೊಂದೂ ಸಂಪೂರ್ಣವಾಗಿವೆ.

**ತತ್ವ ವಿಚಾರ :**

ವಾಸವಾಂಬಾಪುರಾಣವನ್ನು ಬರೆದ ದೀಕ್ಷಿತರ ಮನೋಧರ್ಮವು ಅತಿ ವಿಶಾಲವೂ ಶ್ಲಾಘನೀಯವೂ ಹೌದು. ಬ್ರಾಹ್ಮಣೋತ್ತಮರಾಗಿ, ಸಂಪ್ರದಾಯಸ್ಥರಾದ ಭಕ್ತರು ವೈಶ್ಯಲೋಕಹಿತಕ್ಕಾಗಿ, ಸತ್ಯಧರ್ಮಸಮೃದ್ಧಿಗಾಗಿ, ಭಕ್ತಿ ವೈರಾಗ್ಯಪ್ರಾಪ್ತಿಗೋಸ್ಕರ ಉತ್ತಮ ಪುರಾಣವನ್ನೇ ರಚಿಸಿದ್ದಾರೆ.

ಈ ಕೃತಿಯಲ್ಲಿ ದೈವೀಶಕ್ತಿಯ ಆರಾಧನೆಯು ಸ್ವಾಭಾವಿಕವಾಗಿದೆ. ಪಾರ್ವತಿಯ ಸೌಂದರ್ಯವನ್ನು ಆರಾಧಿಸುತ್ತಾ ಹಿರಿಮೆಯನ್ನು ಹಾಡುತ್ತಾ, ಗುಣವನ್ನು ಅನುಭವಿಸುತ್ತಾ ಪಾಮರನೂ ಭಕ್ತಿ ಮಾರ್ಗದಲ್ಲಿ ತೊಡಗುತ್ತಾನೆ. ನಂತರ ಸ್ವಾರ್ಥವನ್ನು ತೊರೆದು ಅಹಂಕಾರವನ್ನು, ಅಜ್ಞಾನವನ್ನು ತ್ಯಜಿಸಿ ಆತ್ಮಾಹುತಿಗೆ ಸಿದ್ಧನಾಗುವನು. ವೈರಾಗ್ಯದ ವೈಭವವನ್ನು ಅರಿತು, ಅನೇಕಜನ್ಮಸುಕೃತಗಳಿಂದ ಪ್ರಾಪ್ತವಾದ ಯಜ್ಞಶಾಲೆಯನ್ನು ಸಮೀಪಿಸುವನು. ಅಲ್ಲಿ ಆತ್ಮಸಮರ್ಪಣೆಯಮೂಲಕ ಭಕ್ತಿಯ ಮೂರ್ತಿಯಾದ ವಾಸವಾಂಬೆಯು ವೈರಾಗ್ಯದ ಘನಿಯಾದ ಶಿವನ ಸಾಮೀಪ್ಯವನ್ನು ನೀಡುವಳು. ಇಂತು ಸರ್ವಪಾಪನಾಶವಾಗಿ, ಅನಂತಶಾಂತಿಯು ದೊರಕುವುದು.

ಭಾಷಾಮಾಧುರ್ಯ, ಸರಸವಾದ ಕಥೆ, ಭಕ್ತಿ ಪೂರಕಸ್ತೋತ್ರಗಳು, ನೈಸರ್ಗಿಕಚಿತ್ರಣ, ಧರ್ಮವಿಚಾರಸಂಕಲನ, ವೈರಾಗ್ಯದ ಪರಾಕಾಷ್ಠೆ, ಇವುಗಳಿಂದ ಭರಿತವಾದ ವಾಸವಾಂಬಾ ಪುರಾಣವು ಒಂದು ಉತ್ತಮಕೃತಿಯೆಂಬುದರಲ್ಲಿ ಸಂದೇಹವಿಲ್ಲ.



# ಟೀಕೆ ಟಿಪ್ಪಣಿಗಳು

## 'ದೃಷ್ಟಿವಿಷಾಹಿ', 'ಕರತಲಾಮಲಕಂ', 'ಬಾಲಮನಾಡಿದರ್', 'ನಿಷ್ಫಲಪುಷ್ಪದರ್ಶನಂ' - ನಾಲ್ಕು ಲಘು ಟಿಪ್ಪಣಿಗಳು

- ಡಾ. ನ. ಸುಬ್ರಹ್ಮಣ್ಯಂ

### ೧. 'ದೃಷ್ಟಿವಿಷಾಹಿ'

ಪಂಪರಾಮಾಯಣದಲ್ಲಿ ಸೀತಾಪಹರಣ ಪ್ರಸಂಗದಲ್ಲಿ ದೃಷ್ಟಿ ವಿಷಾಹಿ ಎಂಬ ಮಾತು ಬರುತ್ತದೆ. ಅಲ್ಲಿನ ಪ್ರಸಂಗ ಹೀಗಿದೆ :

ದಶರಥ ಕೈಕೆಗೆ ಕೊಟ್ಟಿದ್ದ ಎರಡು ವರಗಳ ಫಲವಾಗಿ ರಾಮನಿಗೆ ವನವಾಸ ಪ್ರಾಪ್ತವಾಯಿತು. ರಾಮನು ಕಾಡಿಗೆ ಹೊರಟರೆ ಸೀತೆ ಲಕ್ಷ್ಮಣರೂ ಅವನನ್ನು ಹಿಂಬಾಲಿಸಿದರು. ಅವರು ಕಾಡಿನಲ್ಲಿದ್ದಾಗ ಒಮ್ಮೆ ಮಳೆಗಾಲದ ಆರಂಭ. ಆಗ ಗಾಳಿಯಲ್ಲಿ ಒಂದು ಸುಗಂಧ ತೇಲಿಬಂತು. ಅದರಿಂದ ಆಕರ್ಷಿತನಾದ ಲಕ್ಷ್ಮಣ ಹಾಗೇ ಕಾಡಿನಲ್ಲಿ ಅಲೆಯುತ್ತಾ ಹೋದ. ದಾರಿಯಲ್ಲಿ ಥಳಥಳಿಸುತ್ತಿದ್ದ ಸೂರ್ಯಹಾಸವೆಂಬ ಖಡ್ಗ ಬಿದ್ದಿತ್ತು. ಲಕ್ಷ್ಮಣ ಅದನ್ನು ಕೈಗೆತ್ತಿಕೊಂಡ. ಅದರ ಹರಿತವನ್ನು ಪರೀಕ್ಷಿಸುವ ಮನಸ್ಸಾಯಿತು. ಎದುರಿಗಿದ್ದ ಬಿದಿರ ಮೆಳೆಗೆ ಕತ್ತಿಯನ್ನು ಬೀಸಿದ. ಅದು ಕತ್ತರಿಸಿ ಮೇಲಕ್ಕೆ ಹಾರಿತು. ಅದರ ಜೊತೆಗೆ ಒಂದು ತಲೆಯೂ ಹಾರಿತು. ಅಂದರೆ, ಆ ಬಿದಿರುಮೆಳೆಯ ನಡುವೆ ಅದೇ ಖಡ್ಗದ ಸಿದ್ಧಿಗಾಗಿ, ರಾವಣನ ತಂಗಿ ಚಂದ್ರನಖಿಯ ಮಗ ಶಂಭುಕನೆಂಬುವನು ತಪೋನಿರತನಾಗಿ ಕುಳಿತಿದ್ದ. ಆ ಬಿದಿರಮೆಳೆಯೊಡನೆ ಶಂಭುಕನ ತಲೆಯೂ ಹಾರಿತ್ತು.

ಮಗನನ್ನು ಕಳೆದುಕೊಂಡ ಚಂದ್ರನಖಿ ಪರಿತಪಿಸಿದಳು. ಅವಳ ಪತಿ ಖರನು ಲಕ್ಷ್ಮಣನ ಮೇಲೆ ಸೇಡು ತೀರಿಕೊಳ್ಳಲು ಯುದ್ಧವನ್ನು ಸಾರಿದ. ಆ ಸುದ್ದಿಯನ್ನು ತಿಳಿದ ರಾವಣನೂ ತನ್ನ ಭಾವನ ಬೆಂಬಲಕ್ಕಾಗಿ ಹೊರಟ.

ಆ ಮಾರ್ಗದಲ್ಲಿ ಬರುತ್ತಿದ್ದ ರಾವಣ ಎದುರಿಗೆ ರಾಮನ ಪಕ್ಕದಲ್ಲಿ "ಬಜಿಸಿಡಿಲ ಬಟೆವಿಡಿದು ಪೊಳೆವ ಕುಡುಮಿಂಚಿನಂತೆ" ಕುಳಿತಿದ್ದ ಸೀತೆಯನ್ನು ನೋಡಿದ. ಅವನ ಚಿತ್ತ ಪದ್ಮಪತ್ರದ ಜಲಬಿಂದುವಿನಂತೆ ಚಂಚಲವಾಯಿತು. ಅವನಿಗೆ ಅವಳನ್ನು ಪಡೆಯಬೇಕೆಂಬ ಮನಸ್ಸಾಯಿತು.

ರಾವಣನು ಸೀತೆಯನ್ನು ಪಡೆಯಬಯಸಿದುದು "ದೃಷ್ಟಿವಿಷಾಹಿಯ ಹೆಡೆಯಲ್ಲಿರುವ ಮಣಿಶಲಾಕೆಗೆ ಕೈನೀಡುವ ಮೂರ್ಖನಂತಾಯಿತು" ಎನ್ನುತ್ತಾನೆ ಕವಿ.

ಅವಿವೇಕಿ ದಶಮುಖಂ ದೃ
ಷ್ಟಿವಿಷಾಹಿಯ ಪೆಡೆಯ ಮಣಿಶಲಾಕೆಗೆ ಕಯ್ ನೀ ।
ಡುವ ಗಾಂಪನಂತೆ ರಘುವೀ
ರವಧೂ ಜನಕಜೆಗೆ ಮನದೊಳಳಿಪಂ ತಂದಂ ॥

(ಪಂಪರಾ. ಸಂಗ್ರಹ ೪-೪೯)

ಇಲ್ಲಿ 'ದೃಷ್ಟಿವಿಷಾಹಿ' ಎಂದರೇನು ?

ಹಾವಿಗೆ ಹಲ್ಲಿನಲ್ಲಿ ವಿಷವಿರುವುದು ವೇದ್ಯ. ಆದರೆ ದೃಷ್ಟಿಯಲ್ಲಿ ವಿಷವುಂಟೆ? ಒಂದು ಬಗೆಯ ಹಾವಿಗೆ ಉಂಟು ಎಂದು ಹೇಳುತ್ತಾರೆ ! ಅದರ ದೃಷ್ಟಿ ಸೋಕಿಡೊಡನೆ ಯಾವುದೇ ಪ್ರಾಣಿ ಸತ್ತು ಬೀಳುತ್ತದಂತೆ. ಸಂಸ್ಕೃತದಲ್ಲಿ "ದೃಶದೃಕ್" ಎಂಬ ಪದವೂ ಇದೆ. ಅದಕ್ಕೆ ಹಾವು ಎಂದೇ ಅರ್ಥ.

"ಹಾವು ದೃಷ್ಟಿಸಿ ನೋಡಿದರೆ ಮರದ ಮೇಲಿನ ಹಕ್ಕಿ ಸತ್ತು ಕೆಳಕ್ಕೆ ಬೀಳುತ್ತೆ ಕಣ್ರಾಯ್ಯ" ಎಂದು ಪ್ರೊಫೆಸರ್ ಡಿ.ಎಲ್.ಎನ್. ಯಾವುದೋ ಒಂದು ಪ್ರಸಂಗದಲ್ಲಿ ಹೇಳಿದ್ದರು.

ಮಹಾಭಾರತದಲ್ಲಿ ಧರ್ಮವ್ಯಾಧನ ಕಥೆಗೆ ಸಂಬಂಧಪಟ್ಟಂತೆ ಒಂದು ಪ್ರಸಂಗ ಬರುತ್ತದೆ. ಕೌಶಿಕನೆಂಬ ವಿಪ್ರ ಕಾಡಿನಲ್ಲಿ ಬಹುಕಾಲ ತಪಸ್ಸನ್ನಾಚರಿಸುತ್ತ ಕುಳಿತಿದ್ದ. ಮರದಮೇಲೆ ಕುಳಿತಿದ್ದ ಬಲಾಕಾಪಕ್ಷಿ ಅವನಮೇಲೆ ಹಿಕ್ಕೆ ಹಾಕಿತು. ಕ್ರುದ್ಧನಾಗಿ ಅವನು ತಲೆಯೆತ್ತಿ ನೋಡಿದ. ಕೂಡಲೇ ಅದು ಸತ್ತು ಕೆಳಗೆ ಬಿದ್ದಿತು. ತನಗೆ ಯೌಗಿಕಶಕ್ತಿ ಪ್ರಾಪ್ತವಾಯಿತೆಂದು ಮೆಚ್ಚಿಕೊಂಡು ಅವನು ಅಲ್ಲಿಂದ ಎದ್ದು ಹೊರಡುತ್ತಾನೆ. ಹೀಗೆ ದೃಷ್ಟಿಯಲ್ಲಿ ಯೌಗಿಕವಾಗಿ ಸಾಧಿಸಬಹುದಾದ ವಿಷವು ಕೆಲವು ಹಾವುಗಳಿಗೆ ಸಹಜವಾಗಿಯೇ ಇರುತ್ತದಂತೆ.

ಐವತ್ತರ ದಶಕದಲ್ಲಿ 'ನವನೀತ್' ಎಂಬ ಹಿಂದೀ ಮಾಸಿಕದಲ್ಲಿ ಬಂದಿದ್ದ ಒಂದು ಲೇಖನ ನನ್ನ ನೆನಪಿಗೆ ಬರುತ್ತಿದೆ. ಲೇಖಕ ಒಬ್ಬ ಪ್ರಸಿದ್ಧ ಹಿಂದೀಸಾಹಿತಿ, ತನ್ನ ಬಾಲ್ಯದ ಘಟನೆಯೊಂದನ್ನು ಅದರಲ್ಲಿ ವಿವರಿಸಿ "ಇದಕ್ಕೆ ನೀವೇನೆನ್ನುವಿರಿ?" ಎಂದು ಪ್ರಶ್ನೆ ಹಾಕಿದ್ದಾನೆ. ದೆಹಲೀಪ್ರಾಂತ, ಬೇಸಿಗೆಯ ಮಧ್ಯಾಹ್ನ, ಸುಡುಬಿಸಿಲು, ಧಗೆ! ಹುಡುಗನಿಗೆ ರಜಾದಿನ. ಮನೆಯೊಳಗೆ ಇರಲಾಗದೆ ಹಿತ್ತಿಲಿಗೆ ಹೋಗಿ, ಒಂದು ಮರದ ನೆರಳಲ್ಲಿ ಕುಳಿತ. ಅವನ ಕಣ್ಣೆದುರಿಗೆ ಮುರಿದ ಕುರ್ಚಿ ಮೇಜು ಇತ್ಯಾದಿ ತ್ಯಾಜ್ಯ ವಸ್ತುಗಳನ್ನೆಲ್ಲ ತುಂಬಿಕೊಂಡಿದ್ದ ಬಾಗಿಲಿಲ್ಲದ ಕೋಣೆ. ಕೆಲವು ಕ್ಷಣ ಕಳೆದು ಅವನು ಆ ಕೋಣೆಯ ಬಾಗಿಲತ್ತ ಕಣ್ಣು ಹಾಯಿಸಿದಾಗ ಅವನ ಜೀವ ಝಲ್ ಎಂದಿತು. ಕಾರಣ, ತನ್ನೆದುರಿಗೇ ಒಂದು ಸರ್ಪ ಹೆಡೆಯೆತ್ತಿ ಕುಳಿತಿದೆ! ಆದರೆ ಅದು ತನಗೆ ವಿಮುಖನಾಗಿ ಕೋಣೆಯ ಬಾಗಿಲನ್ನೇ ನೋಡುತ್ತ ಕುಳಿತಿದೆ. ಅದು ತನ್ನೆಡೆಗೆ ಬಂದೀತೆಂಬ ಭಯವಿಲ್ಲದಿದ್ದುದರಿಂದ ಹುಡುಗ ಓಡಲಿಲ್ಲ. ಅದು ಏನನ್ನು ನೋಡುತ್ತಿದೆ ಎಂಬತ್ತ ಕುತೂಹಲ ತಾಳಿದ ಅವನು. ಅದೂ ಕೋಣೆಯ ಬಾಗಿಲತ್ತಲೇ ನೋಡುತ್ತಿದೆ, ಇವನೂ ಅತ್ತಲೇ ನೋಡುತ್ತಿದ್ದಾನೆ. ಮರುಕ್ಷಣ ಆ ಕೋಣೆಯಲ್ಲಿ ಒಂದು ಇಲಿ ಅತ್ತಿಂದಿತ್ತ ಚಲಿಸಿದಂತಾಯಿತು. ಹೌದು, ಒಂದು ಇಲಿ! ಅದು ಬಾಗಿಲ ಬಳಿ ಬಂತು. ಹೊಸ್ತಿಲ ಮೇಲೆ ಕುಳಿತಿತು. ಮೆಲ್ಲ ಮೆಲ್ಲನೆ ಹಾವಿನ ಮುಂದಕ್ಕೆ ನಡೆದುಬಂತು. ಸಮೀಪಕ್ಕೆ ಬಂದೊಡನೆ ಹಾವು ಬಗ್ಗಿ ಬಾಯಿ ತೆರೆಯಿತು. ಇಲಿ ಬಾಯೊಳಕ್ಕೆ ಪ್ರವೇಶಿಸಿತು! "ಇದಕ್ಕೆ ನೀವೇನೆನ್ನುವಿರಿ? ನೀವಿದನ್ನು ನಂಬುವಿರಾ?" ಎಂದು ಕಡೆಯಲ್ಲಿ ಕೇಳುತ್ತಾನೆ ಲೇಖಕ.

ದೃಷ್ಟಿವಿಷಾಹಿ ಎಂದರೆ ಅದು! ಕೇವಲ ದೃಷ್ಟಿಮಾತ್ರದಿಂದಲೇ ಸಾವನ್ನುಂಟುಮಾಡುವಂತಹುದು ಆ ಸರ್ಪ! ಅದರ ಹೆಡೆಯಮೇಲಿರುವ ರತ್ನದ ಹೊಳಪನ್ನು ಕಂಡು ಆಸೆಪಟ್ಟು ಆ ರತ್ನವನ್ನು ತೆಗೆದುಕೊಳ್ಳಲು ವಿವೇಕಿಗಳು ಯಾರಾದರೂ ಕೈನೀಡುತ್ತಾರೆಯೇ? ಕೈನೀಡುವವನು ಗಾಂಪನಲ್ಲವೆ? ರಾವಣನು ಸೀತೆಯನ್ನು ಪಡೆಯಬಯಸಿದುದೂ ಅಂತೆಯೇ ಆಯಿತು ಎನ್ನುತ್ತಾನೆ, ಕವಿ ನಾಗಚಂದ್ರ.

## ೨. 'ಕರತಲಾಮಲಕಂ' :

ಕರತಲ ಎಂದರೆ ಅಂಗೈ, ಆಮಲಕ ಎಂದರೆ ನೆಲ್ಲಿಕಾಯಿ. 'ಕರತಲಾಮಲಕಂ' ಎಂದರ ಅಂಗೈಯಲ್ಲಿ ಹಿಡಿದ ನೆಲ್ಲಿಕಾಯಿಯಂತೆ, ಎಂದರ ಕಣ್ಣೆದುರೇ ಅದನ್ನು ಯಾವ ಕಡೆ ಬೇಕಾದರೂ ಹೊರಳಿಸಿ ನೋಡಿ ಸ್ಪಷ್ಟವಾಗಿಸಿಕೊಳ್ಳಬಹುದು. ಸಂಸ್ಕೃತ - ಇಂಗ್ಲಿಷ್ ಅರ್ಥಕೋಶದಲ್ಲಿಯೂ ಇದೇ ಅರ್ಥವನ್ನು ವಿವರಿಸಲಾಗಿದೆ. An amalaka fruit on the palm of the hand; the expression is used to signify 'ease and vividness' as in the case of a fruit on the palm of the hand. 'ಕರತಲಾಮಲಕವ ದಖಿಲಂ ಜಗದವಲೋಕಯತಾಂ' ಎಂದು ಕಾದಂಬರಿಯಿಂದ ಉದಾಹರಣೆಯನ್ನು ಕೊಡಲಾಗಿದೆ. 'ಕರತಲಾಮಲಕಂ' ಎಂಬ ಹೇಳಿಕೆ ವಿಷಯವನ್ನು ಗ್ರಹಿಸುವಲ್ಲಿ ಸುಲಭತೆಯನ್ನೂ ಸ್ಪಷ್ಟತೆಯನ್ನೂ ಸೂಚಿಸುವುದಾಗಿದೆ. ಕನ್ನಡದ ಕವಿಗಳು ಇದನ್ನು 'ಅಂಗೈನೆಲ್ಲಿ' ಎಂದು ಕನ್ನಡೀಕರಿಸಿದ್ದಾರೆ. ಇದು ಎಲ್ಲರಿಗೂ ವಿದಿತವಾದ ಸಂಗತಿ.

ಆದರೆ ಇಲ್ಲೊಂದು ವಿಶೇಷವಿದೆ. ಇನ್ನೊಂದು ರೀತಿಯಲ್ಲಿ ನೋಡುವುದಕ್ಕೂ, ಇನ್ನೊಂದು ಬಗೆಯ ಅರ್ಥವನ್ನು ಪಡೆಯುವುದಕ್ಕೂ ಆಸ್ಪದವಿದೆ. ಸಂಸ್ಕೃತದಲ್ಲಿ 'ಕಂ' ಎಂದರೆ ನೀರು (ಕಂಜ = ಜಲಜ). 'ಅಮಲ + ಕಂ' ಎಂದರೆ ನಿರ್ಮಲವಾದ ನೀರು. ಕರತಲ + ಅಮಲ + ಕಂ = ಕರತಲಾಮಲಕಂ, ಅಂಗೈಯಲ್ಲಿ ಹಿಡಿದ ನಿರ್ಮಲವಾದ ನೀರು.

ಅಂಗೈಯಲ್ಲಿನ ನೆಲ್ಲಿಕಾಯಿಯನ್ನು ಪೂರ್ಣವಾಗಿ ಕಾಣಬೇಕಾದರೆ ತಿರುಗಿಸಿ ನೋಡಬೇಕು. ಹಾಗೆ ನೋಡಿದರೂ ಹೊರಮೈ ಮಾತ್ರ ಗೋಚರ. ಅಂಗೈಯ ನಿರ್ಮಲ ನೀರಾದರೆ ನೇರ, ಸ್ಪಷ್ಟ, ಸರ್ವಾಂಗಗೋಚರ.

'ಕರತಲಾಮಲಕಂ' ಶಬ್ದ ಸ್ವರೂಪ ಒಂದೇ. ಆ ಬಗೆಯ ವಿಭಾಗವೂ ಸವರ್ಣದೀರ್ಘಸಂಧಿ, ಈ ಬಗೆಯ ವಿಭಾಗವೂ ಸವರ್ಣದೀರ್ಘಸಂಧಿ, ಯಾವ ಬಗೆಯ ಭಾಷಾವಿಕಾರಕ್ಕೂ ಎಡೆಗೊಡದೆ ಖಚಿತವಾಗಿ ಸ್ಪಷ್ಟತರ ಅರ್ಥವನ್ನು ಪಡೆಯಲು ಸಾಧ್ಯ. ಬಹುಶಃ ಆ ಶಬ್ದವನ್ನು ಸೃಷ್ಟಿಸಿದವನ ಅರ್ಥ ಮೂಲತಃ ಅಮಲ + ಕಂ ಎಂಬುದೇ ಇದ್ದಿರಬಹುದು. ಆಮಲಕದ ವ್ಯಾಖ್ಯಾನ ಬಂದಮೇಲೆ ಅದು ದಾರಿತಪ್ಪಿರಬೇಕು !

## ೩. 'ಸಿಂಹಮಾಡುವರ ಬಾಲಮನಾಡಿದರ್'

ಇದು ಪಂಪಭಾರತದಲ್ಲಿ ಬರುವ ಮಾತು (೯-೮೯). ಮಯನಿರ್ಮಿತ ಸಭಾಭವನವನ್ನು ಕಂಡುಬಂದ ದುರ್ಯೋಧನ, ತಾನು ಅರಗಿನ ಮನೆಯಲ್ಲಿ ಸುಟ್ಟು ಭಸ್ಮಮಾಡಿದೆನೆಂದುಕೊಂಡಿದ್ದ ಪಾಂಡವರು ವೈಭವದಲ್ಲಿ ಮೆರೆಯುತ್ತಿದ್ದುದನ್ನು ನೋಡಿ ಮತ್ಸರಿಸಿ, ದುಷ್ಟ ಚತುಷ್ಟಯದೊಡನೆ ಮಂತ್ರಾಲೋಚನೆ ಮಾಡಿ ಕೃತಕದ್ಯೂತದ ಯೋಜನೆಯನ್ನು ಹಾಕಿಕೊಂಡ. ಅವರ ಸಭಾಭವನದಂತೆಯೇ ತಾನೂ ಒಂದು ಸಭಾಭವನವನ್ನು ಕಟ್ಟಿಸಿದ. "ನೀವೂ ನಾವೂ ಕೆಲವು ದಿನ ಒಟ್ಟಿಗೆ ಇರೋಣ ಬನ್ನಿ" ಎಂದು ಧರ್ಮರಾಯನಿಗೆ ಸ್ನೇಹದ ಆಹ್ವಾನವನ್ನು ಕಳಿಸಿದ. ಅದಕ್ಕೆ ಧರ್ಮರಾಯನೂ ಮರುಳಾಗಿ ಸಪರಿವಾರನಾಗಿ ಬಂದ. ದುರ್ಯೋಧನ ಧರ್ಮರಾಯಾದಿಗಳನ್ನು ಪ್ರೀತಿಯಿಂದ ಸ್ವಾಗತಿಸಿ, ಅವರಿಗೆ

ತಾನು ನಿರ್ಮಿಸಿದ್ದ ಸಭಾಭವನವನ್ನು ತೋರಿಸಿದ. ಅವನು ತೋರಿಸಿದ ಬಗೆ ಹೇಗಾಯಿತೆಂದರೆ, 'ಸಿಂಹಮಾಡುವರ ಬಾಲಮನಾಡಿದರ್' ಎಂಬಂತಾಯಿತು. ಜಿಹ್ಮಮಾಡುವರ ಎಂಬುದು ವಿಕ್ರಮಾರ್ಜುನ ವಿಜಯದಲ್ಲಿ ಸಂಪಾದಕರು ಆಯ್ಕೆಮಾಡಿಕೊಂಡಿರುವ ಪಾಠ. 'ಜಿಹ್ಮ' ಎಂಬ ಮಾತಿಗೆ ವಕ್ರ, ವಂಚನೆ ಎಂಬ ಅರ್ಥವಿರುವುದರಿಂದ "ವಕ್ರತೆಯಿಂದ ನಡೆವವರ, ವಂಚಕರ ಬಾಲವನ್ನು ಆಡಿಸಿದರು" ಎಂದು ಅರ್ಥಯಿಸಿದರೆ ಹೊಂದಿಕೆಯಾಗದು. ಗ ಮತ್ತು ಘ ಪ್ರತಿಗಳಲ್ಲಿ 'ಜಿಹ್ಮ' ಬದಲು 'ಸಿಂಹ' ಎಂದಿದೆ. ಪ್ರೊ|| ಡಿ.ಎಲ್.ಎನ್. ಅವರು ಆ ಪಾಠವನ್ನೇ ಆಯ್ಕೆಮಾಡಿಕೊಂಡಿದ್ದಾರೆ.

ಕಾಮನ ಹಬ್ಬದಲ್ಲಿ, ಬಾಬಯ್ಯನ ಹಬ್ಬದಲ್ಲಿ 'ಹುಲಿವೇಷ' ಹಾಕುವುದು ನಮ್ಮ ಕೆಲವು ಗ್ರಾಮೀಣ ಪ್ರದೇಶಗಳಲ್ಲಿರುವ ಸಂಪ್ರದಾಯ. ಇಂದಿಗೂ ಹಲವೆಡೆಗಳಲ್ಲಿ ಉಳಿದುಕೊಂಡು ಬಂದಿದೆ.

ಕಿವಿ ಗಡಚಿಕ್ಕುವ ತಮಟೆಗಳ ಬಡಿತ. ಸುತ್ತಮುತ್ತ ನೋಡಲು ನೆರೆದ ಜನಸಂದಣಿ. ತಮಟೆಗಳ ಲಯಕ್ಕೆ ಹುಲಿಯ ವೇಷದವನ ಕುಣಿತ. ಇಬ್ಬರು ಆಚೆ ಈಚೆ ಹುಲಿಯ ಸೊಂಟಕ್ಕೆ ಬಿಗಿದ ಹಗ್ಗದ ತುದಿಗಳನ್ನು ಹಿಡಿದು ಹುಲಿಯನ್ನು ನಿಯಂತ್ರಿಸುತ್ತಿರುತ್ತಾರೆ. ಕಟ್ಟು ಕಿತ್ತುಕೊಂಡು ನುಗ್ಗುವಂತೆ ಹುಲಿ ನುಗ್ಗುತ್ತಿರುತ್ತದೆ. ಹುಲಿಗೆ ಹಿಂದುಗಡೆ ಒಂದು ಉದ್ದನೆಯ ಬಾಲವನ್ನು ಕಟ್ಟಿರುತ್ತಾರೆ; ಅದರ ತುದಿಗೊಂದು ಬಣ್ಣದ ಕಾಗದದ ಗೊಂಡೆ. ಒಬ್ಬ ಹುಡುಗ ಆ ಬಾಲದ ತುದಿಯನ್ನು ಎತ್ತಿಹಿಡಿದು ತಾನೂ ಕುಣಿಯುತ್ತಿರುತ್ತಾನೆ.

ಆ ಪ್ರಸಂಗದಲ್ಲಿ ಆ ಬಾಲವನ್ನು ಹಿಡಿದ ಹುಡುಗನಿಗೆ ಎಷ್ಟು ಹುರುಪು ಬಂದಿರುತ್ತದೆಂದರೆ ಆ ಹುಲಿಯಂತೆಯೇ ತಾನೂ ಆಚೀಚೆ ಒಲೆದಾಡುತ್ತಾ ಹೆಜ್ಜೆ ಹಾಕುತ್ತಾನೆ. ಹುಲಿಯ ವೇಷದಷ್ಟೇ ಪ್ರಾಧಾನ್ಯವನ್ನು ತನಗೆ ಆರೋಪಿಸಿಕೊಂಡು ಜನ ತನ್ನನ್ನೂ ನೋಡಿ ಮೆಚ್ಚುತ್ತಿದ್ದಾರೆ ಎಂದೇ ಭಾವಿಸಿಕೊಳ್ಳುತ್ತಾನೆ.

ಆ ಸಭಾಭವನವನ್ನು ತೋರಿಸಹೊರಟ ದುರ್ಯೋಧನನ ಸ್ಥಿತಿ ಆ ಹುಲಿಯ ಕುಣಿತದವನ (ಇಲ್ಲಿ ಸಿಂಹದ ವೇಷಹಾಕಿ ಕುಣಿಯುವವನ) ಬಾಲವನ್ನು ಹಿಡಿದು ಕುಣಿಯುವವನಂತಾಗಿತ್ತು !

### ೪. 'ನಿಷ್ಫಲ ಪುಷ್ಪದರ್ಶನಂ'

ಪಂಪಭಾರತದಲ್ಲಿ, ಕುಂತಿಯ ಪುತ್ರದೋಹಳದ ಸಂದರ್ಭದಲ್ಲಿ "..... ನೋಡೆ ನಾಡೆ ನೋಯಿಸಿದಪ್ಪುದು ಇಕ್ಷುಪುಷ್ಪದವೊಲೆನ್ನಯ ನಿಷ್ಫಲ ಪುಷ್ಪದರ್ಶನಂ" ಎಂಬ ಮಾತು (೧-೧೧೭) ಬರುತ್ತದೆ.

ವ್ಯಾಸಮಹಾಭಾರತದಲ್ಲಿ ಈ ಪ್ರಸಂಗ ಹೀಗಿದೆ : ಕಿಂದಮಋಷಿಯ ಶಾಪದಿಂದ ಪಾಂಡು ತನ್ನ ಪತ್ನಿಯರೊಡಗೂಡುವಂತಿಲ್ಲ. ಕೂಡಿದರೆ ತತ್‌ಕ್ಷಣವೇ ಮರಣ. ಹಾಗಾಗಿ, ಕಾಮತೃಪ್ತಿಯ ಮಾತಿರಲಿ, ಸಂತಾನ ಪಡೆವಂತಿಲ್ಲ. ವೈರಾಗ್ಯಹೊಂದಿದ ಅವನು ಶತಶೃಂಗ ಪರ್ವತದಲ್ಲಿ ತಪೋನಿರತನಾಗಿ ಬ್ರಹ್ಮರ್ಷಿಸಮಾನನಾದ. ಆದರೂ ಸಂತತಿಯಿಲ್ಲದವರಿಗೆ ಸ್ವರ್ಗದ್ವಾರವಿಲ್ಲವೆಂದು

ಅವನಿಗೆ ಕೊರಗು. ಅತ್ತ ಹಸ್ತಿನಾವತಿಯಲ್ಲಿ ವ್ಯಾಸರ ಅನುಗ್ರಹದಿಂದ ಧೃತರಾಷ್ಟ್ರಪತ್ನಿ ಗಾಂಧಾರಿ ಗರ್ಭಧರಿಸಿದ ವಾರ್ತೆಯನ್ನು ಕೇಳಿ ಅವನಿಗೆ ದುಃಖ ಮರುಕಳಿಸಿತು. ತನ್ನ ತಂದೆಯ ಕ್ಷೇತ್ರದಲ್ಲಿ ವ್ಯಾಸರಿಂದ ತಾನು ಹುಟ್ಟಿದಂತೆಯೇ ತನ್ನ ಕ್ಷೇತ್ರದಲ್ಲಿ ಇತರರಿಂದ ತನ್ನ ಪತ್ನಿಯರಲ್ಲಿ ತನಗೆ ಸಂತಾನವೇಕಾಗಬಾರದು ಎಂದು ಯೋಚಿಸಿದ. ಕುಂತಿಯನ್ನು ಕರೆದು ಸಮಾನಕುಲದ ಜ್ಞಾತಿಯಿಂದ ಅಥವಾ ಉತ್ತಮಕುಲದ ಬ್ರಾಹ್ಮಣರಿಂದ ಸಂತಾನ ಪಡೆಯುವಂತೆ ಕೇಳಿಕೊಂಡ. ಅವಳು ನಿರಾಕರಿಸಿದಳು. ಮತ್ತೆ ಅವನು ಅವಳಿಗೆ ಕೈಜೋಡಿಸಿ ಬೇಡಿಕೊಂಡ. ಆಗ ಆಕೆ ದೂರ್ವಾಸರಿತ್ತಿದ್ದ ಮಂತ್ರವನ್ನು ನೆನೆದು ಅದರ ಸಹಾಯದಿಂದ ಸಂತಾನ ಪಡೆಯಲು ಒಪ್ಪಿದಳು.

ವೈರಾಗ್ಯಶಿಖರವನ್ನು ಮುಟ್ಟಿ ಬ್ರಹ್ಮರ್ಷಿಸಮಾನನೆನಿಸಿದ ಪಾಂಡು ಸಂತಾನಕ್ಕಾಗಿ ಹಾತೊರೆದನೆಂಬುದು ಲೌಕಿಕದೃಷ್ಟಿಯಿಂದ ಅಸಹಜ. ಅದೇ ವೇಳೆಯಲ್ಲಿ ಕುಂತಿ ಮಾದ್ರಿಯರು ಸಂತಾನಕ್ಕಾಗಿ ಹಂಬಲಿಸದೆ ನಿರ್ಲಿಪ್ತರಾಗಿದ್ದುದೂ ಅಷ್ಟೇ ಅಸಹಜ. ಪತಿ ಋಷಿಶಾಪಗ್ರಸ್ತನಾಗಿ ತಮ್ಮೊಡನೆ ಕೂಡುವಂತಿಲ್ಲವೆಂದು ಅರಿತಾಗ ದುಃಖ ಅಧಿಕವಾಗಬೇಕು. ಗಾಂಧಾರಿ ಗರ್ಭವತಿಯೆಂದು ತಿಳಿದಾಗ ಅವರ ದುಃಖ ಮತ್ತಷ್ಟು ಹೆಚ್ಚಬೇಕು. ಇದು ಲೋಕರೂಢಿ.

ಕಗ್ಗಲ್ಲನ್ನು ಸುಂದರ ವಿಗ್ರಹವಾಗಿಸುವ ಶಿಲ್ಪಿಯಂತೆ ಪ್ರತಿಭಾವಂತನಾದ ಪಂಪ ಸಹಜವಾಗಿಯೇ ಈ ಸನ್ನಿವೇಶಕ್ಕೆ ಸೊಗಸಾದ ಮತ್ತು ಕಲಾತ್ಮಕವಾದ ತಿರುವನ್ನು ಕೊಟ್ಟಿದ್ದಾನೆ. ಬಾಲ್ಯದಲ್ಲಿ ಅವನು ಕಾವ್ಯವಿದ್ಯಾಪ್ರಚಯ ಪರಿಚಯವನ್ನು ಪಡೆಯಲೆಂದು ಸತತಾಭ್ಯಾಸಮಾಡುತ್ತಿದ್ದ ಕಾಲದಲ್ಲಿ ಎಲ್ಲೆಲ್ಲಿಂದ ರಸಮಯ ಸಂಗತಿಗಳನ್ನು ತನ್ನ ಭಂಡಾರದಲ್ಲಿ ಸಂಗ್ರಹಿಸಿಟ್ಟುಕೊಂಡಿದ್ದನೋ! ಅವುಗಳಲ್ಲಿ ಒಂದನ್ನು ಇಲ್ಲಿ ಬಳಸಿಕೊಂಡಿದ್ದಾನೆ.

ಇಲ್ಲಿ ಪುತ್ರದೋಹಳವನ್ನನುಭವಿಸುವುದು ಕುಂತಿ. ಗಾಂಧಾರಿಗೆ ನೂರ್ವರು ಮಕ್ಕಳಾಗುವರೆಂದು ಕೇಳಿದಾಗ ಸಹಜವಾಗಿಯೇ ಸುಪ್ತವಾಗಿದ್ದ ಅವಳ ಸಂತಾನದ ಬಯಕೆ ಜಾಗೃತವಾಗುತ್ತದೆ. ಹೀಗೆ ಕೊರಗತೊಡಗುತ್ತಾಳೆ.

ವಿಸಸನದೊಳ್ ವಿರೋಧಿನೃಪರಂ ತಱಿದೊಟ್ಟಲುಂ ಅರ್ಥಿಗರ್ಥಮಂ
ಕಸವಿನ ಲೆಕ್ಕಮೆಂದು ಕುಡಲುಂ ವಿಪುಳಾಯತಿಯಂ ದಿಗಂತದೊಳ್
ಪಸರಿಸಲುಂ ಕರಂ ನೆಱಿವ ಮಕ್ಕಳನೀಯದೆ ನೋಡೆ ನಾಡೆ ನೋ -
ಯಿಸಿದಪ್ಪುದು ಇಕ್ಷುಪುಷ್ಪದವೊಲ್ ನಿಷ್ಫಲಮೆನ್ನಯ ಪುಷ್ಪದರ್ಶನಂ

ತನಗೆ ಎಂತಹ ಮಕ್ಕಳು ಬೇಕಾಗಿತ್ತೆಂದು ಕನಸು ಕಾಣುತ್ತಾಳೆ. ಯುದ್ಧದಲ್ಲಿ ಶತ್ರು ರಾಜರುಗಳನ್ನು (ಬರಿಯ ಸೈನಿಕರನ್ನಲ್ಲ) ತರಿದು ರಾಶಿಹಾಕುವಂತಹ ಮಕ್ಕಳು, ಬೇಡುವ ಜನರಿಗೆ ಕಸವೆಂಬಂತೆ ನಿರ್ಲಕ್ಷ್ಯವಾಗಿ ತೆಗೆದು ತೆಗೆದು ಕಸವರವನ್ನು ದಾನಮಾಡುವಂತಹ ಮಕ್ಕಳು, ದಿಗಂತಕ್ಕೆಲ್ಲ ತಮ್ಮ ಪರಾಕ್ರಮಾತಿಶಯವನ್ನು ಪಸರಿಸುವಂತಹ ಮಕ್ಕಳು! ಇಂತಹ ಮಕ್ಕಳನ್ನು ಪಡೆವ ಯೋಗ್ಯತೆ ಸಾಮರ್ಥ್ಯ ತನ್ನಲ್ಲಿದೆ. ಆದರೆ ಅದು ವ್ಯರ್ಥವಾಗುತ್ತಿದೆಯಲ್ಲ! "ನೋಡೆ, ನಾಡೆ ನೋಯಿಸಿದಪ್ಪುದು ಇಕ್ಷು ಪುಷ್ಪದವೊಲ್ ಎನ್ನಯ ಪುಷ್ಪದರ್ಶನಂ"! ಇದು ಅವಳ ಸಂಕಟ.

'ಪುಷ್ಪದರ್ಶನಂ' ಎಂದರೆ ಮುಟ್ಟು ಕಾಣಿಸಿಕೊಳ್ಳುವುದು, ರಜಸ್ವಲೆಯಾಗುವುದು. ಅದು ಸಂತಾನದ ಅರ್ಹತೆಯ, ಸಂತಾನ ಪಡೆವ ಸಾಮರ್ಥ್ಯದ ಸೂಚನೆ. ಆ ಮಾತಿನಲ್ಲಿ ಅರ್ಥಚಮತ್ಕಾರವೂ ಉಂಟು. ಪುಷ್ಪದರ್ಶನವೆಂದರೆ ಗಿಡದಲ್ಲಿ ಹೂವು ಕಾಣಿಸಿಕೊಳ್ಳುವುದು ಎಂಬ ಸಾಮಾನ್ಯಾರ್ಥವೂ ಇದೆಯಷ್ಟೆ ! ಹೂವಿನಿಂದಲೇ ತಾನೇ ಫಲ ಪ್ರಾಪ್ತಿ ? ಹೂವೇ ಇಲ್ಲದೆ ಕಾಯೆಲ್ಲಿ, ಫಲವೆಲ್ಲಿ ? ಹೂವು ಇದ್ದೂ ಕಾಯಿಲ್ಲದಿದ್ದರೆ ?

ಕುಂತಿಗೆ ತನ್ನ 'ಪುಷ್ಪದರ್ಶನ' ಇಕ್ಷುಪುಷ್ಪದಂತಾಯಿತಲ್ಲ ! ಎಂಬ ಕೊರಗು. ಇಕ್ಷು ಎಂದರೆ ಕಬ್ಬು. ಕಬ್ಬುಹೂ ಬಿಡುತ್ತದೆ, ಅದನ್ನು ಸೂನಂಗಿ ಎನ್ನುತ್ತಾರೆ. ಆ ಹೂ ಚಾಮರದಂತೆ ಬಲು ರಮಣೀಯವಾಗಿರುತ್ತದೆ. ಆದರೆ ಅದರಿಂದ ಕಾಯಾಗುವುದಿಲ್ಲ. ತನ್ನ ಪುಷ್ಪದರ್ಶನವೂ ಹಾಗಾಯಿತಲ್ಲ ಎಂದು ಕುಂತಿ ವ್ಯಥೆಗೊಳ್ಳುತ್ತಾಳೆ.

ಈ ಪದ್ಯವನ್ನು ಕುರಿತು ಪರಿಶೀಲಿಸಿದಾಗ ನಮ್ಮ ಗುರು ಡಿ.ಎಲ್.ಎನ್. ಅವರು "ಈ ಭಾವವನ್ನು ಪಂಪ ಬಾಣನ ಕಾದಂಬರಿಯಿಂದ ಹೊಡೆದುಬಿಟ್ಟಿದ್ದಾನೆ ಕಣಯ್ಯ" ಎಂದಿದ್ದರು. ಬಾಣನ ಕಾದಂಬರಿಯನ್ನು ಒರೆಹಚ್ಚಿ ನೋಡಿದುದರ ಫಲ ಈ ಟಿಪ್ಪಣಿ.

ಕಾದಂಬರಿಯಲ್ಲಿ ತಾರಾಪೀಡರಾಜ ರಾಜ್ಯಭಾರದ ಹೊಣೆಯನ್ನು ಮಂತ್ರಿಗೆ ವಹಿಸಿ ತಾನು ಯೌವನ ಸುಖವನ್ನನುಭವಿಸುತ್ತ ಕಾಲವನ್ನು ಕಳೆದಾಗ, ಅವನಿಗೆ ಒಂದು ಚಿಂತೆ ಹತ್ತಿತು. "ಏವಂ ತಸ್ಯ ರಾಜ್ಞೋ ಮಂತ್ರಿನಿವೇಶಿತ - ರಾಜ್ಯಭಾರಸ್ಯ ಯೌವನಸುಖಮನುಭವತಃ ಕಾಲೋ ಜಗಾಮ, ಭೂಯಸಾಕಾಲೇನ ಅನ್ಯೇಷಾಮಪಿ ಜೀವಲೋಕಸುಖಾನಾಂ ಪ್ರಾಯಃ ಸರ್ವೇಷಾಮಂತಂ ಯಯೌ. ಏಕಂ ತು ತನಯಮುಖದರ್ಶನಸುಖಂ ನ ಲೇಭೇ. ತಥಾ ಸಂಭುಜ್ಯಮಾನಮಪಿ ನಿಷ್ಫಲಪುಷ್ಪದರ್ಶನಂ ಶರವಣಮಿವಾಂತಃಪುರಮಭವತ್. ಯಥಾ ಯಥಾ ಯೌವನಮತಿಚಕ್ರಾಮ ತಥಾ ತಥಾ ವಿಫಲಮನೋರಥಸ್ಯಾನಪತ್ಯತಾ ಜನ್ಮಾ ಮಹಾನ್ ಅವರ್ಧತ ಅಸ್ಯ ಸಂತಾಪಃ"

ಬಹುಕಾಲ ಈ ಲೋಕದಲ್ಲಿ ಅನುಭವಿಸಬಹುದಾದ ಎಲ್ಲ ಸುಖಗಳನ್ನು ಅನುಭವಿಸಿಯೂ ಸುತಮುಖದರ್ಶನಸುಖವನ್ನು ಅನುಭವಿಸಲಿಲ್ಲ. ಪತ್ನಿಯ 'ಪುಷ್ಪದರ್ಶನ' ಶರವಣಪುಷ್ಪದಂತೆ ನಿಷ್ಫಲವಾಯಿತು ಎಂದು ತಾರಾಪೀಡನ ಕೊರಗು.

ಶರವಣ ಎಂದರೆ ಕೆರೆಯಲ್ಲಿ ಬೆಳೆವ ಜೊಂಡು. ಅದು ಹೂ ಬಿಡುತ್ತದೆ. ಆದರೆ ಅದರಿಂದ ಫಲ ದೊರೆಯದು !

ಪಂಪನ ಸುಪ್ತಚೇತನದಲ್ಲಿ ಅಡಗಿದ್ದ 'ನಿಷ್ಫಲಂಪುಷ್ಪದರ್ಶನಂ ಶರವಣಾಮಿವ' ಎಂಬ ಒಂದು ಕಿಡಿ, ಕುಂತಿಯ ಪುತ್ರದೋಹಳವನ್ನು ಚಿತ್ರಿಸುವಾಗ ಪ್ರಕಾಶಮಾನ ಜ್ಯೋತಿಯಾಗಿ ಬೆಳಗಿತು.

ಕಾದಂಬರಿಯಲ್ಲೂ ಸಂತಾಪಗೊಳ್ಳುವುದು ರಾಜನೇ ಹೊರತು ರಾಣಿಯಲ್ಲ ಎಂಬುದನ್ನು ಗಮನಿಸಬೇಕು. ಪಂಪನು ಸ್ತ್ರೀ ಸಹಜವಾದ ಪುತ್ರದೋಹಳವನ್ನು ಕುಂತಿಗೆ ಆರೋಪಿಸಿರುವುದಲ್ಲದೆ, ಜೊಂಡನ್ನು ಕಬ್ಬನ್ನಾಗಿಸಿ ಸನ್ನಿವೇಶಕ್ಕೆ ಸೊಗಸಾದ ರಸಪೋಷಣೆಯನ್ನು ತಂದಿದ್ದಾನೆ.

(ಪಂಪನ ತರುವಾಯ ಸುಮಾರು ೨೫೦ ವರ್ಷಗಳನಂತರ ಬಂದ ನೇಮಿಚಂದ್ರನೂ ತನ್ನ 'ನೇಮಿನಾಥ ಪುರಾಣ'ದಲ್ಲಿ ಪುಷ್ಪವತಿಯಾಗಿಯೂ ಫಲವತಿಯಾಗದ ಸಂಗತಿಯನ್ನು ಬಳಸಿಕೊಂಡಿದ್ದಾನೆ*. ಆದರೆ ನೇಮಿಚಂದ್ರ ಸ್ವಲ್ಪ ಮಾರ್ಪಾಟುಮಾಡಿಕೊಂಡಿದ್ದಾನೆ).

ಅವನು ಪಂಪನಿಂದ ವಿಷಯವನ್ನು ತೆಗೆದುಕೊಂಡನೋ ಕಾದಂಬರಿಯಿಂದಲೇ ತೆಗೆದುಕೊಂಡನೋ ಖಚಿತವಾಗಿ ಹೇಳಬರುವುದಿಲ್ಲವಾದರೂ, ಪಂಪನಿಂದ ಎಷ್ಟೋ ಈಚಿನವನಾಗಿ ಪಂಪನ ಕಾವ್ಯಮಾರ್ಗದಲ್ಲಿಯೇ ನಡೆದೇ, ಪಂಪನಂತೆಯೇ ಪುತ್ರದೋಹಳವನ್ನು ರಾಣಿಗೆ ಅನ್ವಯಿಸಿ ಹೇಳುವುದರಿಂದ ಪಂಪನಿಂದಲೇ ಪ್ರೇರಿತನಾಗಿರಬೇಕೆಂದು ಹೇಳಬಹುದು.

ಸುಗಂಧಿಳ ವಿಷಯದ ಅರ್ಹದ್ದಾಸಪತ್ನಿ ಜಿನದತ್ತೆ ತನಗೆ ಯೌವನವಿದ್ದೂ ಮಕ್ಕಳಾಗದುದಕ್ಕೆ ವ್ಯಥೆಗೊಂಡು "................... ಆನೊರ್ವಳೆ ಕಾಲದೊಳ್ ಫಲಕೆ ಬಾರದ ವಲ್ಲರಿಯಾದೆನೇಕೆಯೋ?

ಪರಿಕಿಪೊಡೆ ಇದೆನ್ನಯ ತನು
ವಲ್ಲರಿ ವಲ್ಲರಿಯಂತೆ ಪುಷ್ಪವತಿಯಾಗಿಯುಂ - ಒ ।
ಪ್ಪಿರೆ ಫಳಕೆ ಬಾರದಂತಿದು
ಸುರಯಿಯೊ ಸಂಪಗೆಯೊ ಮೊಲ್ಲೆಯೋ ಮಲ್ಲಿಗೆಯೋ ॥ (ಅರ್ಧನೇಮಿ ಪು ೧-೧೯)

ಎಂದು ಹಲುಬುತ್ತಾಳೆ. ದೇಹವನ್ನು ಬಳ್ಳಿಯೆಂದು ರೂಪಣ ಮಾಡಿಕೊಂಡು, ಆ ಬಳ್ಳಿ ಹೂ ಬಿಡುತ್ತಿದೆ, ಆದರೆ ಫಲವಾಗಲಿಲ್ಲ ಎಂದು ಕೊರಗುತ್ತಾಳೆ. ಫಲವಾಗದಿರಲು ಆ ಬಳ್ಳಿ ಮೊಲ್ಲೆಯ ಬಳ್ಳಿಯೋ ಮಲ್ಲಿಗೆಯ ಬಳ್ಳಿಯೋ ಇರಬಹುದೇ ಎಂದುಕೊಳ್ಳುತ್ತಾಳೆ. ಅದೇನೋ ಹೊಂದಿಕೊಳ್ಳುತ್ತದೆ. ಆದರೆ ಸುರಗಿ ಸಂಪಗೆಗಳಿಗೆ ಅನ್ವಯಿಸುವುದು ಹೊಂದಿಕೊಳ್ಳುವುದಿಲ್ಲ. ಅವೆರಡೂ ಒಂದನೆಯದಾಗಿ ಬಳ್ಳಿಗಳಲ್ಲ, ಎರಡನೆಯದಾಗಿ ಅವೆರಡರ ಹೂಗಳೂ ಸ್ಫುಟವಾದ ಕಾಯಿಗಳಾಗುತ್ತವೆ.

ಅಲ್ಲದೆ ವಲ್ಲರಿ ಪುಷ್ಪವತಿಯಾದಮೇಲೆ, ಅದು ಬಿಟ್ಟ ಪುಷ್ಪ ಅಭಿವ್ಯಕ್ತವಾಗಿ ಸ್ಫುಟವಾಗಿಯೇ ಗೋಚರವಾಗುವಾಗ, ಅದೇನು ಮಲ್ಲಿಗೆಯೋ ಮೊಲ್ಲೆಯೋ ಸುರಗಿಯೋ ಸಂಪಗೆಯೋ ಎಂದು ಸಂದೇಹ ಏಕೆ ಬರುತ್ತದೆ ? ನೆಲದಮೇಲೆ ಬಿದ್ದು ಧೂಳಿನಲ್ಲಿ ಮುಚ್ಚಿಹೋದ ಬೀಜ ಎಂದಿಗೂ ವ್ಯರ್ಥವಾಗಿ ಹೋಗುವುದಿಲ್ಲ. ಹಾಗೆಯೇ ನೆಲದಲ್ಲಿ ಅವಿತುಕೊಂಡಿರುತ್ತದೆ. ಮಳೆ ಸುರಿದು ನೆಲ ಕೆಸರಾಗಿ ಹದವಾದಾಗ ಆ ಬೀಜ ಜೀವ ತಳೆದು ಚಿಗಿತುಕೊಳ್ಳುತ್ತದೆ. ಬೇರುಬಿಟ್ಟು ಹೊಸ ವೃಕ್ಷವಾಗಿ ತಲೆಯೆತ್ತಿ ನಿಲ್ಲುತ್ತದೆ. ಈ ಗಿಡ ಈ ಸ್ಥಳದಲ್ಲಿ ಹೇಗೆ ಹುಟ್ಟಿಬಂತು ಎಂದು ನೋಡುವವರಿಗೆ ಅಚ್ಚರಿಯಾಗುತ್ತದೆ. ಅಂತೆಯೇ ಕವಿಹೃದಯವನ್ನು ಹೊಕ್ಕ ಅನುಭವಗಳು, ಮುಂದೊಮ್ಮೆ ಸಮಯ ದೊರೆತಾಗ ಹೊಸ ರೂಪ ತಳೆದು ಹೊಸ ಉಡಿಗೆಯುಟ್ಟು ಹೊರಹೊಮ್ಮಿ ಬರುತ್ತದೆ.

ಪುಷ್ಪದರ್ಶನ ಫಲದರ್ಶನಗಳ ಜಿಜ್ಞಾಸೆಯನ್ನು ಮೇಲಿನ ಪ್ರಸಂಗಗಳಲ್ಲಿ ನೋಡಿದೆವು. ಕುಮಾರವ್ಯಾಸನ ಕುಲುಮೆಯಲ್ಲಿ ಕರಗಿ ರೂಪುತಳೆದ ಇದೇ ಪ್ರತಿಮೆ ಎಂತಹ ಉಗ್ರರೂಪವನ್ನು ತಾಳುವುದೆಂಬುದನ್ನು ನೋಡಿ.

---

*ಈ ವಿಷಯವನ್ನು ಮಾನ್ಯ ಮಿತ್ರರಾದ ಪ್ರೊ. ಜಿ. ಅಶ್ವತ್ಥನಾರಾಯಣ ಅವರು ನನ್ನ ಗಮನಕ್ಕೆ ತಂದು ಉಪಕರಿಸಿದರು.

ಶಕುನಿಯ ಬೆಂಬಲದಿಂದ ದುರ್ಯೋಧನನು ಏರ್ಪಡಿಸಿದ್ದ ಕೃತಕದ್ಯೂತದಲ್ಲಿ ಧರ್ಮರಾಯ ತನ್ನ ಸಮಸ್ತ ರಾಜ್ಯವನ್ನೂ, ಸೋದರರನ್ನೂ, ತನ್ನನ್ನೂ ಸೋತುಕೊಂಡ, ಕಡೆಗೆ ದ್ರೌಪದಿಯನ್ನೂ ಸೋತ. ದ್ರೌಪದಿಯನ್ನು ಗೆದ್ದುಕೊಂಡ ಹಮ್ಮಿನಲ್ಲಿ ಅವಳನ್ನು ತನ್ನ ಅಂತಃಪುರಕ್ಕೆ ಸೇರಿಸಿಕೊಳ್ಳುವ ಹವಣಿಕೆ ದುರ್ಯೋಧನನದು. ವಿದುರ ಅವನ ದುರಾಲೋಚನೆಯನ್ನು ಖಂಡಿಸಿ ಬುದ್ಧಿವಾದ ಹೇಳಿದ. ಅವಳನ್ನು ಕರೆತರಲು ಹೋದ ಪ್ರತಿಹಾರಿ ಬರಿಗೈಯಲ್ಲಿ ಹಿಂತಿರುಗಿದ. ಕೆರಳಿದ ದುರ್ಯೋಧನ ದುಶ್ಯಾಸನನಿಗೆ ಅವಳನ್ನು ಹಿಡಿದೆಳೆತರಲು ಹೇಳಿದ. ಎಳೆಗರುವನ್ನು ಹಿಡಿತರಲು ಹಸಿದ ತೋಳನಿಗೆ ಆಜ್ಞೆಯೇ? ದುಶ್ಯಾಸನ ಆವೇಶದಿಂದ ದ್ರೌಪದಿಯಿದ್ದ ಬೀಡಿಗೆ ಧಾವಿಸಿದ.

ಪ್ರಾತಿಹಾರಿಯಿಂದ ದ್ರೌಪದಿಗೆ ದ್ಯೂತದ ವಿದ್ಯಮಾನವೆಲ್ಲ ತಿಳಿದಿತ್ತು. ಅವಳು ಭಾವೋದ್ವೇಗಕ್ಕೆ ಒಳಗಾಗಲಿಲ್ಲ. ವಿವೇಕವನ್ನು ಕಳೆದುಕೊಳ್ಳಲಿಲ್ಲ. ಯುಧಿಷ್ಠಿರ ತನ್ನನ್ನು ಸೋತುಕೊಂಡಮೇಲೆ ದ್ರೌಪದಿಯನ್ನು ಒಡ್ಡಿ ಸೋತಿದ್ದು, ದ್ರೌಪದಿ ಧರ್ಮಸೂಕ್ಷ್ಮವನ್ನು ಕುರಿತು ಚಿಂತಿಸತೊಡಗಿದಳು. ತನ್ನನ್ನೇ ಸೋತುಕೊಂಡಮೇಲೆ ಯುಧಿಷ್ಠಿರ ದುರ್ಯೋಧನನ ದಾಸನಾದ. ಮತ್ತೆ ಅವನಿಗೆ ಸ್ವಸ್ಥಾನದಲ್ಲಿ ಕುಳಿತು ಆಡುವ ಅಧಿಕಾರವೆಲ್ಲಿಯದು? ಅಧಿಕಾರವೇ ಇಲ್ಲದಮೇಲೆ ತನ್ನನ್ನು (ದ್ರೌಪದಿಯನ್ನು) ಒಡ್ಡಿ ಸೋಲುವುದಾದರೂ ಹೇಗೆ? ಈ ಪ್ರಶ್ನೆಗೆ ತನಗೆ ತಿಳಿದವರಿಂದ ಉತ್ತರ ಬೇಕು. ಅಲ್ಲದೆ ಪ್ರಕೃತ ತಾನು ರಜಸ್ವಲೆಯಾಗಿರುವುದರಿಂದ ತನಗೆ ಸಭಾಪ್ರವೇಶ ನಿಷೇಧ. ಹೀಗೆ ಅವಳು ಚಿಂತಿಸುತ್ತಿರುವರಷ್ಟರಲ್ಲೇ ಕೆದರಿದ ತಲೆಯ ದುಶ್ಯಾಸನ ಬಾಗಿಲಿಗೆ ಬಂದ. ಬಾಗಿಲಲ್ಲಿ ತಡೆದವರನ್ನು ಮೆಟ್ಟಿ ಕಠಾರಿಯಿಂದ ತಿವಿದ. ರಾಹು ಚಂದ್ರನನ್ನಾಕ್ರಮಿಸುವಂತೆ ದ್ರೌಪದಿಯೆಡೆಗೆ ಒಳನುಗ್ಗಿ ಹೋದ.

ದ್ರೌಪದಿ ಸ್ತಿಮಿತವನ್ನು ಕಳೆದುಕೊಳ್ಳಲಿಲ್ಲ. ಗೌರವದಿಂದಲೇ ಅವನನ್ನು ಕಂಡಳು. "ಯುಧಿಷ್ಠಿರನಿಗೆ ನೀನು ತಮ್ಮ, ನನಗೆ ಮೈದುನನಲ್ಲವೆ? ಯುಧಿಷ್ಠಿರ ಸೋತನೆನ್ನುವಿರಿ. ಇರಲಿ. ಈ ನನ್ನ ಪ್ರಶ್ನೆಗೆ ಉತ್ತರ ಕೊಡಲಿ. ಅದೂ ಅಲ್ಲದೆ, ತಮ್ಮ, ಕೇಳಪ್ಪ. ನಾನೀಗ ಪುಷ್ಪವತಿ. ನನಗೆ ರಾಜಸಭಾಪ್ರವೇಶ ಅನುಚಿತವಲ್ಲವೇ, ಹೇಳು" ಎಂದು ನಯವಾಗಿಯೇ ಹೇಳಿದಳು. ಅದಕ್ಕೆ ಕೆರಳಿದ ದುಶ್ಯಾಸನ -

"ಎಲ್ಲಿಯದು ದುಷ್ಪ್ರಶ್ನೆ? ಮರುಮಾ -
ತೆಲ್ಲಿಯದು ? ನೀ ಪುಷ್ಪವತಿಯಾ -
ಗಿಲ್ಲಿ, ಫಲವತಿಯಾಗು ನಡೆ ಕುರುರಾಜಭವನದಲಿ !"

ಎಂದ. ಆ ಎರಡು ಶಬ್ದಗಳ ಪರಾಕಾಷ್ಠೆಯ ಅರ್ಥವನ್ನು ಧ್ವನಿಸಿದ್ದಾನೆ ಕುಮಾರವ್ಯಾಸ ಇಲ್ಲಿ. ಮಾತುಗಳಿಂದ ಅದನ್ನು ವಿವರಿಸಲು ಸಾಧ್ಯವೇ ?



# 'ಶ್ರೀರಾಮಾಯಣದರ್ಶನ'ದಲ್ಲಿ ನಿರೂಪಿತ ಯೋಜನಗಳ ವಿಚಾರ

ಪ್ರೊ// ಜ. ಅಶ್ವತ್ಥನಾರಾಯಣ

ಸೀತಾನ್ವೇಷಣಕ್ಕಾಗಿ ನಾಲ್ಕೂ ದಿಕ್ಕುಗಳಿಗೆ ಹೊರಟ ವಾನರರಲ್ಲಿ ದಕ್ಷಿಣಕ್ಕೆ ಹೊರಟವರು ದಕ್ಷಿಣಸಮುದ್ರದ ಉತ್ತರ ತೀರಕ್ಕೆ ಬಂದು ಬೀಡುಬಿಟ್ಟರು. ಅಂಗದ ಸಂಪಾತಿಯಿಂದ ನೂರು ಯೋಜನ ದೂರದ ಲಂಕೆಯಲ್ಲಿ ಸೀತೆಯಿದ್ದಾಳೆಂದು ತಿಳಿದನು. ಆಗ ಕಡಲನ್ನು ದಾಟಿ ಸೀತಾ ವೃತ್ತಾಂತ ತಿಳಿದುಬರುವ ಶಕ್ತಿ ಯಾರಿಗುಂಟು ಎಂದು ಅಂಗದನು ವಾನರರನ್ನೆಲ್ಲ ಪ್ರಶ್ನಿಸಿದನು. "ಅಂಗದನ ಮಾತನ್ನು ಕೇಳಿ ವಾನರವೀರರು ತಮ್ಮ ತಮ್ಮ ಸಮುದ್ರಲಂಘನಶಕ್ತಿಯನ್ನು ಹೇಳಿಕೊಂಡರು. ಗಜನು ೧೦ ಯೋಜನ, ಗವಾಕ್ಷನು ೨೦, ಗವಯನು ೩೦, ಶಂಭನು ೪೦, ಗಂಧಮಾದನನು ೫೦, ಮೈಂದನು ೬೦, ದ್ವಿವಿಧನು ೭೦, ಸುಷೇಣನು ೮೦ ಯೋಜನದೂರ ಹಾರಬಲ್ಲೆವೆಂದು ತಮ್ಮ ತಮ್ಮ ಶಕ್ತಿಯನ್ನು ಹೇಳಿಕೊಂಡರು. ಮುದುಕನಾದ ತನಗೆ ತೊಂಬತ್ತು ಯೋಜನ ದೂರ ಹಾರುವ ಶಕ್ತಿ ಮಾತ್ರ ಉಂಟೆಂದು ಜಾಂಬವನು ನುಡಿದನು. ನೂರು ಯೋಜನ ವಿಸ್ತೀರ್ಣವುಳ್ಳ ಸಮುದ್ರವನ್ನು ದಾಟುವ ಶಕ್ತಿ ನನಗುಂಟು. ಆದರೆ ಹಿಂದಿರುಗಿ ಬರುವ ಸಾಮರ್ಥ್ಯವು ನನಗುಂಟೋ ಇಲ್ಲವೋ ಎಂಬುದನ್ನು ಮಾತ್ರ ಹೇಳಲಾರೆ" ಎಂದು ಅಂಗದನು ಹೇಳಿದನು. ಕುವೆಂಪು ಅವರು ೧೯೫೦ರಲ್ಲಿ ಬರೆದು ಪ್ರಕಟಿಸಿದ ಜನಪ್ರಿಯ ವಾಲ್ಮೀಕಿ ರಾಮಾಯಣದಲ್ಲಿ (ಪುಟ ೨೩೦) ಮೇಲ್ಕಂಡಂತೆ ನಿರೂಪಿಸಿದ್ದಾರೆ. ಮೂಲ ವಾಲ್ಮೀಕಿ ರಾಮಾಯಣದಲ್ಲಿ ಕಿಷ್ಕಿಂಧಾಕಾಂಡದ ೬೫ನೇ ಸರ್ಗದಲ್ಲಿ ೧ರಿಂದ ೧೯ರವರೆಗಿನ ಶ್ಲೋಕಗಳಲ್ಲಿ ಈ ಸಂಗತಿ ಯಥಾವತ್ತಾಗಿ ಹೇಳಲ್ಪಟ್ಟಿದೆ. ಶ್ರೀ ರಾಮಾಯಣ ದರ್ಶನದಲ್ಲಿ (ಪುಟ ೩೯೯) 'ಇರ್ದುದು ಮಹೇಂದ್ರಾಚಲಂ' ಸಂಚಿಕೆಯಲ್ಲಿ ಹೀಗಿದೆ:

"ಧಿಗ್ಗನೆದ್ದನ್ ದಿಗ್ಗಜೋಪಮಂ... ಗಜಂ...
ಯೋಜನ ದಶವನುತ್ತರಿಸೆ ನಾ ಶಕ್ಯನೆಂ !
ಕುಳ್ಳನವನನಿರೀಕ್ಷಿತಮೆನಲ್ಕೆ
ಮೇಲೆಳ್ದನಾ ಬಳಿಕಮೊರ್ವನಿಂಬಳಿಯೊರ್ವ
ಕಲಿ, ತನ್ನಾರ್ಪಿನುದ್ದಮಂ ಪೇಳಲ್ : ಇರ್ಪತ್ತು
ಯೋಜನವನೊರೆದನಾ ಗವಯಂ ಗವಾಕ್ಷಂ
ನಾಲ್ವತ್ತನೊರೆದನಂತೆಯೆ ಗಂಧಮಾದನಂ
ಪೇಳ್ದನೈವತ್ತನಾ ಮೈಂದನರ್ವತ್ತನಾ
ಜಾಂಬವಂ ಮುದುಕನೆಂಬತ್ತನೊರೆದಂ.

ಇಲ್ಲಿ ಗಜ ೧೦, ಗವಯ ೨೦, ಗವಾಕ್ಷ ೪೦, ಗಂಧಮಾದನ ೫೦, ಮೈಂದಂ ೬೦, ಜಾಂಬುವಂತ ೮೦ ಯೋಜನಗಳನ್ನು ಹಾರಬಲ್ಲೆವು ಎನ್ನುತ್ತಾರೆ.

ಶ್ರೀರಾಮಾಯಣದರ್ಶನಂ ಬರೆಯುವ ಮುಂಚೆ ಭಾಮಿನೀಷಟ್ಪದಿಯನ್ನು ಹೊಸ ರೀತಿಯಲ್ಲಿ ಬಳಸಿ ರಾಮಾಯಣ ಬರೆಯಲು ಕುವೆಂಪು ಪ್ರಯತ್ನಿಸಿ ಸಮುದ್ರಲಂಘನವೆಂಬ

ಕಿರುಕಾವ್ಯವನ್ನು ರಚಿಸಿ ೧೯೩೦ರ ಅರ್ಥಸಾಧಕ ಪತ್ರಿಕೆಯಲ್ಲಿ ಪ್ರಕಟಿಸಿದ್ದರು. ಇದರಲ್ಲಿ ಗವಯ "ಎಪ್ಪತ್ತು ಯೋಜನವ ನೆಗೆಯುವೆ" (ಪುಟ ೮೨೪ ಕುವೆಂಪು ಸಮಗ್ರ ಕಾವ್ಯಸಂಪುಟ ೨) ಎಂದರೆ ಶರಭ "ಜೀಯ ನಾನೆಂಭತ್ತ ನೆಗೆಯುವೆ" ಎನ್ನುತ್ತಾನೆ. 'ಮುದುಕನಾದೊಡಮೀಗ ಹಾರುವೆ ತೊಂಭತ್ತು ಯೋಜನವ' ಎನ್ನುತ್ತಾನೆ ಜಾಂಬವಂತ.

ಸಮುದ್ರಲಂಘನ, ಶ್ರೀರಾಮಾಯಣ ದರ್ಶನಂ, ಜನಪ್ರಿಯ ವಾಲ್ಮೀಕಿ ರಾಮಾಯಣ ಈ ಮೂರು ಕೃತಿಗಳಲ್ಲಿ ಕುವೆಂಪು ವಾನರವೀರರು ತಾವು ಹಾರಬಲ್ಲ ದೂರವನ್ನು ಕುರಿತು ಹೇಳಿರುವ ಮಾತುಗಳು ಭಿನ್ನಭಿನ್ನವಾಗಿವೆ. ಜನಪ್ರಿಯ ವಾಲ್ಮೀಕಿ ರಾಮಾಯಣದಲ್ಲಿ ಕುವೆಂಪು ಹೇಳಿರುವ ಸಂಗತಿ, ವಾನರವೀರರ ಹೆಸರು ಮತ್ತು ಅವರು ಹೇಳಿದ ದೂರ, ಮೂಲ ವಾಲ್ಮೀಕಿ ರಾಮಾಯಣಾನುಸಾರ ತದ್ವತ್ತಾಗಿದೆ. ಆದರೆ ಉಳಿದೆರೆಡರ ವ್ಯತ್ಯಾಸಗಳು ಗಮನಾರ್ಹವಾಗಿವೆ.

ವಾಲ್ಮೀಕಿ ರಾಮಾಯಣದಲ್ಲಿ, ಜನಪ್ರಿಯ ವಾಲ್ಮೀಕಿ ರಾಮಾಯಣದಲ್ಲಿ ಜಾಂಬವಂತ ಹಾರಬಲ್ಲ ದೂರ ೯೦ ಯೋಜನವಾದರೆ ದರ್ಶನದಲ್ಲಿ ೮೦ ಯೋಜನವಾಗಿದೆ. ಗವಯ ಸಮುದ್ರ ಲಂಘನದಲ್ಲಿ ೭೦ ಯೋಜನ ಹಾರಬಲ್ಲೆ ಎಂದರೆ ದರ್ಶನಂನಲ್ಲಿ ೨೦ ಯೋಜನವೆನ್ನುತ್ತಾರೆ. ವಾಲ್ಮೀಕಿ ರಾಮಾಯಣದಲ್ಲಿ ಗವಯ ಹಾರಬಲ್ಲ ದೂರವನ್ನು ತಿಳಿಸಿರುವುದು ೩೦. ಇನ್ನು ವಾಲ್ಮೀಕಿ ರಾಮಾಯಣ ಮತ್ತು ಜನಪ್ರಿಯ ವಾಲ್ಮೀಕಿ ರಾಮಾಯಣ (ಕುವೆಂಪು ಅನುವಾದ)ದಲ್ಲಿ ಗಜನಿಂದ ಹಿಡಿದು ಜಾಂಬವಂತನವರೆಗೆ ಕ್ರಮವಾಗಿ ೧೦ ಯೋಜನದ ಅಂತರದಲ್ಲಿ ೧೦, ೨೦, ೩೦, ೪೦, ೫೦, ೬೦, ೭೦, ೮೦, ೯೦ ಯೋಜನಗಳನ್ನು ಹಾರುವವರ ಪ್ರಸ್ತಾಪವಿದೆ. ಈ ಕ್ರಮಬದ್ಧತೆ ಆರೋಹಣಾಕ್ರಮ ಮತ್ತು ಅವರ ಹೆಸರುಗಳು ದರ್ಶನಂನಲ್ಲಿ ಯಥಾರೀತಿ ಇಲ್ಲ. ಗಜ ೧೦, ಗವಯ ೨೦, ಗವಾಕ್ಷ ೪೦ ಗಂಧಮಾದನ ೫೦ ಮೈಂದನ ೬೦, ಜಾಂಬವಂತ ೮೦ ಯೋಜನಗಳನ್ನು ಹಾರಬಲ್ಲೆವು ಎಂದು ತಿಳಿಸುತ್ತಾರೆ. ದ್ವಿವಿಧ ೭೦ ಹಾರುವುದು ಇಲ್ಲ. ಸುಷೇಣ ೮೦ ಯೋಜನ ಹಾರಲು ಪ್ರಸ್ತಾಪವೂ ಇಲ್ಲ. ಜಾಂಬವಂತ ೯೦ರ ಬದಲಾಗಿ ಇಲ್ಲಿ ೮೦ ಯೋಜನ ಹಾರಬಲ್ಲೆ ಎಂದು ತಿಳಿಸುತ್ತಾನೆ. ಈ ರೀತಿಯ ವ್ಯತ್ಯಾಸಗಳು ಏಕಾದವು ? ಕವಿ ಮೂಲಕೃತಿಯಲ್ಲಿರುವಂತೆಯೇ ಹೇಳಬೇಕೆಂಬ ನಿರ್ಬಂಧವಿಲ್ಲ ನಿಜ, ಆದರೆ ತಾನು ಮಾಡಿಕೊಂಡ ಬದಲಾವಣೆಗೆ ಒಂದು ನೆಲೆಗಟ್ಟು, ಸಮಾಧಾನ, ತರ್ಕ, ಔಚಿತ್ಯ ಇರಬೇಕಲ್ಲವೇ ? ಮತ್ತು ಬದಲಾವಣೆ ಮಾಡಿಕೊಂಡಾಗ ಅದರಲ್ಲಿ ಒಂದು ಸಮಂಜಸತೆ, ಅತಿಶಯ, ವಿನೂತನತೆ ಕಾಣಬೇಕಲ್ಲವೇ? ಮತ್ತೆ ಒಂದೆಡೆ ಮೂಲದಲ್ಲಿ ಇದ್ದಂತೆ ಹೇಳಿ ಇನ್ನೊಂದೆಡೆ ಬದಲಿಸಿರುವುದರ ಔಚಿತ್ಯವೇನು ? ಈ ಬದಲಾವಣೆಯಿಂದ ಕಾವ್ಯದ ಹಿರಿಮೆಗೆ ಏನೇನೂ ಧಕ್ಕೆಯಿಲ್ಲದಿರಬಹುದು. ಅಥವಾ ಸಣ್ಣ ಸಂಗತಿ ಎನಿಸಬಹುದು. ಆದರೂ ಕಾವ್ಯಾಧ್ಯಯನಾಸಕ್ತರಿಗೆ ಒಂದು ಬಗೆಯ ಕುತೂಹಲವಿರುತ್ತದೆ ಅಲ್ಲವೇ ? ಕುವೆಂಪು ಅವರು ವಾನರವೀರರು ಹಾರುವ ದೂರದ ವಿಚಾರದಲ್ಲಿ ದರ್ಶನಂನಲ್ಲಿ ಬದಲಾವಣೆ ಮಾಡಿಕೊಳ್ಳಲು ಕಾರಣವನ್ನು, ಹಿನ್ನೆಲೆಯನ್ನು ಅಥವಾ ಆ ಬದಲಾವಣೆಯಲ್ಲಿ ಕಂಡುಬರುವ ಔಚಿತ್ಯ ಇಲ್ಲವೆ ಅತಿಶಯವನ್ನು ಯಾರಾದರೂ ಸಹೃದಯಿ ವಿದ್ವಾಂಸರು ತಿಳಿಸಬಲ್ಲರೇ ?



# ಗ್ರಂಥಾವಲೋಕನ

## ಶ್ರೀ ಪ್ರಸನ್ನ ಶ್ರೀನಿವಾಸದಾಸರು ರಚಿಸಿದ ಯತಿವರೇಣ್ಯರ ಕೀರ್ತನೆಗಳು

ಪ್ರ: ಪ್ರಸನ್ನ ಶ್ರೀನಿವಾಸದಾಸರ ಭಕ್ತವೃಂದ 45, ಶ್ರೀ ರಾಘವೇಂದ್ರ ಕಾಲೋನಿ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು - 560 018 (ಪುಟ ಸಂಖ್ಯೆ 307) ಬೆಲೆ ರೂ. 100/-

ಹರಿದಾಸ ಸಾಹಿತ್ಯ ಪ್ರಕಾರಕ್ಕೆ ಒಂದು ವಿಶಿಷ್ಟ ರೀತಿಯ ಪಾಂಡಿತ್ಯ ತುಂಬಿರುವ ಕೀರ್ತನೆಗಳ ಸಂಕಲನ, ಈ ಪುಸ್ತಕ. ಇಲ್ಲಿ ಪುರಂದರದಾಸರ ತತ್ವ-ಪ್ರಮೇಯಗಳ ನಿರೂಪಣೆಯೇ ಇದ್ದು, ಕೃತಿಯನ್ನು ಅರ್ಥ ಮಾಡಿಕೊಳ್ಳಬೇಕಾದರೆ ವೇದ, ಶಾಸ್ತ್ರ, ಪುರಾಣಗಳ ಹಿನ್ನೆಲೆ, ಅಂತರಾಳದ ಅರಿವು ಇದ್ದೇ ಇರಬೇಕು ಎನ್ನಿಸುತ್ತದೆ. ಹಾಗೆಯೇ ಮಧ್ವಮತ ಪರಂಪರೆಯಲ್ಲಿ ಇದ್ದ ಯತಿವರ್ಯರ ವಿಷಯ ಜ್ಞಾನವೂ ಅಗತ್ಯ. ಶ್ರೀಪ್ರಸನ್ನ ಶ್ರೀನಿವಾಸದಾಸರು ಗೃಹಸ್ಥಾಶ್ರಮ ಅವಲಂಬಿಸಿದ್ದರೂ ಅವರ ಕೃತಿಗಳನ್ನು ಅಧ್ಯಯನ ಮಾಡಿದಾಗ ಅಪರೋಕ್ಷ ಜ್ಞಾನ ಅವರಲ್ಲಿ ಮೊದಲಿನಿಂದ ಮೈಗೂಡಿ ಬಂದಿತ್ತು. ಎಂಬುವ ಅನುಭವವಾಗುತ್ತದೆ.

ಮಂತ್ರಾಲಯ ಕ್ಷೇತ್ರದ ಶ್ರೀ ರಾಘವೇಂದ್ರ ತೀರ್ಥರ (ಕ್ರಿ.ಶ. 1596-1671) ಗುರುಗಳು ಶ್ರೀ ಸುಧೀಂದ್ರರು ಹಾಗೂ ಪರಮ ಗುರುವರ್ಯರು ಶ್ರೀ ವಿಜಯೀಂದ್ರರು. ಇವರೆಲ್ಲರ ಸ್ತುತಿ ಶ್ರೀಪ್ರಸನ್ನ ಶ್ರೀನಿವಾಸದಾಸರ ವಿಶಿಷ್ಟ ರಚನೆಗಳು. ಅದೇ ರೀತಿ ಶ್ರೀ ಶ್ರೀ ಪಾದರಾಜರು, ಶ್ರೀ ವಾದಿರಾಜರು "ಇಭರಾಂಪುರದ ಅಪ್ಪಾವರು" ಎಂದೇ ಭಕ್ತಜನ ಪ್ರಿಯರಾದ ಶ್ರೀ ಕೃಷ್ಣಾಚಾರ್ಯರು ಅಥವಾ ಶ್ರೀಕೃಷ್ಣಾವಧೂತರ ಚರಿತ್ರೆ ಈ ಗ್ರಂಥದ ವಿಶೇಷ. ಹಾಗೆಯೇ ಎಲ್ಲ ಯತಿಶ್ರೇಷ್ಠರ ಕುರಿತು ಕೃತಿಗಳೂ ಇವೆ. ಶ್ರೀ ಪ್ರಸನ್ನ ಶ್ರೀನಿವಾಸದಾಸರ ಶ್ರೀನಿವಾಸ ಕಲ್ಯಾಣ ಹಾಡಿಕೊಳ್ಳಲು, ಅನುಸಂಧಾನ ಮಾಡಲು ತಕ್ಕ-ಸ್ತುತಿ ಕೀರ್ತನೆಯಾಗಿದೆ.

ಮೇರು ನುತ ಗಿರಿವಾಸ
ಶರಣಾದೆ ನಿನ್ನಲಿ ವಿಶ್ವರೂಪನೆ ಶ್ರೀಶ
ಗುಣಪೂರ್ಣ ಜಗ ಜನ್ಮಾದಿಕರ್ತ ನಿರ್ದೋಷ।। ಶ್ರೀ ಶ್ರೀನಿವಾಸ।।
ಎಂದಾರಂಭ ಆಗುವ ಕೃತಿಯು
ಸರಸಿ ಜಾಸನ ತಾತ ।। ಪ್ರಸನ್ನ ಶ್ರೀನಿವಾಸನೆ ।।
ವಿಶ್ವ ಪಾಲಕ ಹೇ ದಯಾ ನಿದೇ ಶರಣು ಶರಣು ಹೇ ಸೌಭಾಗ್ಯ ದಾತಾ
ಎಂದು ಮುಗಿಯುತ್ತದೆ.

ಈ ಕೃತಿಯಂತೆಯೇ ಇನ್ನೂ ಅನೇಕ ಕೀರ್ತನೆಗಳಲ್ಲಿ ವೈಷ್ಣವ ಧರ್ಮ ಪಾರಮ್ಯ ಹರಿ ಸರ್ವೋತ್ತಮತ್ವ, ಪ್ರತಿಪಾದನೆ, ಮಧ್ವಮತ ಪ್ರಿಯರಿಗೆ ಯತಿವರೇಣ್ಯರ ಕುರಿತ ಕೀರ್ತನೆಗಳು, ಇವೆಲ್ಲ ಒಳಗೊಂಡು ಈ ಕೀರ್ತನ ಸಂಕಲನ ಮಧ್ವಮತಸ್ಥರಿಗೆ ಪ್ರಿಯ- ಸಂಗ್ರಹಯೋಗ್ಯ -ಎನಿಸುತ್ತದೆ, ಹರಿದಾಸ ಸಾಹಿತ್ಯಕ್ಕೆ ಒಂದು ಏಕೈಕ ಕೊಡುಗೆಯಾಗುತ್ತದೆ. ಪುಸ್ತಕದ ಮುದ್ರಣ, ಓದಲು ಸುಲಭವಾದ ಅಕ್ಷರ ಜೋಡಣೆ ವಿಶೇಷವೆನಿಸುತ್ತವೆ.

- ನೀ.ಕೃ. ರಾಮಶೇಷನ್

**ಸೂಕ್ತಿಗಳಲ್ಲಿ ದೇವರು (ಪ್ರಾರ್ಥನೆ ಭಕ್ತಿ ಸಹಿತ)** ಪ್ರಕಾಶಕರು ಮತ್ತು ಲೇಖಕರು ಟಿ. ವಿ. ವೆಂಕಟರಮಣಯ್ಯ, ಇಡಬ್ಲ್ಯುಎಸ್ ೨೧೮, ಕೆ.ಹೆಚ್.ಬಿ. ಕಾಲೋನಿ, ೨ನೇ ಹಂತ, ೫ನೇ ಕ್ರಾಸ್, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

ಟಿ. ವಿ. ವೆಂಕಟರಮಣಯ್ಯನವರು ಮೂಲತಃ ಗ್ರಂಥಪಾಲಕರು. ವೃತ್ತಿಯಲ್ಲಿ, ಪ್ರವೃತ್ತಿಯಲ್ಲಿ ಸಂಕಲನಕಾರರು. ಕನ್ನಡಕ್ಕೆ ಅವರು ನೀಡಿರುವ ವಿಶಿಷ್ಟ ಕೊಡುಗೆಗಳೆಲ್ಲಾ ಸಂಕಲನಗಳೇ ಎಂದರೆ ತಪ್ಪಾಗದು. ಕನ್ನಡ ಗಾದೆಗಳಕೋಶ, ಕನ್ನಡ ಪಡೆನುಡಿಕೋಶ, ಹಾಸ್ಯ ರಸಾಯನ, ಕನ್ನಡ ಭಾಷಾ-ಸಾಹಿತ್ಯ ಲೇಖನಸೂಚಿ ಇತ್ಯಾದಿ ಗ್ರಂಥಗಳು ಓದುಗರ ಸಾಹಿತಿಗಳ ಮೆಚ್ಚುಗೆಗಳಿಗೆ ಜನಪ್ರಿಯವಾಗಿದೆ. ಇದೀಗ ವಿವಿಧ ರೀತಿಯಲ್ಲಿ ವರ್ಗೀಕರಿಸಿದ ಜೋಕುಗಳ ಪ್ರಕಟನೆಗಳನ್ನು ವಿವಿಧ ಸೂಕ್ತಿಗಳ ಪುಸ್ತಕಗಳನ್ನು ಒಂದೇ ಸಮನೆ ಸಂಪಾದಿಸಿ ಪ್ರಕಟಿಸಿ ಕನ್ನಡ ವಾಚಕಲೋಕವನ್ನು ಬೆರಗುಗೊಳಿಸಿದ್ದಾರೆ. ಲೇಖಕರಿಗೆ, ಉಪನ್ಯಾಸಕರಿಗೆ ಉಪಯುಕ್ತ ಆಕಾರ ಸಾಹಿತ್ಯವನ್ನು ಒದಗಿಸುತ್ತಿದ್ದಾರೆ. ಸೂಕ್ತಿ ಸಂಗ್ರಹ ಮಾಲೆಯಲ್ಲಿ "ಸೂಕ್ತಿಗಳಲ್ಲಿ ಅಧಿಕಾರ, ಸೂಕ್ತಿಗಳಲ್ಲಿ ಧರ್ಮ, ಹುಟ್ಟು-ಸಾವು, (ಸೂಕ್ತಿ ಸಂಗ್ರಹ) ಕಾಲ, ಸ್ನೇಹ, ಆಸೆ-ನಿರಾಸೆ, ತಾಯಿ ಕೋಪ, ಚಿಂತೆ, ಅನುಭವ ಮೊದಲಾದ ವಿಷಯಗಳಿಗೆ ಸಂಬಂಧಿಸಿದಂತೆ ೧೫ಕ್ಕೂ ಹೆಚ್ಚಿನ ಸೂಕ್ತಿ ಸಂಗ್ರಹಗಳನ್ನು ಅಚ್ಚುಕಟ್ಟಾಗಿ ಸಂಪಾದಿಸಿ ಪ್ರಕಟಿಸಿದ್ದಾರೆ. ಈ ಪ್ರಯತ್ನದಲ್ಲಿ ಇತ್ತೀಚಿನ ಸೂಕ್ತಿಸಂಗ್ರಹ ಸೂಕ್ತಿಗಳಲ್ಲಿ ದೇವರು. ಪ್ರಸ್ತುತ ಸೂಕ್ತಿ ಸಂಕಲನ ೧೯೯೬ರಲ್ಲಿ ಮೊದಲಬಾರಿಗೆ ಪ್ರಕಟವಾಗಿದ್ದು ಇದೀಗ ದ್ವಿತೀಯ ಪರಿಷ್ಕೃತ ಆವೃತ್ತಿಯಾಗಿ ಮೊದಲಿಗಿಂತ ಹೆಚ್ಚಿನ ಸೂಕ್ತಿಗಳನ್ನು ಒಳಗೊಂಡಿದೆ. ದೇವರನ್ನು ಕುರಿತು ನಾನಾ ಬಗೆಯ ಕನ್ನಡ ಸೂಕ್ತಿಗಳನ್ನು ದೇವರು, ದೈವ ಸ್ವರೂಪ, ದೈವಬಲ, ದೇವರೊಲುಮೆ, ದೇವಾಲಯ, ಭಕ್ತಿ ಗಾದೆಗಳು ಇವೇ ಮೊದಲಾದ ಶೀರ್ಷಿಕೆಗಳಲ್ಲಿ ಸಂಗ್ರಹಿಸಿದ್ದಾರೆ. ಉದ್ಧೃತಸೂಕ್ತಿಗಳ ಲೇಖಕರ ಕೃತಿಗಳ ಸೂಚಿಯನ್ನು ಪ್ರತ್ಯೇಕವಾಗಿ ಕೊಟ್ಟಿದ್ದಾರೆ. ಇವೆರಡೂ ಸೂಚಿಗಳನ್ನು ಬೇರೆ ಬೇರೆ ಕೊಡುವ ಬದಲು ಒಟ್ಟಿಗೆ ಕೊಡುವುದು ಸೂಕ್ತ ಮತ್ತು ಉಪಯುಕ್ತ. ಈಗ ಕೊಟ್ಟಿರುವ ರೀತಿಯಲ್ಲಿ ಯಾವ ಕೃತಿ ಯಾವ ಲೇಖಕರದು ಎಂದೇ ತಿಳಿಯುವುದಿಲ್ಲ ಮತ್ತು ಕೃತಿಯ ಸ್ವರೂಪವನ್ನು ಕಥೆ, ಕಾವ್ಯ, ಕಾದಂಬರಿ, ಪತ್ರಿಕೆ, ವಚನ, ಕೀರ್ತನೆ ಇತ್ಯಾದಿ ತಿಳಿದಿರುವುದು ಮುಖ್ಯ. ಆಸಕ್ತರ ಮುಂದಿನ ಓದಿಗೆ ನೆರವಾಗುತ್ತದೆ.

ಅನುಬಂಧಗಳಾಗಿ ದೇವನೊಬ್ಬ, ನಾಮಹಲವು, ಬಾಳಿಗೊಂದು ನಂಬಿಕೆ, ದೇವರು ಪುಟ್ಟ ಟಿಪ್ಪಣಿಗಳು ಸೇರಿವೆ. ಸೂಕ್ತಿಗಳ ಕೆಳಗೆ ಆಕರಗಳನ್ನು ಕೊಡುವಲ್ಲಿ ಕೆಲವೆಡೆ ಕೇವಲ ಹೆಸರುಗಳನ್ನು ಕೊಟ್ಟರೆ ಮತ್ತೆ ಕೆಲವೆಡೆ ಲೇಖಕರು ಗ್ರಂಥದ ಹೆಸರು ಸೂಕ್ತಿಬಂಧದ ಸಂಖ್ಯೆ ನೀಡುತ್ತಾರೆ. ಈ ಕ್ರಮವನ್ನು ಎಲ್ಲಾಕಡೆ ಅನುಸರಿಸುವುದು ಅಗತ್ಯವಿದೆ. ಭಾಷಣಮಾಡಲು ಲೇಖನಬರೆಯಲು ಶೀರ್ಷಿಕೆಗಳಂಥ ಸೂಕ್ತಿಗಳು ಇಲ್ಲಿ ಕಂಡುಬರುತ್ತವೆ. ಉದಾ : ದೇವನೊಬ್ಬ ನಾಮಹಲವು, ನಿರಾಕಾರ ನನ್ನ ತಂದೆ, ಸಾಕಾರ ನನ್ನ ತಾಯಿ, ಹೊರಗಿನ ದೇವರು ಯಾಕೆ

ಬೇಕು? ದಿಕ್ಕಿಲ್ಲದವರಿಗೆ ದೇವರೇ ದಿಕ್ಕು. ನೀನೊಲಿದರೆ ಕೊರಡುಕೊನರುವುದಯ್ಯಾ ಇತ್ಯಾದಿ. ಸಂಸ್ಕೃತ, ತಮಿಳು, ತೆಲುಗು, ಹಿಂದಿ, ಇಂಗ್ಲೀಷ್ ಸೂಕ್ತಿಗಳ ಅನುವಾದವಿದ್ದರೂ, ಕನ್ನಡ ಲೇಖಕರ ಕನ್ನಡ ಸೂಕ್ತಿಗಳು ಅಧಿಕವಾಗಿರುವುದು ಪ್ರಶಂಸನೀಯ ಸಂಗತಿ. ಕನ್ನಡದಲ್ಲಿ ಸೂಕ್ತಿ ಮಾಲೆಯನ್ನೇ ಪ್ರಕಟಿಸುತ್ತಿರುವ ಸಂಪಾದಕರು ಮತ್ತೊಂದು ಉಪಯುಕ್ತ ಆದ ಗ್ರಂಥ ನೀಡಿದ್ದಾರೆ.

ಪ್ರೊ॥ ಜಿ. ಅಶ್ವತ್ಥನಾರಾಯಣ

**ಹೊಂಬಣ್ಣದ ನೆನಪುಗಳು (ಆತ್ಮಕಥನ)** **ಲೇಖಕಿ : ಊರ್ಮಿಳಾ ಜೆ. ಡಿ. ಪ್ರ : ಸೌಜನ್ಯ ಪ್ರಕಾಶನ, 92/1, ಮುಖ್ಯರಸ್ತೆ, ಗವಿಪುರಂ ಎಕ್ಸ್‌ಟೆನ್‌ಷನ್, ಬೆಂಗಳೂರು - 560 019**

ಪ್ರತಿಯೊಬ್ಬರೂ ಏನನ್ನು ಬರೆಯದಿದ್ದರೂ ತಮ್ಮ ಜೀವನಾನುಭವಗಳನ್ನು ತಾವು ಕಂಡಿದ್ದನ್ನು, ಅನುಭವಿಸಿದ್ದನ್ನು ತಮಗೆ ಬಂದರೀತಿಯಲ್ಲಿ ಪ್ರಾಮಾಣಿಕವಾಗಿ ಬರೆದಿಟ್ಟಿದ್ದಾರೆ. ಅವು ಪ್ರಕಟವಾದಾಗ ಕನ್ನಡ ನಾಡು ನುಡಿಗಳಿಗೆ ಉಪಯುಕ್ತ ಅಪೂರ್ವ ಮಾಹಿತಿ ಸಿಗುತ್ತದೆ. ಕೊನೆಯಪಕ್ಷ ಬರೆದವರ, ಓದಿದವರ ಮನಸ್ಸಿಗೆ ಸಂತೋಷ ಸಿಗುತ್ತದೆ. ನಮ್ಮ ನಾಡಿನ ಎಷ್ಟೋ ಇತಿಹಾಸ ಪ್ರಸಿದ್ಧ ಸಂಗತಿಗಳ ಬೇರೆ ಬೇರೆ ಮಗ್ಗಲುಗಳು ಮಹಾವ್ಯಕ್ತಿಗಳ ಜೀವನದ ಬೇರೆ ಬೇರೆ ಮುಖಗಳು, ಗುಣಾವಗುಣಗಳು ತಿಳಿಯುವುದೇ ಸಾಮಾನ್ಯರ ಬದುಕಿನ ಬರಹದಿಂದ. ಗಣ್ಯ ಲೇಖಕರ ಬರಹದಿಂದಲ್ಲ ಎಂದು ಖ್ಯಾತ ಸಾಹಿತಿಗಳೊಬ್ಬರು ಹೇಳಿದ್ದರು. ಆ ಮಾತಿಗೆ ನಿದರ್ಶನ ಹೊಂಬಣ್ಣದ ನೆನಪುಗಳು. ಲೇಖಕಿ ಜೆ. ಡಿ. ಊರ್ಮಿಳಾ ಅವರು ಡಿವಿಜಿ ಅವರ ಜ್ಞಾಪಕಚಿತ್ರಶಾಲೆ ಪುಸ್ತಕಮಾಲೆ ಓದಿ ಅದರಿಂದ ಸ್ಫೂರ್ತಿಗೊಂಡು ತಾವು ಕಂಡ ತಮ್ಮ ಅವಿಭಕ್ತ ಕುಟುಂಬದ ಚಿತ್ರಣ ನೀಡುವುದರ ಮೂಲಕ ಬೆಂಗಳೂರು ನಗರದಲ್ಲಿ ಚಾಮರಾಜಪೇಟೆ ಪರಿಸರದಲ್ಲಿ ಅರ್ಧಶತಮಾನದ ಹಿಂದೆ ಸ್ವಾತಂತ್ರ್ಯ ಬಂದ ಹೊಸ ದಶಕದ ಮತ್ತು ಆ ಮುಂಚೆ ಮಧ್ಯಮವರ್ಗದ ಕೌಟುಂಬಿಕ ಬದುಕು ಹೇಗಿತ್ತು ಎಂಬುದನ್ನು ಸರಳವಾಗಿ ಚಿತ್ರಿಸಿದ್ದಾರೆ. ನವರಾತ್ರಿ, ಗೌರಿಗಣೇಶ, ರಾಮನವಮಿಗಳನ್ನು ಆಚರಿಸುತ್ತಿದ್ದ ರೀತಿ, ಆ ಕಾಲದ ಜನಪ್ರಿಯ ಅ.ನ.ಕೃ. ತ.ರಾ.ಸು. ಮೊದಲಾದವರ ಕಾದಂಬರಿಗಳ ಓದು, ರಾಮನವಮಿ ಸಂಗೀತಕಛೇರಿ, ಹಿಂದಿ ಕನ್ನಡ ಸಿನಿಮಾ, ಗುಬ್ಬಿ ಕಂಪನಿ ನಾಟಕ, ರಫಿ ಮುಖೇಶ್ ಮುಂತಾದವರ ಹಿಂದಿ ಹಾಡುಗಳ ಜನಪ್ರಿಯತೆ ಹೀಗೆ ಹತ್ತಾರು ಸಂಗತಿಗಳನ್ನು ಹೇಳುತ್ತಾ ಹೋಗುತ್ತಾರೆ.

ಬೆಂಗಳೂರಿನಲ್ಲಿ ಒಂದು ಕಾಲಕ್ಕೆ ಕಾಂಪೌಂಡ್‌ನಲ್ಲಿ ಗಿಡಮರಗಳಿದ್ದು ಮಕ್ಕಳು ಆಟವಾಡುತ್ತಿದ್ದ ರೀತಿ. ಮನೆಯೊಳಗೆ ತಾಯಿ ತಂದೆಯರಿಗೆ ಮಕ್ಕಳು ನಡೆದುಕೊಳ್ಳುತ್ತಿದ್ದ ರೀತಿ, ಹಬ್ಬಗಳಲ್ಲಿ ಕಂಡುಬರುತ್ತಿದ್ದ ಸಂಭ್ರಮ, ಮನೆಗೆ ಅತಿಥಿಗಳು ಬಂದುಹೋಗುತ್ತಿದ್ದುದು ಈ ಚಿತ್ರಗಳು ಮನಸೆಳೆಯುತ್ತವೆ. ಅಂದಿನ ತಮ್ಮ ವಿದ್ಯಾಭ್ಯಾಸವನ್ನು ಕುರಿತು ಹೇಳುತ್ತಾ ಆಗಿನ ಪಠ್ಯಪುಸ್ತಕದಲ್ಲಿನ ಸಾಹಿತ್ಯ ನಮ್ಮ ದೈನಂದಿನ ಜೀವನಕ್ಕೆ ಹತ್ತಿರವಾದ ವಿಷಯಗಳನ್ನು ನಮ್ಮದೇ ಆದ ಮಾತೃಭಾಷೆಯಲ್ಲಿ ವರ್ಣಿಸುತ್ತಿದ್ದವು. ಈಗ ಎಳೆ ವಯಸ್ಸಿನಲ್ಲಿ ಪರಭಾಷೆ

ಕಲಿಯುತ್ತಿರುವ ಮಕ್ಕಳು ಈ ಸಂತೋಷದಿಂದ ವಂಚಿತರಾಗಿದ್ದಾರೆ. ಈಗಂತೂ ಎಳೆಯ ಮಕ್ಕಳಿಗೆ ವಿದ್ಯಾರ್ಜನೆ ಒಂದು ಶಿಕ್ಷೆಯಾಗಿ ಪರಿಣಮಿಸಿದೆ ಎಂದರೆ ತಪ್ಪಾಗಲಾರದು ಎಂದಿದ್ದಾರೆ. ಲೇಖಕಿ ಹೇಳಿದಂತೆ ಇಂತಹ ನೆನಪುಗಳು ಆ ಕಾಲದಲ್ಲಿ ಬೆಂಗಳೂರಿನಲ್ಲಿ ಹುಟ್ಟಿ ಬೆಳೆದ ಬಹಳಷ್ಟು ಜನರಿಗೆ ಸಾಮಾನ್ಯವಾದುದು ಎಂಬುದಕ್ಕೆ ಈ ಗ್ರಂಥದುದ್ದಕ್ಕೂ ನಿದರ್ಶನಗಳು ಸಿಗುತ್ತವೆ. ಬದುಕು ಎಂದಮೇಲೆ ಸುಖ-ದುಃಖ ಎರಡೂ ಇರುತ್ತವೆ. ಎರಡೂ ಬಗೆಯ ಅನುಭವಗಳೂ ರಸಾನುಭವಗಳೇ. ಎರಡನ್ನೂ ಚಿತ್ರಿಸಿದಾಗಲೇ ಬದುಕಿನ ಬಹುಮುಖ ಚಿತ್ರಣ ಸಿಗುವುದು. ಆದರೆ ಲೇಖಕಿ ನೆನಪೆಂದಮೇಲೆ ಒಳ್ಳೆಯದು, ಕೆಟ್ಟದ್ದು ಎರಡೂ ಇರಬೇಕಷ್ಟೆ. ನಾನು ಕೇವಲ ಒಳ್ಳೆಯದನ್ನೇ ಆರಿಸಿಕೊಂಡಿದ್ದೇನೆ ಎಂದರೆ ಈ ಕಾರಣದಿಂದಲೇ ಏನೋ ಬದುಕಿನ ಇತರ ವಾಸ್ತವ ಮುಖಗಳು ಕಂಡುಬಂದಿಲ್ಲ ಮತ್ತು ಆಗಿನ ಬೆಂಗಳೂರಿನ ಸಾರ್ವಜನಿಕ ಬದುಕಿನ ಚಿತ್ರಣ ಸಾಕಷ್ಟು ಬಂದಿಲ್ಲ. ಕನ್ನಡ ಸಾಹಿತ್ಯ ಪರಿಷತ್ತಿನ ಬಳಿಯಲ್ಲೇ ಇದ್ದರೂ ಆಲೂರು ವೆಂಕಟರಾಯರು ಮೊದಲಾದ ಸಾಹಿತಿಗಳು ಇವರ ಮನೆಗೆ ಬಂದು ಹೋಗುತ್ತಿದ್ದುದು. ಮನೆಯಲ್ಲಿ ಇದ್ದು ಪುಸ್ತಕ ಭಂಡಾರ ವಿದ್ಯಾವಂತರ ಪರಿಸರದಲ್ಲಿ ನಡೆದ ರಸವತ್ತಾದ ಪ್ರಸಂಗಳ ನಿರೂಪಣೆ ಇಲ್ಲದಿರುವುದು ಇಲ್ಲಿ ಎದ್ದು ಕಾಣುವ ಕೊರತೆಯಾಗಿದೆ. ಆದರೂ ಸಹ ಸರಳ ಶೈಲಿಯಲ್ಲಿ ನೇರವಾಗಿ ಓದುಗ ಓದಿಸಿಕೊಂಡು ಹೋಗುವ ರೀತಿಯಲ್ಲಿ ಲೇಖಕಿ ಬರೆಯಬಲ್ಲರು ಮತ್ತು ಲೇಖಕಿಯ ಮೊದಲಕೃತಿ ಆಗಿದ್ದರೂ ಭರವಸೆ ಉಂಟುಮಾಡುವ ಕೃತಿ ಆಗಿದೆ. ಕೃತಿಯಲ್ಲಿ ಜ್ಞಾಪಕ ಚಿತ್ರಶಾಲೆಯಲ್ಲಿ ಡಿವಿಜಿ ಬೆಂಗಳೂರು ಆಗ ಹೇಗಿತ್ತು ಎಂಬ ಚಿತ್ರವನ್ನು ಬಹಳ ಸೊಗಸಾಗಿ ಸೂಚ್ಯವಾಗಿ ಒಂದೆರಡು ಮಾತುಗಳಲ್ಲೇ ಹೇಳಿದ್ದಾರೆ. ಆಗ ಶಂಕರಮಠವಿದ್ದ ಜಾಗ ಬಹಳ ಸುಂದರವಾಗಿತ್ತು. ಸುತ್ತ ಬಂಡೆಗಳು, ಮರಗಿಡಗಳು, ಹೇಗೆಂದರೆ ಹಾಗೆ ಹರಡಿದ್ದಿತು. ಇಂಗ್ಲೀಷಿನಲ್ಲಿ ಹೇಳಬೇಕಾದರೆ ಅದು ಒಂದು ಸಣ್ಣ (Wilderness) ಒಂದು ವಿರಳವಾದ ಕಾಡನ್ನು ನೆನಪಿಗೆ ತರುತ್ತಿತ್ತು. ಅಲ್ಲಿ ಸಂಜೆಯ ಹೊತ್ತು ಓಡಾಡಲು ಬಹಳ ಚೆನ್ನಾಗಿತ್ತು. ನಗರ ಈಗಿನಷ್ಟು ಕೆಟ್ಟಿರಲಿಲ್ಲ. ಹೆಣ್ಣುಮಕ್ಕಳಿಗೆ ಯಾವ ತೊಂದರೆಯೂ ಇರಲಿಲ್ಲ. ಈಗ ಶಂಕರಮಠ ಮೊದಲಿನಂತಿಲ್ಲ... ನಾವು ಕೇಳುತ್ತಿದ್ದ ಕತೆಗಳು ಎಂಬ ಅಧ್ಯಾಯದಲ್ಲಿ ಅವರ ಸೋದರತ್ತೆ ಹೇಳಿದ ಕಥೆಗಳಲ್ಲಿ ಕೆಲವನ್ನು ಸಂಗ್ರಹಿಸಿ ಕೊಟ್ಟಿದ್ದಾರೆ. ಚಿಕ್ಕಂದಿನಲ್ಲಿ ಕಥೆ ಮಕ್ಕಳಮೇಲೆ ಪ್ರಭಾವ ಬೀರುವುದಕ್ಕೆ ಸಾಕ್ಷಿಯಾಗಿದೆ. ಬಾಲ್ಯದ ತಿಂಡಿ ತೀರ್ಥಗಳನ್ನು ನೆನಪಿಸಿಕೊಂಡು ಮೆಚ್ಚಿಕೊಳ್ಳುತ್ತಾ ಅನೇಕ ವಿಷಯಗಳಲ್ಲಿ ನಾವು ಬೇಗನೇ ಎಚ್ಚೆತ್ತುಕೊಂಡು ಹಳೆಯಕಾಲದ ಪದ್ಧತಿಯನ್ನು ರೂಢಿಸಿಕೊಳ್ಳಲೇಬೇಕಾಗಿದೆ ಎನ್ನುತ್ತಾರೆ. ಕಾಲಚಕ್ರದಲ್ಲಿ ಗಡಿಯಾರದ ಮುಳ್ಳು ಹಿಂದಕ್ಕೆ ಹೋಗಲು ಸಾಧ್ಯವೇ? ಒಟ್ಟಿನಲ್ಲಿ ತಾವು ಬಾಳಿದ ಬದುಕಿನಲ್ಲಿ ಕಂಡ ಜೀವನೂ ಪ್ರೀತಿಯನ್ನು ಮೌಲ್ಯಗಳನ್ನು ನೆನಪಿನ ಮೂಲಕ ಮುಂದಿಟ್ಟು ಬೆಂಗಳೂರಿನ ಮಧ್ಯಮ ವರ್ಗದವರ ಕೌಟುಂಬಿಕ ಜೀವನ ಅರ್ಧಶತಮಾನದ ಹಿಂದೆ ಹೇಗಿತ್ತು ಎಂಬುದರ ಸುಂದರ ಚಿತ್ರಣ ಕೊಡುವುದರಲ್ಲಿ ಯಶಸ್ವಿಯಾಗಿದ್ದಾರೆ. ಒಮ್ಮೆ ಎಲ್ಲರೂ ಓದಬಹುದಾದ ಗ್ರಂಥ ಇದು.

ಅನಾಜಿ - ಬೆಂಗಳೂರು

## ಸಾಹಿತ್ಯದೃಷ್ಟಿಯ ಶ್ರೀವೈಷ್ಣವ ಕೃತಿಗಳು

ಕನ್ನಡದಲ್ಲಿ ಈವರೆಗೆ ಬಂದಿರುವ ಬಹುಪಾಲು ಶ್ರೀವೈಷ್ಣವ ಸಾಹಿತ್ಯ ಧಾರ್ಮಿಕ ದೃಷ್ಟಿಕೋನದ ಮಡಿವಂತ ಸಾಹಿತ್ಯವಾಗಿದೆಯೇವಿನಾ ಸರ್ವ ಧರ್ಮೀಯರನ್ನು ದೃಷ್ಟಿಯಲ್ಲಿಟ್ಟುಕೊಂಡು ಸಾರ್ವತ್ರಿಕವಾಗಿ ವಿಶ್ಲೇಷಿಸುವಂತಹ ಶುದ್ಧ ಸಾಹಿತ್ಯಕೃತಿಗಳಾಗಿಲ್ಲ. ಇದಕ್ಕೆ ಅಪವಾದವಾಗಿ ಎಂ. ಯಾಮುನಾಚಾರ್ಯ, ಡಾ|| ಎನ್. ಎಸ್. ಅನಂತರಂಗಾಚಾರ್, ವಿದ್ವಾನ್ ರಘುಸುತ ಮುಂತಾದವರ ಕೃತಿಗಳಿದ್ದರೂ ಇವು ಬೆರಳೆಣಿಕೆಯಷ್ಟುಮಾತ್ರ. ಹಾಗೆ ನೋಡಿದರೆ ತಮಿಳಿನಲ್ಲೂ ಇಲ್ಲದಷ್ಟು ವಿಪುಲ ಸಾಹಿತ್ಯ ಕನ್ನಡದಲ್ಲಿ ಬಂದಿದೆ. ಇದಕ್ಕೆ ಚಿಕ್ಕದೇವರಾಯನಕಾಲದಿಂದಲೂ ಇತಿಹಾಸ ದೊರೆಯುತ್ತದೆ. ಕರ್ನಾಟಕದಲ್ಲಿ ನೆಲೆಸಿದ ಶ್ರೀವೈಷ್ಣವ ಸಮಾಜದವರ ಧಾರ್ಮಿಕ ಭಾಷೆ ತಮಿಳಾದದ್ದರಿಂದ ಇವರ ಕೃತಿಗಳೆಲ್ಲ ತಮಿಳು ಭಾಷೆಯಲ್ಲೇ ಇದ್ದುದರಿಂದ ಕರ್ನಾಟಕದ ಎಲ್ಲ ಶ್ರೀವೈಷ್ಣವ ಮತೀಯರಿಗೂ ತಮಿಳು ಮಾತನಾಡಲು ಬರುತ್ತಾದರೂ ಓದಲು-ಬರೆಯಲು ಬರುತ್ತಿಲ್ಲವಾದ್ದರಿಂದ ಅನಿವಾರ್ಯವಾಗಿ ಅವರ ಧಾರ್ಮಿಕ ಕೃತಿಗಳೆಲ್ಲಾ ಓದುವ-ಬರೆಯುವ ಭಾಷೆಯಾದ ಕನ್ನಡದಲ್ಲಿ ಬರುವಂತಾಯಿತು. ಈ ಕಾರಣದಿಂದಲೇ ಕನ್ನಡದಲ್ಲಿ ಧಾರ್ಮಿಕ ದೃಷ್ಟಿಕೋನದ ಶ್ರೀವೈಷ್ಣವ ಸಾಹಿತ್ಯ ವಿಪುಲವಾಗಿ ಬರುವಂತಾಯಿತು. ಈ ಮಡಿವಂತಿಕೆಯ ಆವರಣದೊಳಗೆ ಇದ್ದುದರಿಂದ ಪ್ರಮುಖ ಆಳ್ವಾರರ ಮತ್ತು ಆಚಾರ್ಯರ ಮುಖ್ಯ ಕೃತಿಗಳನ್ನಾಗಲಿ ಅವರ ವಿಶ್ವಮಾನವತ್ವದ ಸಂದೇಶಗಳನ್ನಾಗಲಿ ಸಮಾಜಕ್ಕೆ ಪರಿಚಯಿಸುವ ಎಂಬ ಮನೋಭಾವ ಬೆಳೆಯಲಿಲ್ಲ. ಈ ಧಾರ್ಮಿಕ ಕೃತಿಗಳನ್ನೆಲ್ಲ ಆರಾಧನಾ ಮನೋಭಾವದಿಂದಲೇ ನೋಡಿದ್ದರಿಂದ ಅದಕ್ಕೆ ಪೂರಕವಾದ ವ್ಯಾಖ್ಯಾನ, ತಾತ್ಪರ್ಯ, ಪ್ರತಿಪದಾರ್ಥಗಳು ನಿರ್ಮಾಣವಾದವು. ಆಳ್ವಾರರು-ಆಚಾರ್ಯರ ಎಲ್ಲ ಕೃತಿಗಳೂ ಈ ದೃಷ್ಟಿಯಲ್ಲಿ ಬೆಳಕು ಕಂಡಿರುವುದಲ್ಲದೆ ಹಲವರಿಂದ, ಹಲವು ಮುದ್ರಣಗಳಲ್ಲಿ ಪ್ರಕಟವಾಗಿವೆ.

ಈ ಬಗೆಯ ಗ್ರಂಥಗಳು ಸಾರ್ವಜನಿಕರ ಗಮನವನ್ನು ಸೆಳೆಯದೆ ಹೋದುದರಿಂದ ಮೂಲಗ್ರಂಥಗಳೆಲ್ಲ ತಮಿಳು ಭಾಷೆಯಲ್ಲಿದ್ದುದರಿಂದ ಕನ್ನಡದಲ್ಲಿ ಶ್ರೀವೈಷ್ಣವ ಸಾಹಿತ್ಯವೇ ಬರಲಿಲ್ಲ ಎಂಬ ಸಾಮಾನ್ಯ ಅಭಿಪ್ರಾಯ ಸಾಹಿತ್ಯವಲಯದಲ್ಲಿ ನಿರ್ಮಾಣವಾಗಿದೆ. ಈ ಸಿದ್ಧ ಹೇಳಿಕೆಯ ಕಾರಣದಿಂದ ಯಾರೂ ಭಿನ್ನದೃಷ್ಟಿಕೋನದಲ್ಲಿ ಈ ಸಾಹಿತ್ಯವನ್ನು ಪರಿಶೀಲಿಸದೇ ಹೋದರೂ ಇದಕ್ಕೆ ಇನ್ನೊಂದು ಕಾರಣವೆಂದೂ ಹೇಳಬಹುದು. ಯಾವುದೇ ಸಾಹಿತ್ಯಕ್ಕೆ ಒಂದು ಕಾಲಕ್ಕೆ ನಿರ್ಮಾಣವಾಗುವ ನಿಶ್ಚಿತ ಅಭಿಪ್ರಾಯಗಳೇ ಎಲ್ಲ ಕಾಲಕ್ಕೂ ಮುಂದುವರಿಯುವುದಿಲ್ಲ. ಕಾಲದಿಂದ ಕಾಲಕ್ಕೆ ಪುನರ್ ಮೌಲ್ಯೀಕರಣಗೊಳ್ಳುತ್ತ ಹೋಗುತ್ತದೆ ಎಂಬುದಕ್ಕೆ ಇತ್ತೀಚಿನ ದಶಕದಲ್ಲಿ ಆದ ಈ ಸಾಹಿತ್ಯ ಕುರಿತ ಸಂಶೋಧನೆಗಳು ನಿದರ್ಶನವಾಗಿವೆ. ಕನ್ನಡದಲ್ಲಿ ೧೬ನೇ ಶತಮಾನದಿಂದಲೇ ಶ್ರೀ ವೈಷ್ಣವ ಸಾಹಿತ್ಯವೂ ನಿರ್ಮಾಣವಾಗಿದ್ದು ಇಂದಿನವರೆಗೂ ಅವಶ್ಯವಾಗಿ ಬೆಳೆದುಬಂದಿದೆ. ಬೇಲೂರು ವೈಕುಂಠದಾಸರಿಂದ ಹಿಡಿದು ನಾರಾಯಣಶರ್ಮರವರೆಗೆ

ಹರಿದಾಸಸಾಹಿತ್ಯ ಮುಖ್ಯವಾಹಿನಿಯ ಜೊತೆ ಜೊತೆಗೇ ಹರಿದು ಬಂದಿರುವುದನ್ನು ಈವರೆಗೆ ದೊರೆತಿರುವ ಒಂದು ಸಾವಿರ ಕೀರ್ತನೆಗಳು ಸಾಬೀತು ಮಾಡಿವೆ. ಕನಕದಾಸ, ಲಕ್ಷ್ಮೀಶ, ಕುಮಾರವ್ಯಾಸರ ಕೃತಿಗಳನ್ನು ವಿಶಿಷ್ಟಾದ್ವೈತ ತತ್ವದಲ್ಲಿಯೇ ಗುರುತಿಸಬೇಕಾದ ಅಗತ್ಯವನ್ನು ಈ ಸಂಶೋಧನೆಗಳು ಸ್ಪಷ್ಟಪಡಿಸುತ್ತವೆ. ಚಿಕ್ಕದೇವರಾಜನ ಕಾಲದಲ್ಲಿ ಸ್ಪಷ್ಟವಾಗಿಯೇ ಗೋಚರವಾಗಿದೆ. ಈ ಹಿನ್ನೆಲೆಯಲ್ಲಿ ಕನ್ನಡದಲ್ಲಿಯೂ ವಿಶಿಷ್ಟಾದ್ವೈತ ಸಾಹಿತ್ಯದ ಪರಂಪರೆಯೊಂದಿದೆ ಎಂಬುದು ನಿಖರವಾಗಿ ಗುರುತಿಸಲ್ಪಟ್ಟಿದೆ.

ಈ ಪರಂಪರೆಯ ಮುಂದುವರಿಕೆಯಂತೆ ಆಧುನಿಕ ಸಾಹತ್ಯದಲ್ಲಿಯೂ ಧಾರ್ಮಿಕ ಕೃತಿಗಳ ನಡುವೆಯೂ ಸಾಹಿತ್ಯಕೃತಿಗಳು ಹೊರಬರುತ್ತಿವೆ. ಇತ್ತೀಚಿನ ವರ್ಷಗಳಲ್ಲಿ ಇಂಥವುಗಳ ಸಂಖ್ಯೆ ಏರುತ್ತಿದೆ. ಇದಕ್ಕೆ ಕಳೆದ ದಶಕದಿಂದ ಆಗುತ್ತಿರುವ ಈ ಸಾಹಿತ್ಯದ ಹೊಸ ಶೋಧವೇ ಪ್ರೇರಕವಾಗಿರಬಹುದು. ವಾಸ್ತವವಾಗಿ ಇಂತಹ ಕೃತಿಗಳೇ ಹೆಚ್ಚು ಹೆಚ್ಚು ಬರಬೇಕಾದುದೂ ಕೂಡ. ಈ ಹಿನ್ನೆಲೆಯಲ್ಲಿ ೨೦೦೦-೦೧ರಲ್ಲಿ ಪ್ರಕಟವಾಗಿರುವ ಮೂರು ಕೃತಿಗಳು ಮುಖ್ಯವಾಗುತ್ತವೆ.

### ೧. ಶ್ರೀ ವೇದಾಂತದೇಶಿಕರು - ಜೀವನ ಮತ್ತು ಕೃತಿಗಳು :

ಲೇ ಮತ್ತು ಪ್ರ. ಶ್ರೀವತ್ಸ ಕಲ್ ಬಾಗಲ್ ೧೦೮೨, ೫ನೇ ಎ ಮೇನ್, ಗೋಕುಲ ೧ನೇ ಹಂತ, ಮತ್ತೀಕೆರೆ, ಬೆಂಗಳೂರು-೫೪.

ದೇಶಿಕರು ವಿದ್ಯಾರಣ್ಯರ ಸಮಕಾಲೀನರಾಗಿ ಕರ್ನಾಟಕದಲ್ಲಿ ವಿಜಯನಗರದ ಅರಸೊತ್ತಿಗೆಯು ಪ್ರಾರಂಭವಾಗುತ್ತಿದ್ದ ಕಾಲದಲ್ಲಿ ತಮಿಳುನಾಡಿನಲ್ಲಿ ಪ್ರಮುಖ ಭಕ್ತಿ ಚಳವಳಿಯ ನೇತಾರರಾಗಿ ಕಾಣಿಸಿಕೊಂಡಿದ್ದ ಮುಖ್ಯ ಐತಿಹಾಸಿಕ ವ್ಯಕ್ತಿಗಳೂ ಆಗಿದ್ದಾರೆ. ಇವರ ಬಗ್ಗೆ ಇವರಿಗೂ ವಿದ್ಯಾರಣ್ಯರಿಗೂ ಇದ್ದ ಸಂಪರ್ಕದ ಬಗ್ಗೆ ಹಲವಾರು ಇತಿಹಾಸಕೃತಿಗಳು ಬಂದಿವೆ. ಇವರ ಕಾಲ, ದೇಶ, ಕೃತಿಗಳ ಬಗ್ಗೆ ಸಾಕಷ್ಟು ಚರ್ಚೆಯಾಗಿದೆ. ಇದಕ್ಕೆ ಸಂವಾದಿಯಾಗಿ ಈ ಚರ್ಚೆಯ ಸಂಪರ್ಕವೇ ಇಲ್ಲವೇನೋ ಎನ್ನುವಹಾಗೆ ಪಾರಂಪರಿಕ ಕಥಾಮೂಲಗಳ ಆಧಾರದಿಂದ ರಚಿತವಾದ ಧಾರ್ಮಿಕ ದೃಷ್ಟಿಕೋನದ ಕೃತಿಗಳೂ ಸಾಕಷ್ಟಿವೆ. ಶ್ರೀಕಲ್ಬಾಗಲ್ ಅವರು ಎರಡನೇ ವರ್ಗದ ಕೃತಿಗಳನ್ನಾಧರಿಸಿ ತಮ್ಮ ಈ ಕೃತಿಯನ್ನು ರಚಿಸಿರುವಂತೆ ತೋರುತ್ತದೆ.

ದೇಶಿಕರ ಲಭ್ಯವಾಗಿರುವ ೮೨ ಕೃತಿಗಳನ್ನು ವಿಷಯವಾರು ವಿಭಾಗಿಸಿ ಕಾವ್ಯ - ನಾಟಕ - ಸ್ತೋತ್ರ - ತಾತ್ವಿಕ, ವ್ಯಾಖ್ಯಾನ, ಪ್ರಬಂಧ ಇತ್ಯಾದಿ ವರ್ಗಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಚರ್ಚಿಸಿದ್ದಾದರೂ ಈ ಚರ್ಚೆ ಸ್ತುತಿಪರವಾದ ತಾತ್ವಿಕ ಮೌಲ್ಯವಿವೇಚನೆಯಲ್ಲಿ ಮುಕ್ತಾಯವಾಗುತ್ತದೆ. ದೇಶಿಕರ ಜೀವನ - ಸಾಧನೆ ಮತ್ತು ಕೃತಿಗಳನ್ನು ಅಭ್ಯಸಿಸುವ ಆಸಕ್ತರಿಗೆ ಮತ್ತು ಇವರ ಬಗ್ಗೆ ತಿಳಿದುಕೊಳ್ಳುವ ಕುತೂಹಲಿಗಳಿಗೆ ಇದು ಒಂದು ಸರಳ, ಸುಂದರ, ಸುಲಭ ಕೈಪಿಡಿಯಾಗಿದೆ. ವೇದಾಂತ ದೇಶಿಕರನ್ನು ಗಂಭೀರ ಚರ್ಚೆಗೆ ಪ್ರವೇಶಿಸಿದೆ ಎನಿಸುವಂತಹ ಇಂತಹ ಕೃತಿಗಳೂ ಸಾಹಿತ್ಯವಲಯದಲ್ಲಿ ಅತ್ಯಗತ್ಯವಾಗಿರುತ್ತವೆ.

ಮುಂಬರುವ ಮುದ್ರಣದಲ್ಲಿ ವೇದಾಂತ ದೇಶಿಕರ ಅಸ್ತಿತ್ವವನ್ನು ಕುರಿತ ಐತಿಹಾಸಿಕ ದಾಖಲೆಗಳು, ಚರ್ಚೆಗಳು, ಸಮಕಾಲೀನ ಸಾಹಿತ್ಯದ ಜೊತೆಯಲ್ಲಿ ದೇಶಿಕರ ಸಾಹಿತ್ಯವಿಮರ್ಶೆ ಇತ್ಯಾದಿ ಐತಿಹಾಸಿಕ ಮತ್ತು ತೌಲನಿಕ ದೃಷ್ಟಿಕೋನವನ್ನು ಒಳಗೊಂಡು ಪೂರ್ಣಪ್ರಮಾಣದ ಸಾಹಿತ್ಯಕೃತಿಯಾಗಿ ಹೊರಬರಲಿ ಎಂದು ಆಶಿಸುತ್ತ ಇಂಥದೊಂದು ಕೃತಿಯನ್ನು ಕನ್ನಡಕ್ಕೆ ನೀಡಿರುವ ಶ್ರೀವತ್ಸ ಕಲ್ಬಾಗಲ್ ಅವರ ಶ್ರಮವನ್ನು ಅಭಿನಂದಿಸಲೇಬೇಕಾಗಿದೆ.

೨. **ಶ್ರೀ ವೈಷ್ಣವ ದರ್ಶನ ಮತ್ತು ಸಂಸ್ಕೃತಿ**. ಲೇ. ಮತ್ತು ಪ್ರ : ವಿದ್ವಾನ್ ರಘುಸುತ, ಪುಲಿಕೇಶಿ ಪ್ರಕಾಶನ, ಪುಲಿಕೇಶಿ ರಸ್ತೆ, ೧ನೇ ಮೇನ್, ಯಶವಂತಪುರ, ಬೆಂಗಳೂರು - ೨೨

ಕನ್ನಡದಲ್ಲಿ ಧಾರ್ಮಿಕ ಮತ್ತು ಸಾಹಿತ್ಯಕ ಎರಡೂ ದೃಷ್ಟಿಯ ಶ್ರೀ ವೈಷ್ಣವ ಸಾಹಿತ್ಯವನ್ನು ರಚಿಸುತ್ತಿರುವ ಲೇಖಕರಲ್ಲಿ ಶ್ರೀ ರಘುಸುತರು ಅಗ್ರಗಣ್ಯರು. ಈ ವಿಭಾಗದಲ್ಲಿ ಐವತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಕರ್ನಾಟಕದಲ್ಲಿ ಆಂಡಾಳ್, ಶ್ರೀರಾಮಾನುಜರು, ಯತಿರಾಜವೈಭವ, ಪಿಳ್ಳೈಲೋಕಾಚಾರ್ಯರು, ಭಾರತೀಯ ಸ್ಮೃತಿಗಳು ಮುಂತಾದುವುಗಳನ್ನು ಸಾಹಿತ್ಯಕ ದೃಷ್ಟಿಕೋನದಿಂದ ಮುಖ್ಯವಾದವುಗಳೆನ್ನಬಹುದು. ಶ್ರೀವೈಷ್ಣವ ಸಾಹಿತ್ಯವನ್ನು ಸಾರ್ವತ್ರಿಕ ಚರ್ಚೆಗೊಳಪಡಿಸಬೇಕೆನ್ನುವ ಮನೋಭಾವದಿಂದಲೇ ಇವರ ಈಚಿನ ಕೃತಿಗಳು ಹೊರಬರುತ್ತಿರುವುದು ಮತ್ತು ಇತರರನ್ನು ಈ ದೃಷ್ಟಿಯಲ್ಲಿ ಬರೆಯಲು ಪ್ರೋತ್ಸಾಹಿಸುತ್ತಿರುವುದು ಗಮನಿಸಬೇಕಾದ ಈ ಕ್ಷೇತ್ರದ ಬೆಳವಣಿಗೆಯೆನಿಸಿದೆ.

ಪ್ರಸ್ತುತ ಕೃತಿ "ಶ್ರೀ ವೈಷ್ಣವ ದರ್ಶನ ಮತ್ತು ಸಂಸ್ಕೃತಿ" ಈ ನಿಟ್ಟಿನಲ್ಲಿ ಒಂದು ಮುಖ್ಯ ಕೃತಿಯಾಗಿ ನಿಲ್ಲುತ್ತದೆ. ಶ್ರೀ ವೈಷ್ಣವ ದರ್ಶನದ ಸ್ವರೂಪ, ಬೆಳವಣಿಗೆ, ಭಾರತೀಯ ಸಮಾಜದ ಮೇಲೆ ಅದರ ಪ್ರಭಾವ, ಇತಿಹಾಸ ಕರ್ನಾಟಕದಲ್ಲಿ ಅದರ ಚರಿತ್ರೆ ನಿರ್ಮಾಣವಾಗಿರುವ ಸಾಹಿತ್ಯ ಇತ್ಯಾದಿ ಅಮೂಲ್ಯ ವಿವರಗಳನ್ನು ಐತಿಹಾಸಿಕ ದೃಷ್ಟಿಕೋನದಿಂದ ಸಂಶೋಧನಾತ್ಮಕವಾಗಿ ಆದರೆ ಸಾಮಾನ್ಯ ಓದುಗರಿಗೂ ಅರ್ಥವಾಗುವಂತೆ ಸರಳವಾಗಿ, ಸುಲಭವಾಗಿ ನಿರೂಪಿಸಿದ್ದಾರೆ.

ಈ ಗ್ರಂಥದಲ್ಲಿ ಶ್ರೀವೈಷ್ಣವದರ್ಶನ, ಶ್ರೀವೈಷ್ಣವತತ್ವದ ಇತಿಹಾಸ ಭಾರತದಲ್ಲಿ ಶ್ರೀವೈಷ್ಣವಧರ್ಮ, ಆಚಾರ್ಯರು ನಿರೂಪಿಸಿದ ಶ್ರೀವೈಷ್ಣವ ದರ್ಶನ, ಕೀರ್ತನ ಸಾಹಿತ್ಯದಲ್ಲಿ ಶ್ರೀವೈಷ್ಣವ ದರ್ಶನ, ಆಧುನಿಕ ಕನ್ನಡದಲ್ಲಿ ಶ್ರೀವೈಷ್ಣವದರ್ಶನ ಹಾಗೂ ಶ್ರೀವೈಷ್ಣವದರ್ಶನ ಮತ್ತು ಸಂಸ್ಕೃತಿ ಎಂಬ ಏಳು ಅಧ್ಯಾಯಗಳಿದ್ದು ಒಂದೊಂದೂ ವಿವರವಾದ ವಿಪುಲ ಮಾಹಿತಿಯನ್ನೊಳಗೊಂಡಿದೆ. ವೇದ - ಉಪನಿಷತ್ತು ಪುರಾಣಗಳಲ್ಲಿ ವೈಷ್ಣವಭಕ್ತಿ ಹೇಗೆ ನಿರೂಪಿತವಾಗಿತ್ತು ಎಂಬುದರಿಂದ ಆರಂಭವಾಗಿ ತಮಿಳು ಸಾಹಿತ್ಯದಲ್ಲಿ ಅದು ಕಾಣಿಸಿಕೊಂಡು

ಆಳ್ವಾರರ ಭಕ್ತಿ ಸಾಹಿತ್ಯದಲ್ಲಿ ನೆಲೆನಿಂತು ಆಳ್ವಾರರಲ್ಲಿ ಪ್ರಪತ್ತಿ ಧರ್ಮವಾಗಿ ಹೇಗೆ ರೂಪಗೊಂಡಿತು ಅನಂತರದ ಆಚಾರ್ಯರು ಅದಕ್ಕೊಂದು ದರ್ಶನ ರೂಪವನ್ನು ಕೊಟ್ಟು ಒಂದು ಪ್ರಮುಖ ಭಾರತೀಯ ಧರ್ಮವನ್ನಾಗಿ ಹೇಗೆ ಬೆಳೆಸಿದರು ಎಂಬುದನ್ನು ಸಾಧಾರಣವಾಗಿ ಈ ಗ್ರಂಥದಲ್ಲಿ ವಿವರಿಸಲಾಗಿದೆ.

ಶ್ರೀವೇಷ್ಣವ ಧರ್ಮದ ಇತಿಹಾಸವನ್ನು ಇಷ್ಟು ಸಮಗ್ರವಾಗಿ ಮತ್ತು ನಿಖರವಾಗಿ ಹೇಳುವ ಇನ್ನೊಂದು ಗ್ರಂಥ ಪ್ರಾಯಶಃ ಇಲ್ಲ ಎಂದರೆ ತಪ್ಪಾಗಲಾರದು. ಈ ಗ್ರಂಥದ ಇನ್ನೊಂದು ಮುಖ್ಯ ವಿಶೇಷವೆಂದರೆ ಕರ್ನಾಟಕದಲ್ಲಿ ಈ ಧರ್ಮಸಾಹಿತ್ಯ ಬೆಳೆದು ಬಂದುದರ ಇತಿಹಾಸ. ಈ ಮಾಹಿತಿಗಂತೂ ಇದೇ ಮೊದಲ ಗ್ರಂಥ. ಹೊಯ್ಸಳರ ಕಾಲದಿಂದ ಪ್ರಮುಖ ರಾಜಧರ್ಮವಾಗಿ ಬೆಳೆದು ಬಂದ ಈ ಧರ್ಮದಲ್ಲಿ ಈವರೆಗೆ ರಚನೆಯಾಗಿರುವ ಸಾಹಿತ್ಯವನ್ನೂ ಇಲ್ಲಿ ವಿಶ್ಲೇಷಿಸಿದ್ದಾರೆ. ೬೦ರ ದಶಕದಲ್ಲಿ ನಡೆದ ಕನ್ನಡ ಸಾಹಿತ್ಯದಲ್ಲಿ ಶ್ರೀವೈಷ್ಣವ ಪರಂಪರೆಯ ಸಂಶೋಧನೆಗಳ ಹಿನ್ನೆಲೆಯನ್ನೂ ಬಳಸಿಕೊಂಡು ಈ ನಿಟ್ಟಿನಲ್ಲಿ ಇನ್ನಷ್ಟು ಹೊಸ ಅಂಶಗಳನ್ನೂ ಸೇರಿಸಿರುವುದು ಲೇಖಕರ ಸಂಶೋಧನ ಪ್ರವೃತ್ತಿಗೆ ಸಾಕ್ಷಿಯಾಗಿದೆ. ಕೀರ್ತನ ಸಾಹಿತ್ಯದಲ್ಲಿ ಶ್ರೀ ವೈಷ್ಣವ ದರ್ಶನ ಮತ್ತು ಆಧುನಿಕ ಕನ್ನಡದಲ್ಲಿ ಶ್ರೀವೈಷ್ಣವ ದರ್ಶನ ಎಂಬ ಅಧ್ಯಾಯಗಳಂತೂ ಸಂಶೋಧಕರನ್ನು ಕೈಬೀಸಿ ಕರೆಯುವಂತಹ ನೂತನ ಮಾಹಿತಿಗಳಿಂದ ತುಂಬಿವೆ. ಲೇಖಕರು ಈ ಗ್ರಂಥದಲ್ಲಿ ಆಗಿರುವ ಕಾರ್ಯಗಳಿಗಿಂತ ಆಗಬೇಕಾದ ಕಾರ್ಯಗಳನ್ನೇ ರಾಶಿಹಾಕಿ ಈ ನಿಟ್ಟಿನಲ್ಲಿ ಕೆಲಸಮಾಡುವ ಸಂಶೋಧಕರಿಗೆ ಮಾಹಿತಿಗಳ ಮಹಾಪೂರವನ್ನೇ ಹರಿಸಿದ್ದಾರೆ.

ಶ್ರೀವೈಷ್ಣವರ ಬಗ್ಗೆ ಯಾವುದೇ ರೀತಿಯ ಸಂಶೋಧನೆಗಳು ನಡೆದಿಲ್ಲ, ಇವರಲ್ಲಿ ನೂರಾರು ಪ್ರಭೇದಗಳಿವೆ. ಅವುಗಳಲ್ಲಿರುವ ವೈಶಿಷ್ಟ್ಯಗಳೇನು ಎಂಬುದನ್ನೂ ಕೂಡ ಖಚಿತ ಮಾಹಿತಿಯೊಂದಿಗೆ ದಾಖಲಿಸುವ ಪ್ರಯತ್ನ ನಡೆದಿಲ್ಲ. ಶ್ರೀವೈಷ್ಣವರು ಸಮಾಜಕ್ಕೆ ನೀಡಿರುವ ವಿವಿಧ ಕೊಡುಗೆಗಳು ಸಂಗೀತ, ನೃತ್ಯ, ಚಿತ್ರ, ಶಿಲ್ಪಕಲೆ, ಸಾಹಿತ್ಯ, ಆಡಳಿತ ಇತ್ಯಾದಿಗಳನ್ನು ಶಾಸನ, ಐತಿಹಾಸಿಕ ದಾಖಲೆಗಳು, ಜನಜೀವನದ ಚಿತ್ರಣಗಳು, ಸಾಹಿತ್ಯದ ಬರಹಗಳು ಇತ್ಯಾದಿಗಳ ನಂಬಲರ್ಹ ಆಧಾರಗಳಿಂದ ಪ್ರಚಾರಪಡಿಸಬೇಕಾಗಿದೆ. ಶ್ರೀವೈಷ್ಣವ ಸಂಸ್ಕೃತಿಯನ್ನೂ ಅಧ್ಯಯನ ಮಾಡಬೇಕಾಗಿದೆ ಎಂದು ಪಟ್ಟಿ ಮಾಡುತ್ತಾ ಜನಾಂಗೀಯ, ಸಾಮಾಜಿಕ, ಸಾಂಸ್ಕೃತಿಕ ಅಧ್ಯಯನದ ಸೂಚನೆ ನೀಡುತ್ತಾರೆ.

ಈ ಧರ್ಮೀಯರ ವಿದ್ವತ್ತು, ಬುದ್ಧಿ ಮತ್ತೆ ಆಧುನಿಕ ತಂತ್ರಜ್ಞಾನಿಗಳ ಪರಿಣತಿಗಳನ್ನು ಕೇವಲ 'ಉದರನಿಮಿತ್ತಂ'ಗೆ ಬಳಸಿಕೊಳ್ಳದೆ ಸಂಸ್ಕೃತಿ ಅಧ್ಯಯನಕ್ಕೆ ತೊಡಗಿಸಬೇಕು. ಕಂಪ್ಯೂಟರ್ ಮುಂತಾದ ಆಧುನಿಕ ಮತ್ತು ವಿದೇಶೀ ತಂತ್ರಜ್ಞಾನಗಳನ್ನು ಬಳಸಿ ಇರುವ ಮಾಹಿತಿಗಳನ್ನು ಸಂಗ್ರಹಿಸಿ ಸಂದರ್ಶಿಸಿ ವಿಶ್ಲೇಷಿಸಿ ಈ ಧರ್ಮದ ವಿಶ್ವವ್ಯಾಪಕತೆಯನ್ನು ಭಾರತೀಯ ಸಮಾಜಕ್ಕೆ ಅದರ ಕೊಡುಗೆಯನ್ನು ನಿರೂಪಿಸಬೇಕಾದಂತಹ ಮುಖ್ಯ ಕರ್ತವ್ಯಗಳಲ್ಲಿ ಈ ಧರ್ಮೀಯರು ನಿರತರಾಗಬೇಕೇ ವಿನಾ ದಿವ್ಯ ಪ್ರಬಂಧಗಳನ್ನು ಅನುಸಂಧಾನ ಮಾಡುತ್ತಾ, ಊಟ - ಪ್ರಸಾದಗಳನ್ನು ಹೊಡೆಯುತ್ತಾ ಹಾದಿ ಬೀದಿಗಳಲ್ಲಿ ಸಣ್ಣ ವಿಷಯಗಳಿಗೆಲ್ಲ ಮನಸ್ತಾಪಮಾಡಿ

ಕೊಂಡು ನಮಗೆ ನಾವೇ ನಮ್ಮ ಸಂಸ್ಕೃತಿಯನ್ನು ನಾಶಮಾಡುತ್ತಿರುವುದು ತರವಲ್ಲ ಎಂದು ಸ್ವಧರ್ಮಿಗಳಿಗೆ ಅತ್ಯಂತ ವಿಷಾದದಿಂದ ತಿಳಿವಳಿಕೆ ಹೇಳುವ ರಘುಸುತರ ಕಳಕಳಿಯನ್ನು ಯಾರಾದರೂ ಅರ್ಥಮಾಡಿಕೊಳ್ಳಬಹುದು.

ಈ ಗ್ರಂಥದ ಮಹತ್ವವನ್ನು ಇದಕ್ಕೆ ಮುನ್ನುಡಿ ಬರೆದಿರುವ ಪ್ರಸಿದ್ಧ ವಿದ್ವಾಂಸರಾದ ಪ್ರೊ।। ಎಸ್. ಕೆ. ರಾಮಚಂದ್ರರಾವ್ ಅವರ ಈ ಮಾತುಗಳಿಂದಲೇ ಹೇಳುವುದು ಉಚಿತವೆನಿಸುತ್ತದೆ; ಈ ಪುಸ್ತಕವು ಹೊಸದೊಂದು ದಾರಿಯನ್ನು ಹಿಡಿದಿದೆ. ನೀರಸವೆನ್ನ ಬಹುದಾದ ತಾತ್ವಿಕ ಸಾಮಗ್ರಿಯು ರಸಮಯವಾದ ಕೀರ್ತನ ಸಾಹಿತ್ಯದಲ್ಲಿ, ಕವಿಕಾವ್ಯ ಪರಂಪರೆಯಲ್ಲಿ ಅಭಿವ್ಯಕ್ತಗೊಂಡಿರುವುದನ್ನು ಮನಗಾಣಿಸಿರುವುದು ಇಲ್ಲಿಯ ಸ್ವಾರಸ್ಯ. ಹರಿದಾಸ ಪಂಥದವರ ಸಾರಸ್ವತ ವ್ಯವಸಾಯದಲ್ಲಿ ಶ್ರೀ ವೈಷ್ಣವ ತತ್ವಗಳು ಬೀರಿರುವ ಪ್ರಭಾವವನ್ನು ಲೇಖಕರು ಸ್ಪಷ್ಟಪಡಿಸಿದ್ದಾರೆ. ಕನ್ನಡದಲ್ಲಿ ಕಂಡುಕೊಂಡಿರುವ ಶ್ರೀವೈಷ್ಣವ ದರ್ಶನದ ಇಡೀ ಇತಿಹಾಸವನ್ನು ಕ್ರಮವರಿತು ನಿರೂಪಿಸಿದ್ದಾರೆ. ಸಂಶೋಧಕರಿಗೆ ನೆರವಾಗಬಲ್ಲ ನೂರಾರು ವಿವರಗಳು ಇಲ್ಲಿವೆ. ಶ್ರೀವೈಷ್ಣವ ಧರ್ಮದ ಹಿನ್ನೆಲೆಯನ್ನು ಅಡಕವಾಗಿ ಕಾಣಿಸಿದ್ದಾರೆ.

ವಿದ್ವಾನ್ ರಘುಸುತರ ಈ ಕೃತಿ ಈಗಾಗಲೆ ಆರಂಭವಾಗಿರುವ ಕನ್ನಡ ಸಾಹಿತ್ಯದಲ್ಲಿ ಶ್ರೀವೈಷ್ಣವ ಪರಂಪರೆಯ ಶೋಧಕ್ಕೆ ಮುಖ್ಯ ಆಕರವಾಗಿ ಮುಂದಿನ ಸಂಶೋಧನೆಗಳಿಗೆ ಮಾರ್ಗವನ್ನು ಒದಗಿಸಬಲ್ಲಂತಹ ಆಧಾರ ಗ್ರಂಥವಾಗಿದೆ. ಅಗತ್ಯ ಮಾಹಿತಿಗಳ ಸಂಗ್ರಹ, ಸತತಾಭ್ಯಾಸ, ಮೂಲ ಆಕರ ಸಾಹಿತ್ಯದ ಅಧ್ಯಯನ ಅಗಾಧಪರಿಶ್ರಮಗಳ ಹಿನ್ನೆಲೆಯಲ್ಲಿ ಕೇವಲ ಕ್ರಮವರಿತು ಮಾಹಿತಿಗಳ ನಿರೂಪಣೆಯಷ್ಟನ್ನೇ ಮಾಡದೆ ಅವುಗಳ ವಿಶ್ಲೇಷಣೆ ಮುಂಗಾಣ್ಕೆಗಳನ್ನು ನೀಡುವಮೂಲಕ ರಘುಸುತರು ಕನ್ನಡ ಸಾಹಿತ್ಯಕ್ಕೆ ಅತ್ಯಮೂಲ್ಯವಾದ ಸಾಹಿತ್ಯಕೃತಿಯನ್ನು ಕೊಟ್ಟಿದ್ದಾರೆ. ಈ ಬಗೆಯ ಅಧ್ಯಯನ ಮುಂದುವರಿದು ಇನ್ನಷ್ಟು ಉತ್ತಮ ಕೃತಿಗಳು ಹೊರಬರುವಂತಾಗಲಿ ಎಂದು ಕನ್ನಡ ಓದುಗರು ಆಶಿಸುತ್ತಾರೆ.

ಪ್ರೊ।। ನಾ. ಗೀತಾಚಾರ್ಯ

**೩. ಮಧುರ ಕವಿ ಮಾಧುರ್ಯ - ಕನ್ನಡದಲ್ಲಿ ಒಂದು ಚಿಂತನೆ** ಲೇ : ನ್ಯಾಯ ವೇದಾಂತ ವಿದ್ವಾನ್ ಸಮನ್ವಯಾಚಾರ್ಯ ಶ್ರೀ ತಿರುನಾರಾಯಣಪುರಂ ಅರೈಯರ್ ಸ್ವಾಮಿ ಪ್ರ : ವಿಶದವಾಕ್ ಪ್ರಕಾಶನ, ಮೇಲುಕೋಟೆ - ೫೭೧ ೪೩೧, ಕರ್ನಾಟಕ

ಕನ್ನಡದಲ್ಲಿ ಶ್ರೀವೈಷ್ಣವ ಸಾಹಿತ್ಯ ಪ್ರಕಾರಕ್ಕೊಂದು ಅತ್ಯಮೂಲ್ಯ ಕೊಡುಗೆ, ಮಧುರಕವಿ ಆಳ್ವಾರರ - 'ಕಣ್ಣಿನುಣ್ ಶಿರುತ್ತಾಂಬು' - ದಿವ್ಯಪ್ರಬಂಧ ಕುರಿತಂತೆ, ಹಿರಿಯ ವಿದ್ವಾಂಸರಾದ ಶ್ರೀ ತಿರುನಾರಾಯಣಪುರಂ ಅರೈಯರ್ ಸ್ವಾಮಿಯವರ - "ಮಧುರಕವಿ ಮಾಧುರ್ಯ". ಇದು ಗುರುವಿನ ಮಹಿಮೆಯನ್ನು ಹೊಗಳುವ ಗೀತೆ. ಶ್ರೀ ಅರೈಯರ್ ಅವರದ್ದು ಬಹುಮುಖ ಚಿಂತನ. ಅವರಲ್ಲಿ ಸಂಸ್ಕೃತ, ಕನ್ನಡ, ತಮಿಳು, ಇಂಗ್ಲೀಷ್ ಪ್ರಭುತ್ವದೊಂದಿಗೆ, ಬದುಕೆಲ್ಲ ಅನುಸರಿಸಿದ ಗಾಂಧಿ - ವಿನೋಬಾ - ಸರ್ವೋದಯ ಚಿಂತನಧಾರೆ, ಈ ಪ್ರಬಂಧ ವ್ಯಾಖ್ಯಾನದ ಉಪಕ್ಷ್ಯ ವಾಸುಮೊಕ್ಕಾಗಿ ಮೂಡಿ ಬಂದಿರುವುದು, ಈ ದಿವ್ಯ ಪ್ರಬಂಧದ ನೂತನ ಚಿಂತನೆ

ಎನ್ನಿಸುತ್ತದೆ. ಶ್ರೀ ಅರೈಯರ್ ಅವರ ಉಪನ್ಯಾಸ ಎಷ್ಟು ಸೊಗಸೊ, ಅರ್ಥಯುತವೊ, ತಿಳಿನುಡಿಗಟ್ಟಿನಲ್ಲಿ ಕಂಕರಿಸುವ ಗಹನವೇದಾಂತ ಸಾರವೊ, ಅಷ್ಟೇ ಸೊಗಸು, ಅವರ ಬರಹ ಕೂಡ. ಅದು ಈ ಪುಸ್ತಕದಲ್ಲಿ ಹರಳುಗಟ್ಟಿದೆ.

ತಮಿಳುನಾಡಿನ ಶ್ರೀವೈಷ್ಣವ / ವೀರವೈಷ್ಣವ / ದ್ರಾವಿಡಸಂತರಾದ ಆಳ್ವಾರರ ನಾಲಾಯಿರದಿವ್ಯಪ್ರಬಂಧ' - ವಿಶ್ವಸಾಹಿತ್ಯಕ್ಕೇ ಒಂದು ನಿರಂತರ ಕೊಡುಗೆ. ತೋಂಡೀಸಾಹಿತ್ಯ - ಭಕ್ತಿಸಾಹಿತ್ಯಕ್ಕೇ - ಒಂದು ಅಮೂಲ್ಯ ಕೊಡುಗೆ. ಕ್ರಿ.ಶ. ೭-೧೦ರ ಅವಧಿಯಲ್ಲಿದ್ದ ಹನ್ನೆರಡುಮಂದಿ ಶ್ರೀವೈಷ್ಣವ ಸಂತರಾದ, ಶ್ರೀಮನ್ನಾರಾಯಣನ ಭಕ್ತಿಸಾಮ್ರಾಜ್ಯ ಆಳುವವರಾದ, ಭಕ್ತಿಕಡಲಲ್ಲಿ ಮುಳುಗಿದ, ಆಳ್ವಾರರು ಹಾಡಿದ ನಾಲ್ಕು ಸಾವಿರ ಹಾಡುಗಳ - ಭಕ್ತಿಗೀತೆಗಳ ವೈವಿಧ್ಯ ವೈಶಿಷ್ಟ್ಯಗಳು ಅನುಭವವೇಧ್ಯಾ ಮಾತ್ರ. ಅದು ದಿವ್ಯಪ್ರಬಂಧಗಳ ಮೇಲುನೋಟದ ಅಧ್ಯಯನಕ್ಕೇ ಕಾಣಬಂದೀತು. ಇನ್ನು ಪ್ರಬಂಧಗಳ ಆಂತರ್ಯ, ವಿಶೇಷ ಅಧ್ಯಯನವೊ ಬಂದಿರುವ ಪೆರಿಯ ವಾಚ್ಚನ್ ಪಿಳ್ಳೈ, ತೆರಿಯಾದ ವಿದ್ವಾಂಸರ ವ್ಯಾಖ್ಯಾನಗಳೇ ಸಾಕ್ಷಿ. ಹನ್ನೆರಡು ಜನ ಆಳ್ವಾರರು - ಪೊಯ್‌ಹೈ, ಪೂದತ್ತ, ಪೇಯಾರ್, ತಿರುಮಳಿಶೈ, ಮಧುರಕವಿ, ನರ್ಯಾಳ್ವಾರ್, ಕುಲಶೇಖರರು, ವಿಷ್ಣುಚಿತ್ತ (ಪೆರಿಯಾಳ್ವಾರ್), ಗೋದಾದೇವಿ (ಆಂಡಾಳ್), ಕೊಂಡರತಿ ಪೊತಿ (ಭಕ್ತಾಂಘ್ರಿರೇಣು), ತಿರುಪಾಂಶಿ, ಪರಕಾಲರು ಇವರೆಲ್ಲರ ಕೊಡುಗೆಗಳನ್ನು ಈ ಲೇಖನದಲ್ಲಿ ಪ್ರಸ್ತಾಪಿಸಲು ಅವಕಾಶ ಸಾಲದು.

"ಕಣ್ಣಿನುಣ್‌ಶಿರುತ್ತಾಂಬು" - ಮಧುರಕವಿ ಆಳ್ವಾರರು, ತಮ್ಮ ಗುರು ನಮ್ಮಾಳ್ವಾರರನ್ನು ಕುರಿತು ಹಾಡಿರುವ ಗೀತದ ಗೊಂಚಲು. "ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ" ಎಂಬುವ ದಾಸವಾಣಿಗೆ, ಮಧುರಕವಿ, ತಕ್ಕ ಉದಾಹರಣೆ. ಅವರಿಗೆ ಸರ್ವಸ್ವ ನಮ್ಮಾಳ್ವರರು.! "ಗಂಟು ನುಣ್ಣನ ಕಿರಿಯ ಹಗ್ಗ" - ಕಣ್ಣಿನುಣ್‌ಶಿರುತ್ತಾಂಬಿನಾಲ್ ನಂಬುದಾರ್ ಪದಿ ವೈಹುಂದಲ ಕಾಣ್ಬನೇ - ಎಂಬುವುದು ಈ ದಿವ್ಯಪ್ರಬಂಧಕಾರ. ನಮ್ಮಾಳ್ವಾರ್ ಮಧುರ ಕವಿಗಳ ದರ್ಶನವೇ ರಾಮಾನುಜದರ್ಶನದ ಸಾರವೆಂದರೂ ಸರಿಯೆ.

ಕಣ್ಣಿನುಣ್ ಶಿರುತ್ತಾಯ್ಬು - ಎಂದೇ ಪ್ರಬಂಧದ ಆರಂಭ ! ಯಶೋದೆ ತನ್ನ ತುಂಟಮಗ ನವನೀತಚೋರ - ಕೃಷ್ಣ - ಕಣ್ಣನನ್ನು ಒಂದು ರೆಟ್ಟೆಯಿಂದ ಹಿಡಿದು, ಕೈಗೆ ಸಿಕ್ಕಿದ ಚಿಕ್ಕ ಚಿಕ್ಕ ಹಗ್ಗಗಳನ್ನೇ ಗಂಟುಸೇರಿಸಿ, ಆ ಹಗ್ಗದಿಂದ ಮಾಯಾವಿ ಬಾಲಕೃಷ್ಣನನ್ನು ಕಟ್ಟಿಹಾಕಿದ ದೃಶ್ಯ ಎಷ್ಟು ಮೋಹಕ ?! ಒರಳಿಗೇ ಬಿಗಿಯುತ್ತಾಳೆ, ಕಿಲಾಡಿ ಕಿಟ್ಟನನ್ನು ! ಈ ದಾಮೋದರನ ನಾಮಕ್ಕಿಂತ ಕಠಕೋಪರಾಗಿ, ಆಳ್ವಾರ್ ತಿರುನಗರಿಯಲ್ಲಿರುವ ನಮ್ಮಾಳ್ವಾರ್ ಸಾನ್ನಿಧ್ಯವೇ - ಮಧುರಕವಿಗಳಿಗೆ ಪರಮ ಪ್ರಿಯ ! ಆಳ್ವಾರರ ಮಹಿಮೆ - ಹಿರಿಮೆಗಳನ್ನೇ ಮಧುರ ಕವಿಗಳು ಹಾಡಿ, ಬಿತ್ತರಿಸಿದರು. ಅದರಿಂದಾಗಿ ಇವರನ್ನು ತಮಿಳಿನ 'ವೇದವ್ಯಾಸ'ರೆಂಬುದಾಗಿ ಕರೆಯುತ್ತಾರೆ. ಆಚಾರ್ಯನಿಷ್ಠೆಯೇ ಮಧುರಕವಿಗಳಿಗೆ ಪ್ರಧಾನವೆನ್ನಿಸಿತು.

ಕಣ್ಣಿನುಣ್ ಶಿರುತ್ತಾಮ್ಬಿನಾಲ್ ಕಟ್ಟುಣ್ಣ । ಪೃಣ್ಣಿಯ ಪೆರುಮಾಯನ್, ಎನ್ನಪ್ಪನಿಲ್। ನಣ್ಣಿತ್ತೆನ್ ಕುರುಹೂರ್ ನಮ್ಬಿ ಎನ್ನಕ್ಕಾಲ್ । ಅಣ್ಣಿಕ್ಕುಮಮುದೂರುಮ್ ವನ್ನುಮಕ್ಕೇ ॥ ಎಂದು ಆರಂಭ ಪ್ರಬಂಧ !

ತಮ್ಮ ಗುರು ತೆಲಕಣ ಕುರುಹೂರ್ ಪುರಿ ನಂಬಿ ಎಂಬುವ ಹೆಸರು ಕೇಳಿದರೇ ಪರಮ ಪ್ರಿಯ ಮಧುರಕವಿ ಆಳ್ವಾರರಿಗೆ !

ಈ ಪದ್ಯದ ಕನ್ನಡ ನೆರಳು, ಅರೈಯರ್ ಅವರದ್ದೆ !
ಗಂಟು ನುಣ್ಣಿನ ಕಿರಿಯ ಹಗ್ಗದಿ ಕಟ್ಟಿನೊಪ್ಪುತಲಿ
ಉಂಡ ಹಿರಿಯ ಮಾಯಿಗನ್ ಎನ್ನ ಅಪ್ಪನಿಗಿಂತಲೂ
ಅಂಟಿತೆಂಕಣ ಕುರುಕಪುರಿಯ ಪೂರ್ಣ ಎನ್ನಲಿದೋ
ಒಟ್ಟಿಬರುವುದು ಅಮೃತವೂರುವುದೆನ್ನ ನಾಲಿಗೆಗೇ ॥೧॥

ನಾನು ಬೇರೊಬ್ಬ ದೇವರನ್ನು ಅರಿಯೆ. ಕುರುಹೂರಿನ ಶ್ರೇಷ್ಠರಾದ ನಮ್ಮಾಳ್ವಾರರ ದಿವ್ಯ ಚರಣಗಳನ್ನೇ ಆಶ್ರಯಿಸಿ, ಅವರ ದಿವ್ಯಪಾಶುರಗಳನ್ನು ಮಧುರವಾದ ರಾಗದಲ್ಲಿ ಹಾಡುತ್ತಾ ಸುತ್ತುತ್ತೇನೆ ಎನ್ನುತ್ತಾರೆ ಮಧುರಕವಿ.

'ಮಧುರ ಕವಿಮಾಧುರ್ಯ' - ಪುಸ್ತಕ ಪ್ರಾರಂಭದಲ್ಲಿ ಮಧುರಕವಿಗಳ ಜೀವನ ಪರಿಚಯವಿದೆ. ಅರೈಯರ್ ಸ್ವಾಮಿಗಳ ಸರಳ, ಅರ್ಥಯುತ ವಿವರ. ಅರೈಯರ್ ಶ್ರೀರಾಮಶರ್ಮರ ವಿದ್ವತ್‌ಪೂರ್ಣ ಸಮಾಲೋಚನೆ, ಮನನೀಯವಾದದ್ದು. ಪ್ರತಿ ಪಾಶುರಕ್ಕೂ ಅರೈಯರ್ ಅವರ ಕನ್ನಡ ನೆರಳು.

ಅರೈಯರ್ ಅವರು ರಾಮಾನುಜದರ್ಶನ ಕುರಿತು ಹಾಡುವವರು, ಕವಿ ಸರ್ವೋದಯ ಪಥದರ್ಶನ ಕಂಡುಕೊಂಡು ಸಾಧಿಸಿದವರು, ಹಿರಿಯ ಚಿಂತಕರು. ಕನ್ನಡದಲ್ಲಿ ಧಾರ್ಮಿಕ ಚಿಂತನೆ, ಅರೈಯರ್ ಸ್ವಾಮಿಗಳ ಬರಹದ ಮಾದರಿಯೇ ಇದ್ದಲ್ಲಿ ಸೊಗಸು ಎನ್ನಿಸುತ್ತದೆ. ಒಮ್ಮೊಮ್ಮೆ ತುಂಬಾ ವ್ಯಾಪಕ ಆದರೂ ಕೂಡ ಅರೈಯರ್ ಅವರ ಈ ಚಿಂತನೆ, ಅವರ ಇತರ ಎಲ್ಲ ಪ್ರಬಂಧದನುವಾದಗಳು, ಬರಹಗಳು ಬೆಳಕು ಕಂಡರೆ, ಭಕ್ತಿಸಾಹಿತ್ಯಕ್ಕೊಂದು ಸ್ಥಾಯಿ ಕೊಡುಗೆ ಆಗುತ್ತದೆ. ಪುಸ್ತಕದಲ್ಲಿ ಅಲ್ಲಲ್ಲಿ ಮುದ್ರಣದೋಷ ಇಣಿಕಿವೆ. ಮುಂದೆ ಅದನ್ನು ಸರಿಪಡಿಸಿದರಾದೀತು. ಸುಂದರ ವಿನ್ಯಾಸ, ಮಧುರಕವಿಗಳ ಪ್ರತಿಮೆಯ ಅಚ್ಚು, ಆಳ್ವಾರ್ ತಿರುನಗರಿಯ ಅಪರೂಪದ "ನಿದ್ರಿಸದ ಹುಣಸೆಮರದ" ಚಿತ್ರ, ಎಲ್ಲ ಸೇರಿ 'ಮಧುರಕವಿಯ ಧುರ್ಯಾ' ಅರೈಯರವರ ಮಾಧುರ್ಯವೂ ಆಗುತ್ತದೆ.

- ಡಾ॥ ಎಸ್.ಕೆ. ರಾಮಶೇಷನ್
ಮೈಸೂರು

# ಪ್ರತಿಷ್ಠಾನ ವಾರ್ತೆ

## ಕಾರ್ಯಕ್ರಮಗಳು

### ಬಿ.ಎಂ.ಶ್ರೀ. ಕಲಾಭವನ ನಿರ್ಮಾಣಕ್ಕೆ 1.5 ಲಕ್ಷ ರೂ. ದೇಣಿಗೆ

ಬೆಂಗಳೂರು, ಸೆ. 15- ಅರ್ಧಕ್ಕೆ ನಿಂತಿರುವ ಬಿ.ಎಂ. ಶ್ರೀ ಕಲಾಭವನದ ನೆಲಮಹಡಿಯ ನಿರ್ಮಾಣ ಕಾಮಗಾರಿಗೆ ಒಂದೂವರೆ ಲಕ್ಷ ರೂಪಾಯಿಗಳನ್ನು ನೀಡುವುದಾಗಿ ಪ್ರಸಿದ್ಧ ಉದ್ಯಮಿ ಸಿ.ವಿ.ಎಲ್. ಶಾಸ್ತ್ರಿ ಹೇಳಿದರು.

ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ ಇತ್ತೀಚೆಗೆ (9-9-01) ಎಂ.ವಿ. ಸೀತಾರಾಮಯ್ಯ ಸಂಸ್ಮರಣೆ ಅಂಗವಾಗಿ ಏರ್ಪಡಿಸಿದ್ದ ಕವಿಗೋಷ್ಠಿ, ಸಾಹಿತ್ಯ ದತ್ತಿ ಬಹುಮಾನ ವಿತರಣೆ, ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ಅತಿಥಿಗಳಾಗಿ ಮಾತನಾಡುತ್ತಾ ಪ್ರತಿಷ್ಠಾನ ದಾನಿಗಳ ನೆರವಿನೊಂದಿಗೆ ಕಟ್ಟಿಸಿರುವ ಕಲಾಭವನವನ್ನು ಪೂರ್ಣಗೊಳಿಸುವುದರ ಜೊತೆಗೆ ಅದನ್ನು ಸಾಲ ಮುಕ್ತಗೊಳಿಸುವುದಾಗಿ ತಿಳಿಸಿದರು.

ಕಾರ್ಯಕ್ರಮ ಉದ್ಘಾಟಿಸಿದ ಶಾಸಕ ಕೆ.ಎನ್. ಸುಬ್ಬಾರೆಡ್ಡಿ, ಕಾಮಗಾರಿ ಪೂರ್ಣಗೊಳಿಸಲು ಕೊರತೆ ಬೀಳುವ 2-3 ಲಕ್ಷ ರೂಪಾಯಿಗಳನ್ನು ದಾನಿಗಳಿಂದ ಕೊಡಿಸಲು ಮುಂದಾಗುವುದಾಗಿ ಭರವಸೆ ನೀಡಿದರು.

ಪ್ರತಿಷ್ಠಾನ ಪ್ರಕಟಿಸಿದ ನಾಲ್ವರು ಸಾಹಿತ್ಯೋಪಾಸಕರು ಪುಸ್ತಕ ಬಿಡುಗಡೆಗೊಳಿಸಿದ ಗಾಂಧಿವಾದಿ ಹೆಚ್.ಎಸ್. ದೊರೆಸ್ವಾಮಿ ಪ್ರತಿಷ್ಠಾನ ನಡೆಸುವ ಕೆಲ ಕಾರ್ಯಕ್ರಮಗಳಿಗೆ ಸರ್ಕಾರ ಅನುದಾನ ನಿಲ್ಲಿಸಿರುವುದು ವಿಷಾದನೀಯ. ಸರ್ಕಾರ ಈ ಕೂಡಲೇ ಅನುದಾನ ನೀಡುವುದನ್ನು ಮುಂದುವರಿಸಬೇಕು ಎಂದರಲ್ಲದೇ ಕಲಾಭವನ ಪೂರ್ಣಗೊಳಿಸುವುದೇ ಎಂ. ವಿ. ಸೀತಾರಾಮಯ್ಯ ಅವರಿಗೆ ಸಲ್ಲಿಸುವ ನಿಜವಾದ ಸಂಸ್ಮರಣೆಯಾಗಿದೆ ಎಂದರು.

ಸಮೇತನಹಳ್ಳಿ ರಾಮರಾಯರು ಸ್ಥಾಪಿಸಿರುವ ದಾಸ ಸಾಹಿತ್ಯ ದತ್ತಿನಿಧಿಯ ವಿಮರ್ಶಾ ಸ್ಪರ್ಧೆಯ ವಿಜೇತ ಎಂ.ಎಸ್. ವೆಂಕಟರಾಮಯ್ಯ ಅವರಿಗೆ ಬಹುಮಾನ ವಿತರಿಸಿದ ಸ್ವಾತ್ರಂತ್ರ್ಯ ಹೋರಾಟಗಾರ ತುಳಸಿದಾಸಪ್ಪ ಪ್ರತಿಷ್ಠಾನದ ಕಾರ್ಯ ಚಟುವಟಿಕೆಯನ್ನು ಶ್ಲಾಘಿಸಿದರು.

ಅಧ್ಯಕ್ಷತೆಯನ್ನು ಪ್ರತಿಷ್ಠಾನದ ಅಧ್ಯಕ್ಷ ಎನ್. ಬಸವಾರಾಧ್ಯರು ವಹಿಸಿದ್ದರು.

ಗೌರವ ಕಾರ್ಯದರ್ಶಿ ಪ್ರೊ. ನಾ. ಗೀತಾಚಾರ್ಯ ಪ್ರಾಸ್ತಾವಿಕ ಮಾತನಾಡಿದರು. ವ್ಯವಸ್ಥಾಪಕ ಕಾರ್ಯದರ್ಶಿ ಪ್ರೊ. ಡಿ. ಲಿಂಗಯ್ಯ ವಂದಿಸಿದರು. ಸುಗಮ ಸಂಗೀತ ಕಲಾವಿದೆ ಜಯಾಪಾರ್ಥಸಾರಥಿ ಅವರಿಂದ ಎಂ. ವಿ. ಸೀ ಗೀತ ಗಾಯನ ನಡೆಯಿತು.

ನಂತರ ಕನ್ನಡ ಸಂಸ್ಕೃತಿ ಇಲಾಖೆ ಜಂಟಿ ನಿರ್ದೇಶಕ ಮಾರ್ಕಂಡಪುರ ಶ್ರೀನಿವಾಸ್ ಅಧ್ಯಕ್ಷತೆಯಲ್ಲಿ ನಡೆದ ಕವಿಗೋಷ್ಠಿಯಲ್ಲಿ ಡಾ|| ಪಿ.ವಿ. ನಾರಾಯಣ ಆಶಯ ಭಾಷಣ ಮಾಡಿದರು. ಪ್ರೊ. ಡಿ. ಲಿಂಗಯ್ಯ, ಶ್ರೀಮತಿ ಉಷಾ ಪಿ. ರೈ, ಪ್ರೊ. ಕೆ. ಆರ್. ಇಕ್ಬಾಲ್

ಅಹಮದ್, ಕೆ.ಈಶ್ವರ ಪ್ರಸಾದ್, ಶ್ರೀಮತಿ ಹೆಚ್.ಎಲ್. ಪುಷ್ಪ, ಶ್ರೀಮತಿ ಇಂದಿರಾ ಹೆಗ್ಗಡೆ, ಪ್ರೊ. ಗೀತಾಚಾರ್ಯ, ಡಾ॥ ಕೆ.ಬಿ. ಲೋಕೇಶ್ವರಪ್ಪ ಕವನ ವಾಚಿಸಿದರು.

(ಕೃಪೆ - ಸಂಯುಕ್ತ ಕರ್ನಾಟಕ 17-9-01)

## 'ಸಿರಿಕಂಟ' ಹಸ್ತಪ್ರತಿಶಾಸ್ತ್ರ ವಿದ್ಯಾರ್ಥಿ ಗೋಷ್ಠಿ ಉದ್ಘಾಟನೆ

ಪ್ರತಿಷ್ಠಾನದಲ್ಲಿ ಕಳೆದ ಹತ್ತು ವರ್ಷಗಳಿಂದ ನಡೆಸಿಕೊಂಡು ಬಂದಿರುವ ಅಪರೂಪದ ಹಸ್ತ ಪ್ರತಿಶಾಸ್ತ್ರ ತರಗತಿಯ ದಶವಾರ್ಷಿಕ ನೆನಪಿಗಾಗಿ ಹತ್ತು ವರ್ಷಗಳ ಎಲ್ಲ ವಿದ್ಯಾರ್ಥಿಗಳನ್ನು ಒಳಗೊಂಡ ಗೋಷ್ಠಿಯಾಗಿ ರಚನೆಯಾಗಿರುವ 'ಸಿರಿಕಂಟ' ಪ್ರತಿಷ್ಠಾನದಲ್ಲಿ ಹಲವಾರು ಉಪಯುಕ್ತ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ನಿರ್ಧರಿಸಿದೆ. ಸಂಚಾಲಕರಾಗಿ ಶ್ರೀಮತಿ ಸಂಧ್ಯಾರಾಮಚಂದ್ರ, ಭಾರತಿ ಮತ್ತು ಶ್ರೀ ಬಿ.ಆರ್. ಸತ್ಯನಾರಾಯಣ ಅವರುಗಳು ಆಯ್ಕೆಯಾಗಿದ್ದಾರೆ.

ಈ 'ಸಿರಿಕಂಟ' ತನ್ನ ಪ್ರಥಮ ಕಾರ್ಯಕ್ರಮವಾಗಿ ಹಳೆಗನ್ನಡ ಕಾವ್ಯಾಭ್ಯಾಸ ಶಿಬಿರ ವನ್ನು ಆಯೋಜಿಸಿದ್ದು 21-10-01 ರಿಂದ 4-12-01ರವರೆಗೆ ವಾರಕ್ಕೆ ಮೂರು ದಿನದಂತೆ ಸಂಜೇವೇಳೆ ನಡೆದ ಈ ಶಿಬಿರದಲ್ಲಿ 30 ಜನ ಆಸಕ್ತರು ಭಾಗವಹಿಸಿದ್ದರು. ಸಾಹಿತ್ಯದ ಅಧ್ಯಾಪಕರು, ವಿದ್ಯಾರ್ಥಿಗಳು ಮತ್ತು ಸಾರ್ವಜನಿಕರಿದ್ದ ಈ ಶಿಬಿರದಲ್ಲಿ ಪ್ರೊ. ಅ.ರಾ. ಮಿತ್ರ ಮತ್ತು ಪ್ರೊ. ಎಂ.ಹೆಚ್. ಕೃಷ್ಣಯ್ಯ, ಡಾ॥ ಎಂ.ಎಲ್. ಲಲಿತಮ್ಮ ಡಾ॥ ಪಿ. ವಿ. ನಾರಾಯಣ, ಪ್ರೊ. ಡಿ. ಲಿಂಗಯ್ಯ, ಡಾ॥ ಕೆ.ವಿ. ಶ್ರೀನಿವಾಸಮೂರ್ತಿ, ಪ್ರೊ. ಎಂ.ವಿ. ಸತ್ಯನಾರಾಯಣ, ಶ್ರೀ ಎನ್.ಎಸ್. ರಾಮಸ್ವಾಮಿ ಅಯ್ಯರ್, ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ ಅವರುಗಳು ಸಂಪನ್ಮೂಲ ವ್ಯಕ್ತಿಗಳಾಗಿ ಹಳಗನ್ನಡ ಕಾವ್ಯಬೋಧನೆ, ಅಧ್ಯಯನದ ಸಮಸ್ಯೆಗಳು, ಕನ್ನಡ ಸಾಹಿತ್ಯ ಚರಿತ್ರೆ, ಛಂದಸ್ಸು ವ್ಯಾಕರಣಗಳಂತಹ ಪೂರಕ ವಿಚಾರದ ಪರಿಚಯ ಇತ್ಯಾದಿಗಳೊಂದಿಗೆ ಹಳೆಗನ್ನಡ ಪದ್ಯಗಳ ಪ್ರಾಯೋಗಿಕ ಬೋಧನಾ ತರಗತಿಗಳನ್ನು ನಡೆಸಿಕೊಟ್ಟರು. ಡಾ॥ ಕೆ.ಆರ್ ಗಣೇಶ್ ಮತ್ತು ಪ್ರೊ. ನಾ. ಗೀತಾಚಾರ್ಯ ಈ ಶಿಬಿರದ ನಿರ್ದೇಶಕರಾಗಿದ್ದರು. ಅತ್ಯಂತ ಯಶಸ್ವಿಯಾಗಿ ನಡೆದ ಈ ಶಿಬಿರವನ್ನು ಪ್ರತಿವರ್ಷ ನಿರಂತರವಾಗಿ ನಡೆಸಲು ಆಲೋಚಿಸಲಾಯಿತು.

## ಹಸ್ತಪ್ರತಿಶಾಸ್ತ್ರ ತರಗತಿಯ ಉದ್ಘಾಟನೆ

ಬೆಂಗಳೂರು ಡಿ. 13 - ಪ್ರಾಚೀನ ಓಲೆ ಗರಿ ಗ್ರಂಥಗಳನ್ನು ಸಂರಕ್ಷಿಸುವ, ಓದುವ ಮತ್ತು ಪ್ರತಿ ಮಾಡುವ ಕಲೆಯನ್ನು ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ ಕಲಿಸುತ್ತಿದ್ದು ಇದು ನಾಡಿನ ಸಂಸ್ಕೃತಿಯನ್ನು ಕಟ್ಟುವ ಕೆಲಸ ಆಗಿದೆ ಎಂದು ಮಾಜಿ ಸಚಿವ ವಿ.ಎಸ್. ಕೃಷ್ಣ ಅಯ್ಯರ್ ತಿಳಿಸಿದರು.

ಪ್ರತಿಷ್ಠಾನ ನಡೆಸುತ್ತಿರುವ ಹಸ್ತ ಪ್ರತಿಶಾಸ್ತ್ರ ತರಗತಿಯ ಹನ್ನೊಂದನೆ ತಂಡದ ತರಗತಿಗಳನ್ನು ಉದ್ಘಾಟಿಸಿ ಮಾತನಾಡುತ್ತಿದ್ದ ಅಯ್ಯರ್ ಅವರು ಪ್ರತಿಷ್ಠಾನ ನಿರ್ಮಿಸುತ್ತಿರುವ ಬಿ. ಎಂ. ಶ್ರೀ

ಕಲಾಭವನಕ್ಕೆ ಸಮಸ್ತ ಕನ್ನಡಿಗರೂ ಉದಾರವಾಗಿ ಧನ ಸಹಾಯ ಮಾಡಬೇಕೆಂದು ಕೇಳಿಕೊಂಡರು.

ಹಳೆಗನ್ನಡ ಕಾವ್ಯಾಭ್ಯಾಸ ಶಿಬಿರದ ಸಮಾರೋಪ ಭಾಷಣ ಮಾಡಿದ ಮಾಜಿ ಮೇಯರ್ ಜಿ. ನಾರಾಯಣ ಅವರು ಕಾವ್ಯಾಭ್ಯಾಸದ ಕಡೆಗೆ ಯುವ ಜನರ ಆಸಕ್ತಿಯನ್ನು ಹೊರಳಿಸಬೇಕಾದ ಅಗತ್ಯವನ್ನು ಒತ್ತಿ ಹೇಳಿ, ಪ್ರತಿಷ್ಠಾನದ ಕಾರ್ಯವನ್ನು ಶ್ಲಾಘಿಸಿದರು.

ಪ್ರತಿಷ್ಠಾನದ ಅಧ್ಯಕ್ಷ ಡಾ।। ಟಿ.ವಿ. ವೆಂಕಟಾಚಲ ಶಾಸ್ತ್ರೀ ಅಧ್ಯಕ್ಷತೆ ವಹಿಸಿದ್ದರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಜಂಟಿ ನಿರ್ದೇಶಕ ಕಾ.ತ. ಚಿಕ್ಕಣ್ಣ ಮಾತನಾಡಿದರು. ಪ್ರೊ. ಡಿ. ಲಿಂಗಯ್ಯ ಸ್ವಾಗತಿಸಿದರು. ಪ್ರೊ. ನಾ. ಗೀತಾಚಾರ್ಯ ಪ್ರಾಸ್ತಾವಿಕ ಭಾಷಣ ಮಾಡಿದರು. ಡಾ।। ಕೆ.ಆರ್. ಗಣೇಶ್ ಶಿಬಿರದ ವರದಿ ಓದಿದರು. ಪ್ರೊ. ಇಕ್ಬಾಲ್ ಅಹಮದ್ ವಂದನೆ ಸಲ್ಲಿಸಿದರು. (ಕೃಪೆ - ಸಂಯುಕ್ತ ಕರ್ನಾಟಕ 13-12-01)

### ಬಿ.ಎಂ.ಶ್ರೀ. ಕಲಾಭವನಕ್ಕೆ ವೀರೇಂದ್ರ ಹೆಗ್ಗಡೆ ಅವರಿಂದ ಲಕ್ಷ ರೂ. ದೇಣಿಗೆ

ಬೆಂಗಳೂರು ಡಿ. 13- ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ ನಿರ್ಮಿಸುತ್ತಿರುವ ಬಿ.ಎಂ.ಶ್ರೀ ಕಲಾಭವನದ ನಿರ್ಮಾಣ ಕಾರ್ಯಕ್ಕೆ ಧರ್ಮಸ್ಥಳದ ಶ್ರೀ ವೀರೇಂದ್ರ ಹೆಗ್ಗಡೆ ಅವರು ಒಂದು ಲಕ್ಷ ರೂ. ಗಳ ಧನ ಸಹಾಯವನ್ನು ನೀಡಿದ್ದಾರೆ.

ಬಿ.ಎಂ.ಶ್ರೀ ಕಲಾಭವನವು 35 ಲಕ್ಷ ರೂ. ಗಳ ಯೋಜನೆಯಾಗಿದ್ದು ಕನ್ನಡ ಆಚಾರ್ಯ ಪುರುಷ, ಕನ್ನಡ ಕಣ್ವ, ಹೊಸಗನ್ನಡ ಯುಗ ಪ್ರವರ್ತಕ ಬಿ.ಎಂ. ಶ್ರೀಕಂಠಯ್ಯ ನವರ ಸ್ಮಾರಕ ಭವನ ಈಗಾಗಲೇ 6 ಲಕ್ಷ ರೂ. ಗಳ ವೆಚ್ಚದಲ್ಲಿ ನೆಲಮಹಡಿ ಸಿದ್ಧವಾಗಿದ್ದು ಇದೀಗ ಸಭಾಂಗಣ ಕಾಮಗಾರಿ ನಡೆಯುತ್ತಿದೆ. ಇದಕ್ಕೆ ಸಂಸದರಾದ ಅನಂತಕುಮಾರ್ ಅವರು ನಾಲ್ಕು ಲಕ್ಷ ರೂ. ಗಳನ್ನು , ರಾಮಕೃಷ್ಣ ಹೆಗಡೆಯವರು ಎರಡು ಲಕ್ಷ ರೂ. ಗಳನ್ನು ನೀಡಿದ್ದಾರೆ. ಈ ಸಭಾಂಗಣ ನಿರ್ಮಾಣದ ಅಂದಾಜು ವೆಚ್ಚ ಹತ್ತು ಲಕ್ಷ ರೂ. ಗಳಾಗಿದ್ದು ಇನ್ನೂ ಮೂರು ನಾಲ್ಕು ಲಕ್ಷ ರೂ. ಗಳ ಕೊರತೆಯಿದೆ ಎಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಪ್ರಕಟಣೆ ತಿಳಿಸಿದೆ.

ಆಸಕ್ತರು ಅಭಿಮಾನಿಗಳು ರಾಜಧಾನಿಯಲ್ಲಿ ನಿರ್ಮಾಣವಾಗುತ್ತಿರುವ ಕಟ್ಟಡ- ಆಧುನಿಕ ಕನ್ನಡದ ಪ್ರಥಮಾಚಾರ್ಯರಾದ ಬಿ.ಎಂ. ಶ್ರೀಕಂಠಯ್ಯನವರ ಸ್ಮಾರಕ ಭವನ ನಿರ್ಮಾಣಕ್ಕೆ ಉದಾರವಾಗಿ ಧನಸಹಾಯ ನೀಡಿ ಸಹಕರಿಸಬೇಕಾಗಿ ಕೋರಿಕೆ. ದಾನಿಗಳು ತಮ್ಮ ದೇಣಿಗೆಗಳನ್ನು ಚೆಕ್/ಎಂ.ಓ. ಮೂಲಕ ಗೌರವ ಕಾರ್ಯದರ್ಶಿ ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ, ಬಿ.ಎಂ. ಶ್ರೀ ಕಲಾಭವನ, ನಾಲ್ಕನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು - 19 ದೂರವಾಣಿ 6615877, ಈ ವಿಳಾಸಕ್ಕೆ ಕಳುಹಿಸಬೇಕಾಗಿ ವಿನಂತಿ. ಪ್ರತಿಷ್ಠಾನಕ್ಕೆ ನೀಡುವ ದಾನಿಗಳಿಗೆ ತೆರಿಗೆ ವಿನಾಯಿತಿ ಇದೆ.

(ಕೃಪೆ - ಉದಯವಾಣಿ)

## ಸ್ವರಚಿತ ಕವನವಾಚನ ಕಾರ್ಯಕ್ರಮ

ಇದು ಸಹೃದಯಗೋಷ್ಠಿಯ ಕಾರ್ಯಕ್ರಮವಾಗಿ ಪ್ರತಿ ಎರಡು ತಿಂಗಳಿಗೊಮ್ಮೆ ನಡೆಯುತ್ತಿರುವ ಕಾರ್ಯಕ್ರಮ. ದಿನಾಂಕ 9-9-01 ರಂದು ಸಹೃದಯಗೋಷ್ಠಿ ಪುನರಾರಂಭವಾಗಿದ್ದು, ಇದರೊಂದಿಗೆ ಉಳಿದ ತಿಂಗಳುಗಳಲ್ಲಿ ಸ್ವರಚಿತ ಕವನ ವಾಚನವನ್ನು ನಡೆಸಲು ಸಂಚಾಲಕರಾದ ಶ್ರೀಮತಿ ಜಯಮ್ಮ ಕರಿಯಣ್ಣ ವ್ಯವಸ್ಥೆ ಮಾಡುತ್ತಾರೆ.

## ಬೆಳ್ಳೂರಿನ ಕಾರ್ಯಕ್ರಮಗಳು

### ಬೊಂಬೆ ಜೋಡಿಸುವ ಸ್ಪರ್ಧೆ

23-10-01ರಂದು ಬೊಂಬೆ ಜೋಡಿಸುವ ಸ್ಪರ್ಧೆಸಮಾರಂಭ ನಡೆಯಿತು. ಪತಂಜಲಿಯೋಗ ಶಿಕ್ಷಣ ಸಮಿತಿ ಪ್ರಗತಿ ಸ್ನೇಹವೃಂದದ ಸಹಯೋಗದಲ್ಲಿ ಇಡೀ ದಿನ ನಡೆದ ಈ ಕಾರ್ಯಕ್ರಮದಲ್ಲಿ ಜಯಾ ಚಪ್ಪರಮನಿ ಕೊಪ್ಪದ, ಹರೀಶ್ ಯು.ಕೆ. ರಾವ್ ಮತ್ತು ವಿಜಯಲಕ್ಷ್ಮಿ ಗುರುರಾಜ್, ಇವರುಗಳು ತೀರ್ಪುಗಾರರಾಗಿದ್ದರು. ಅನೇಕ ಮನೆಯವರು ಆಸಕ್ತಿಯಿಂದ ಭಾಗವಹಿಸಿದ್ದರು. ಸಂಜೆ ನಡೆದ ಬಹುಮಾನ ವಿತರಣೆಯ ಅಧ್ಯಕ್ಷತೆಯನ್ನು ಎಸ್. ಕೃಷ್ಣಮೂರ್ತಿ ವಹಿಸಿದ್ದರು. ಮುಖ್ಯಅತಿಥಿಗಳಾಗಿ ಡಾ|| ಎಸ್. ಶಾಂತ ಬೆಳ್ಳೂರು, ಪ್ರೊ. ನಾ. ಗೀತಾಚಾರ್ಯ ಬೆಂಗಳೂರು, ಐ. ಗಣೇಶ್ ಕುಮಾರ್ ಬೆಳ್ಳೂರು ಇವರು ಭಾಗವಹಿಸಿದ್ದರು. ಕಾರ್ಯದರ್ಶಿಗಳಾದ ಶ್ರೀ ಸೋಮಸುಂದರ ಮತ್ತು ಅವರ ತಂಡ ಕಾರ್ಯಕ್ರಮವನ್ನು ಅಚ್ಚುಕಟ್ಟಾಗಿ ವ್ಯವಸ್ಥೆಮಾಡಿತ್ತು.

### ಸ್ಥಾನಿಕ ಸಮಿತಿ ಸಭೆ

ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಜಿಯವರ ಅಧ್ಯಕ್ಷತೆಯಲ್ಲಿ ಶ್ರೀಮಠದಲ್ಲಿ ಆಚಾರ್ಯ ಬಿ.ಎಂ.ಶ್ರೀ. ಶತಮಾನಭವನದ ಸ್ಥಾನಿಕ ಸಮಿತಿ ಸಭೆ ನಡೆಯಿತು. ಹಲವು ಪ್ರಮುಖರು ಭಾಗವಹಿಸಿದ್ದ ಈ ಸಭೆಯಲ್ಲಿ ಭವನವನ್ನು ಸಕ್ರಿಯವಾಗಿಡಲು ಸ್ಥಳೀಯವಾಗಿ ನಿರಂತರ ಚುಟುವಟಿಕೆಗಳನ್ನು ನಡೆಸಲು ಮತ್ತು ಭವನದ ದುರಸ್ತಿಗಾಗಿ ಜಿಲ್ಲಾಡಳಿತವನ್ನು ಹಾಗೂ ಅಭಿವೃದ್ಧಿ ನಿಧಿಗಾಗಿ ಸರಕಾರವನ್ನು ಕೋರಲು ತೀರ್ಮಾನವಾಯಿತು.

## ದಾನಗಳು

### ಕಟ್ಟಡ ನಿಧಿಗೆ ದಾನ (ಸಭಾಂಗಣ ನಿರ್ಮಾಣಕ್ಕಾಗಿ)

| | | |
|---|---|---|
| 1. | ಶ್ರೀ ವೀರೇಂದ್ರ ಹೆಗಡೆ ಅವರು, ಧರ್ಮಸ್ಥಳ | 1,00,000.00 |
| 2. | ಶ್ರೀಮತಿ ಎ.ಎಸ್. ಜಯಮ್ಮ | 5,000.00 |
| 3. | ಶ್ರೀಮತಿ ಎಂ.ಎಸ್. ಪ್ರಭಾವತಿ | 1,000.00 |
| 4. | ಶ್ರೀಮತಿ ರತ್ನಾ ಮೂರ್ತಿ | 1,000.00 |
| 5. | ಶ್ರೀಮತಿ ರತ್ನಾಮೂರ್ತಿ ಇವರಿಂದ ಸಂಗ್ರಹ | 573.00 |

| | | |
|---|---|---|
| 6. | ಶ್ರೀ ಎಸ್.ಎಸ್.ಆರ್.ಕೆ. ಶರ್ಮ | 700.00 |
| 7. | ಶ್ರೀ ಹಣವಂತ ತಾಸಗಾಂವಕರ | 501.00 |
| 8. | ಶ್ರೀಮತಿ ಜಿ.ಡಿ. ಊರ್ಮಿಳಾ | 501.00 |
| 9. | ಶ್ರೀ ಎನ್.ಎಸ್. ರಾಮಸ್ವಾಮಿ ಅಯ್ಯರ್ | 250.00 |
| 10. | ಶ್ರೀ ಶಾಂಪೂರ್ ಗುರು | 300.00 |
| 11. | ಶ್ರೀಮತಿ ಜಿ. ಕಮಲಮ್ಮ | 100.00 |
| 12. | ಶ್ರೀ ಎಸ್.ಜಿ. ವಾಸುದೇವ ರಾವ್ | 100.00 |
| 13. | ಶ್ರೀ ಕೆ.ಎ. ಶ್ರೀಕಂಠಮೂರ್ತಿ | 50.00 |
| 14. | ಶ್ರೀ ಎಸ್. ಪ್ರಕಾಶ್, ಬೆಂಗಳೂರು | 50.00 |
| 15. | ಶ್ರೀ ವಿಷ್ಣು ಪ್ರಭಾಕರ್, ನವದೆಹಲಿ | 500.00 |
| 16. | ಎಚ್.ಪಿ. ಸೂರ್ಯನಾರಾಯಣ, ಬೆಂಗಳೂರು | 501.00 |
| 17. | ಕುಮಾರಿ ಲೀನಾ, ಬೆಂಗಳೂರು | 500.00 |
| 18. | ಶ್ರೀ ನಾಗರಾಜಯ್ಯ, ಬೆಂಗಳೂರು | 300.00 |

### ಪ್ರತಿಷ್ಠಾನಕ್ಕೆ ದಾನ

| | |
|---|---|
| ಪ್ರೊ. ಅ.ರಾ. ಮಿತ್ರ | 200.00 |
| ಡಾ|| ಎಂ. ಎಲ್. ಲಲಿತಮ್ಮ | 100.00 |
| ಶ್ರೀ ಶ್ರೀನಿವಾಸ ಮೂರ್ತಿ ಕೆ.ವಿ. | 100.00 |
| ಶ್ರೀ ದೇವರಕೊಂಡಾರೆಡ್ಡಿ | 100.00 |
| ಶ್ರೀ ಶಿವಸ್ವಾಮಿ, ಬೆಂಗಳೂರು | 100-00 |

## ದತ್ತಿ ದಾನಗಳು

೧. ರಾಘವ ಪ್ರಕಾಶನ ದತ್ತಿ :

ಸುಪ್ರೀಮ್ ಟೆಕ್ನಾಲಾಜೀಸ್ ಅವರು ಎಂ.ವಿ. ಸೀ. ಪದ್ಯಕ್ಕೆ ಗೌರವ ಧನವಾಗಿ 250.00 ರೂ ಗಳನ್ನೂ ಶ್ರೀ ಎಂ.ಎಸ್. ಭಾಸ್ಕರ್ ಅವರು 600.00 ರೂ ಗಳನ್ನೂ (ಎಂ.ವೀ.ಸೀ. ಅವರ ಕೃತಿಗಳಿಗೆ ಬಂದ ಗೌರವಧನ) ಎಂ.ವೀ.ಸೀ. ಕೃತಿಗಳ ಪ್ರಕಟಣೆಗಾಗಿ ಇರುವ ಈ ದತ್ತಿ ನಿಧಿಗೆ ನೀಡಿದ್ದಾರೆ.

೨. ಬಿ.ಎಂ.ಶ್ರೀ ದತ್ತಿನಿಧಿ :

ಕುವೆಂಪು ವಿಶ್ವವಿದ್ಯಾನಿಲಯದಿಂದ ಬಿ.ಎಂ.ಶ್ರೀ ಅವರ ಕೃತಿಗಾಗಿ ಬಂದ ಗೌರವ ಧನದ ಸಂಭಾವನೆಯಾದ 100.00 ರೂ. ಅನ್ನು ಆ ದತ್ತಿನಿಧಿಗೆ ಸೇರಿಸಲಾಗಿದೆ.

## ಗ್ರಂಥಾಲಯಕ್ಕೆ ದಾನ

ನಾ. ಜಗದೀಶ್, ಮುಳಬಾಗಿಲು ಅವರು ಗ್ರಂಥಾಲಯಕ್ಕೆ 500.00 ರೂ.ಗಳನ್ನು ದಾನವಾಗಿ ನೀಡಿದ್ದಾರೆ.

ಹತ್ತನೆ ತಂಡದ ಹಸ್ತಪ್ರತಿ ಶಾಸ್ತ್ರ ವಿದ್ಯಾರ್ಥಿಗಳು ಒಂದು ಪುಸ್ತಕ ಸ್ಟಾಂಡ್ ಅನ್ನೂ ಶ್ರೀ ಶ್ರೀ ಎಂ. ಮಲ್ಲೇಗೌಡ ಅವರು ಒಂದು ಪುಸ್ತಕ ಸ್ಟಾಂಡ್ ಹಾಗೂ ಹದಿನಾರು ಪ್ಲಾಸ್ಟಿಕ್ ಮೋಲ್ಡೆಡ್ ಚೇರ್‌ಗಳನ್ನೂ ದಾನವಾಗಿ ನೀಡಿದ್ದಾರೆ.

ಈ ಎಲ್ಲಾ ಮಾನ್ಯ ದಾನಿಗಳಿಗೂ ಪ್ರತಿಷ್ಠಾನ ಆಭಾರಿಯಾಗಿರುತ್ತದೆ.

## ಕಾರ್ಯಕ್ರಮಗಳು

### ಬಿ.ಎಂ.ಶ್ರೀ. ಮತ್ತು ಪಿ. ಕಾಳಿಂಗರಾವ್ ಸ್ಮಾರಕ ರಾಜ್ಯಮಟ್ಟದ ಸುಗಮ ಸಂಗೀತ ಸ್ಪರ್ಧೆ

ಕನ್ನಡದ ಜನಪದ ಮತ್ತು ಭಾವಗೀತೆಗಳನ್ನು ಹಾಡುವುದು ಇತ್ತೀಚಿನ ವಿದ್ಯಮಾನವಾಗಿ ಕಂಡು ಬರುತ್ತಿದ್ದರೂ ಇದಕ್ಕೊಂದು ಪರಂಪರೆಯೇ ಇದೆ. ಇದು ಸಾಹಿತ್ಯವನ್ನು ಸಮೂಹಕ್ಕೆ ಮುಟ್ಟಿಸುವ ಕ್ರಿಯೆಯಾಗಿ ಬಹಳ ಹಿಂದಿನ ಕಾಲದಿಂದಲೂ ನಡೆದು ಬರುತ್ತಿತ್ತು ಎಂದು ಪಂಪ ಪ್ರಶಸ್ತಿ ಪುರಸ್ಕೃತ ಸಮನ್ವಯ ಕವಿ ಡಾ॥ ಜಿ.ಎಸ್. ಶಿವರುದ್ರಪ್ಪ ಅಭಿಪ್ರಾಯ ಪಟ್ಟಿದ್ದಾರೆ.

ಇತ್ತೀಚೆಗೆ ನಗರದಲ್ಲಿ ಬಿ.ಎಂ.ಶ್ರೀ. ಪ್ರತಿಷ್ಠಾನ, ಕಾಳಿಂಗರಾಯರ ಬಳಗದ ಸಹಯೋಗದಲ್ಲಿ ಬಿ.ಎಂ.ಶ್ರೀ. ಜನ್ಮದಿನದ ಅಂಗವಾಗಿ ಏರ್ಪಡಿಸಿದ್ದ ಸುಗಮ ಸಂಗೀತ ಸ್ಪರ್ಧೆಯನ್ನು ಉದ್ಘಾಟಿಸಿ ಅವರು ಮಾತನಾಡುತ್ತಿದ್ದರು.

ಪ್ರಾಚೀನ ಕಾವ್ಯಗಳ ವಾಚನದಿಂದ ಆರಂಭಿಸಿ ದಾಸರ ಹಾಡುಗಳ ಶಾಸ್ತ್ರೀಯ ಸಂಗೀತದ ವರೆಗಿನ ಬೆಳವಣಿಗೆಯಂತೆಯೇ ಆಧುನಿಕ ಕವಿತೆಗಳನ್ನು ಹಾಡಲು ಸುಗಮ ಸಂಗೀತ ಪ್ರಕಾರ ಹುಟ್ಟಿಕೊಂಡಿದೆ ಎಂದು ಜಿ.ಎಸ್.ಎಸ್. ಹೇಳಿದರು.

ಬಿ.ಎಂ.ಶ್ರೀ. ಪ್ರತಿಷ್ಠಾನದಂಥ ಸಂಸ್ಥೆಯನ್ನು ಸ್ಥಾಪಿಸಿದ ಎಂ.ವಿ. ಸೀತಾರಾಮಯ್ಯ ಅವರ ಶ್ರಮ ಸಾರ್ಥ ಎಂದ ಅವರು ಇದು ಉತ್ತಮ ಕೆಲಸಗಳಲ್ಲಿ ತೊಡಗಿಕೊಳ್ಳಲಿ ಎಂದು ಹಾರೈಸಿದರು.

ಉದ್ಘಾಟನಾ ಸಮಾರಂಭದಲ್ಲಿ ಪ್ರತಿಷ್ಠಾನದ ಗೌರವಾಧ್ಯಕ್ಷ ನಿಟ್ಟೂರು ಶ್ರೀನಿವಾಸರಾವ್, ಬಿ. ನಾರಾಯಣಮ್ಮ ಉಪಸ್ಥಿತರಿದ್ದರು. ಸಂಶೋಧಕ ಡಾ॥ ಟಿ.ವಿ. ವೆಂಕಟಾಚಲ ಶಾಸ್ತ್ರೀ ಅಧ್ಯಕ್ಷತೆ ವಹಿಸಿದ್ದರು.

ಒಂದು ದಿನ ಪೂರ್ತಿ ಕಿರಿಯರ ಮತ್ತು ಹಿರಿಯರ ವಿಭಾಗಗಳಲ್ಲಿ ನಡೆದ ಸ್ಪರ್ಧೆಗಳಲ್ಲಿ ಚಿತ್ರದುರ್ಗ, ದಾವಣಗೆರೆ, ಮೈಸೂರು, ಮಾಗಡಿ ಮುಂತಾದ ಕಡೆಗಳ ನೂರಕ್ಕೂ ಹೆಚ್ಚು

ಸ್ಪರ್ಧಿಗಳು ಭಾಗವಹಿಸಿದ್ದರು. ಪುರಂದರ ಭರಣಿ, ನಾರಾಯಣರಾವ್ ಮಾನೆ, ರಮಾ ವಿಶ್ವನಾಥ್ ಮತ್ತು ಗಿರಿಜಾ ನಾರಾಯಣ್ ತೀರ್ಪುಗಾರರಾಗಿದ್ದರು.

ಅದೇ ದಿನ ಸಂಜೆ ಕನ್ನಡ ಮತ್ತು ಸಂಸ್ಕೃತಿ ಖಾತೆಯ ಸಚಿವೆ ರಾಣಿ ಸತೀಶ್ ಅವರು ವಿಜೇತ ಸ್ಪರ್ಧಿಗಳಿಗೆ ಬಹುಮಾನ ವಿತರಿಸಿದರು.

ಈ ಸಂದರ್ಭದಲ್ಲಿ ಮಾತನಾಡಿದ ಅವರು ಮಕ್ಕಳ ಪ್ರತಿಭೆಯನ್ನು ಪ್ರೋತ್ಸಾಹಿಸಲು ಬಿ.ಎಂ.ಶ್ರೀ. ಪ್ರತಿಷ್ಠಾನ ಮಾಡುತ್ತಿರುವ ಕೆಲಸಕ್ಕೆ ಸರ್ಕಾರದಿಂದ ಸಹಾಯ ಒದಗಿಸುವ ಭರವಸೆ ನೀಡಿದರು.

ಮುಖ್ಯ ಅತಿಥಿಯಾಗಿ ಎಂ.ಎನ್. ವ್ಯಾಸರಾವ್ ಸುಗಮ ಸಂಗೀತ ಕಲಾವಿದೆ ಬಿ.ಕೆ. ಸುಮಿತ್ರಾ ಭಾಗವಹಿಸಿದ್ದರು. ಡಿ. ಲಿಂಗಯ್ಯ ಸ್ವಾಗತಿಸಿದರು. ನಾ. ಗೀತಾಚಾರ್ಯ ವಂದಿಸಿದರು. ಜಯಾಪಾರ್ಥಸಾರಥಿ ಕಾರ್ಯಕ್ರಮ ನಿರೂಪಿಸಿದರು.

(ಕೃಪೆ - ಉದಯವಾಣಿ 10-1-02)

## ಯುವ ಕಾರ್ಯಕ್ರಮಕ್ಕೆ ಉಚಿತ ರಂಗಮಂದಿರ

ನೃತ್ಯದಲ್ಲಿ ರಂಗ ಪ್ರವೇಶಮಾಡುವ ಯುವ ಪ್ರತಿಭೆಗಳಿಗೆ ಮತ್ತು ಯಾವುದೇ ಯುವ ಕಾರ್ಯಕ್ರಮಕ್ಕೆ ನಯನಾ ರಂಗಮಂದಿರವನ್ನು ಉಚಿತವಾಗಿ ನೀಡಲು ಸರ್ಕಾರ ತೀರ್ಮಾನಿಸಿದೆ ಎಂದು ಕನ್ನಡ ಮತ್ತು ಸಂಸ್ಕೃತಿ ಸಚಿವೆ ರಾಣಿ ಸತೀಶ್ ಹೇಳಿದ್ದಾರೆ.

ಅವರು ಭಾನುವಾರ ಇಲ್ಲಿನ ಬಿ.ಎಂ.ಶ್ರೀ. ಭವನದಲ್ಲಿ ಬಿ.ಎಂ.ಶ್ರೀ. ಪ್ರತಿಷ್ಠಾನ ಕಾಳಿಂಗರಾವ್ ಬಳಗದ ಸಹಕಾರದೊಂದಿಗೆ ಹಮ್ಮಿಕೊಂಡಿದ್ದ ಬಿ.ಎಂ.ಶ್ರೀ. 118ನೇ ಜನ್ಮ ದಿನಾಚರಣೆಯ ಸಮಾರೋಪ ಸಮಾರಂಭದಲ್ಲಿ ಮಾತನಾಡುತ್ತಿದ್ದರು.

ನೃತ್ಯದಲ್ಲಿ ರಂಗ ಪ್ರವೇಶ ಮಾಡುವವರಿಗೆ ನಯನವನ್ನು ಯಾವುದೇ ದಿನದಲ್ಲಿ ಉಚಿತವಾಗಿ ಒದಗಿಸಲು ಹಾಗೂ ಯುವ ಕಾರ್ಯಕ್ರಮಗಳಿಗೆ ಪ್ರತಿ ಬುಧವಾರ ಉಚಿತವಾಗಿ ನೀಡಲು ತೀರ್ಮಾನ ತೆಗೆದುಕೊಂಡಿದ್ದೇವೆ. ರಾಜ್ಯ ಸರ್ಕಾರ ಬಾಲ ಪ್ರತಿಭೆ ಮತ್ತು ಯುವ ಪ್ರತಿಭೆ ಹೆಸರಿನಲ್ಲಿ ಪ್ರಶಸ್ತಿಗಳನ್ನು ಜಾರಿಗೆ ತರುವ ಮೂಲಕ ಯುವ ಕಲಾವಿದರಿಗೆ ಉತ್ತೇಜನ ನೀಡಲು ಬದ್ಧವಾಗಿದೆ ಎಂಬುದನ್ನು ತೋರಿಸಿಕೊಟ್ಟಿದೆ ಎಂದು ಅವರು ಹೇಳಿದರು.

ಬಿ.ಎಂ.ಶ್ರೀ. ಅವರು ಹೊಸಗನ್ನಡದ ಯುಗಪುರುಷರು, ಹೊಸಗನ್ನಡ ಸಾಹಿತ್ಯಕ್ಕೆ ಅವರ ಕೊಡುಗೆ ಅಪಾರ. ಈ ಸಾಹಿತ್ಯ ಪ್ರಕಾರದ ಜೊತೆಗೆ ಬೆಳೆದು ಬಂದದ್ದು ಸುಗಮ ಸಾಹಿತ್ಯ. ಇದನ್ನು ಜನಪ್ರಿಯಗೊಳಿಸಿದವರು ಕಾಳಿಂಗರಾವ್. ಆದ್ದರಿಂದ ಈ ಇಬ್ಬರ ಹೆಸರಿನಲ್ಲಿ ನಡೆಯುತ್ತಿರುವ ಕಾರ್ಯಕ್ರಮ ಬಹಳ ಅರ್ಥಪೂರ್ಣವಾಗಿದೆ ಎಂದರು.

## ಬಿ.ಎಂ.ಶ್ರೀ. ಪ್ರತಿಮೆಗೆ ಮಾಲಾರ್ಪಣೆ

ಬಿ.ಎಂ.ಶ್ರೀ. ಜನ್ಮ ದಿನಾಚರಣೆಯ ಕಾರ್ಯಕ್ರಮದಲ್ಲಿ ಬಸವನಗುಡಿಯಲ್ಲಿರುವ ಬಿ.ಎಂ.ಶ್ರೀ. ಪ್ರತಿಮೆಗೆ ಮಾಲಾರ್ಪಣೆ ಮಾಡಲಾಯಿತು. ಈ ಸರಳ ಸಮಾರಂಭಕ್ಕೆ ಗಾಂಧಿವಾದಿಗಳಾದ ಎಚ್.ಎಸ್. ದೊರೆಸ್ವಾಮಿ ಮತ್ತು ನಿಟ್ಟೂರು ಶ್ರೀನಿವಾಸರಾವ್ ಮುಂತಾದ ಹಲವು ಗಣ್ಯರು ಆಗಮಿಸಿದ್ದರು. ಇದೇ ದಿನ ಸಂಜೆ ಬಿ.ಎಂ.ಶ್ರೀ. ಯವರ ಹುಟ್ಟೂರಾದ ಬೆಳ್ಳೂರಿನಲ್ಲಿರುವ ಬಿ.ಎಂ.ಶ್ರೀ. ಶತಮಾನಭವನದಲ್ಲೂ ಜನ್ಮದಿನದ ವಿವಿಧ ಕಾರ್ಯಕ್ರಮಗಳು ನಡೆದವು.

(ಕೃಪೆ - ಜನವಾಹಿನಿ 9-1-02)

## ಸೇಡಿಯಾಪು ಸಾಹಿತ್ಯ ಸೇವೆ ಸ್ಮರಣೆ

ಸೇಡಿಯಾಪು ಕೃಷ್ಣಭಟ್ಟರು ಪಂಡಿತರಲ್ಲಿ ಅನರ್ಘ್ಯ ರತ್ನ. ದಕ್ಷಿಣ ಕನ್ನಡ ಜಿಲ್ಲೆಯ ಉದ್ದಾಮ ಸಾಹಿತಿಗಳಲ್ಲಿ ಪ್ರಮುಖರು ಎಂದು ಪ್ರೊ. ಟಿ.ವಿ. ವೆಂಕಟಾಚಲ ಶಾಸ್ತ್ರಿ ಹೇಳಿದ್ದಾರೆ.

ಹದವಾದ ಹೊಸಗನ್ನಡ ಗದ್ಯ ಬರೆದ ಸೇಡಿಯಾಪು ಹಳಗನ್ನಡ ಸಾಹಿತ್ಯದಲ್ಲಿ ಅಪಾರ ಜ್ಞಾನ ಹೊಂದಿದವರು. ಅವರ ವಿಷಯ ಪ್ರತಿಪಾದನೆ, ಅಪಾರ ಪರಿಶ್ರಮ ಅನನ್ಯ. ಅವರ ತರ್ಕಶಾಸ್ತ್ರ ಹಾಗೂ ವಾಕ್ಯಶುದ್ಧಿ ಬೇರೆಯವರಲ್ಲಿ ಕಾಣುವುದು ದುರ್ಲಭ ಎಂದು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ ಸಭಾಂಗಣದಲ್ಲಿ ಏರ್ಪಡಿಸಿದ್ದ ಸೇಡಿಯಾಪು ಕೃಷ್ಣಭಟ್ಟರ ಜನ್ಮ ಶತಮಾನೋತ್ಸವ ಸಮಾರಂಭದಲ್ಲಿ ಭಾಗವಹಿಸಿ ಹೇಳಿದರು.

ಏಕಕಾಲದಲ್ಲಿ ಮೂಡುತ್ತಿದ್ದ ಪ್ರತಿಭಾ ವ್ಯಕ್ತಿತ್ವಗಳು ಮಿಲನಗೊಂಡಿರುವುದು ಅಪೂರ್ವ ಅನುಭವ. ಸೇಡಿಯಾಪು ಅವರ ಪರಿಭಾಷೆ ಅರ್ಥವಾಗಬೇಕಾದರೆ ಪೂರ್ವತಯಾರಿ ಅಗತ್ಯ. ಇಲ್ಲದಿದ್ದಲ್ಲಿ ಅವರ ವಾದ ವೈಖರಿ ಅರ್ಥ ಮಾಡಿಕೊಳ್ಳುವುದು ಕಷ್ಟ ಎಂದು ತಿಳಿಸಿದರು.

ನಿಘಂಟು ರಚನೆ ಕಾಲದಲ್ಲಿ ಸೇಡಿಯಾಪು ಅವರ ಪಾಂಡಿತ್ಯಪೂರ್ಣ ಲೇಖನಗಳು ಬಹಳ ಸಹಕಾರಿಯಾಗಿವೆ. ಅವರ ವಾದಸರಣಿ ಒಪ್ಪುವಂತಹದು. 'ನೆತ್ತಮನಾಡಿ ಭಾನುಮತಿ ಸೋಲ್ತೊಡೆ' ಪದ್ಯಕ್ಕೆ ಅವರು ನೀಡಿರುವ ವಿವರಣೆ ಇಂದಿಗೂ ವಿಚಾರ ವಿಮರ್ಶೆಗೆ ಯೋಗ್ಯ ಎಂದು ಹೇಳಿದರು.

ಪ್ರಸಿದ್ಧ ಭಾಷಾಶಾಸ್ತ್ರಜ್ಞ ಪ್ರೊ. ಜಿ. ವೆಂಕಟಸುಬ್ಬಯ್ಯ ಅಧ್ಯಕ್ಷತೆ ವಹಿಸಿದ್ದರು. ಶತಮಾನೋತ್ಸವದ ಕಾರ್ಯದರ್ಶಿ ಕಾರ್ಕಳದ ಪ್ರೊ. ಎಂ. ರಾಮಚಂದ್ರ ಹಾಗೂ ಶತಾವಧಾನಿ ಆರ್. ಗಣೇಶ್ ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಸೇಡಿಯಾಪು ಅವರ ವ್ಯಕ್ತಿತ್ವ ಮತ್ತು ಸೃಜನಶೀಲ ಕೃತಿಗಳನ್ನು ಹಾಗೂ ಶಾಸ್ತ್ರಸಾಹಿತ್ಯವನ್ನು ಕುರಿತು ಮಾತನಾಡಿದರು. ಆರಂಭದಲ್ಲಿ ಅಧ್ಯಕ್ಷ ಡಾ. ಎಚ್.ಕೆ. ರಂಗನಾಥ್ ಸ್ವಾಗತಿಸಿದರು. ಎಂ.ವಿ. ವೆಂಕಟೇಶ್ ಮೂರ್ತಿ ಪ್ರಾಸ್ತಾವಿಕ ಮಾತುಗಳನ್ನಾಡಿದರು. ಪ್ರತಿಷ್ಠಾನದ ಗೌ|| ಕಾರ್ಯದರ್ಶಿ ಪ್ರೊ. ನಾ. ಗೀತಾಚಾರ್ಯ ವಂದನಾರ್ಪಣೆ ಮಾಡಿದರು.

(ಕೃಪೆ - ವಿಜಯ ಕರ್ನಾಟಕ 28-1-02)

## ಗಣೇಶ್ ಪಿ. ನಾಡೋರರವರಿಗೆ ಸಾವಿತ್ರಮ್ಮ ದತ್ತಿ ಮಕ್ಕಳ ಸಾಹಿತ್ಯ ಪ್ರಶಸ್ತಿ ಪ್ರದಾನ

ಬೆಂಗಳೂರು ಡಿ. 15- ಬಿ.ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ ನೀಡುವ ಸಾವಿತ್ರಮ್ಮ ದತ್ತಿ ಮಕ್ಕಳ ಸಾಹಿತ್ಯ ಪ್ರಶಸ್ತಿಯನ್ನು 2001ನೇ ಸಾಲಿಗೆ ಕರಾವಳಿ ಮುಂಜಾವು ಪತ್ರಿಕೆಯ ಉಪಸಂಪಾದಕ ಹಾಗೂ ಮಕ್ಕಳ ಸಾಹಿತ್ಯ ಲೇಖಕರಾದ ಗಣೇಶ್ ಪಿ. ನಾಡೋರರವರಿಗೆ ಇತ್ತೀಚಿಗೆ ಬೆಂಗಳೂರಿನ ಬಿ.ಎಂ. ಶ್ರೀ. ಪ್ರತಿಷ್ಠಾನದ ಸ್ವಂತ ಕಟ್ಟಡ ಬಿ.ಎಂ. ಶ್ರೀ. ಕಲಾಭವನದಲ್ಲಿ ಹಿರಿಯ ಸಾಹಿತಿಗಳೂ, ಜನಪದ ಸಾಹಿತ್ಯ ತಜ್ಞರೂ ಪ್ರತಿಷ್ಠಾನದ ವ್ಯವಸ್ಥಾಪಕ ಕಾರ್ಯದರ್ಶಿಗಳೂ ಆದ ಪ್ರೊ. ಡಿ. ಲಿಂಗಯ್ಯ ಅವರು ಪ್ರದಾನ ಮಾಡುತ್ತಾ, ನಾಡೋರ ಅವರ 'ಪ್ರಾಣಿಗಳ್ಳರು ಮತ್ತು ಮಯೂರ' ಎಂಬ ಕೃತಿಗೆ ಸ್ಪರ್ಧೆಗಾಗಿ ಬಂದಿದ್ದ 67 ಪುಸ್ತಕಗಳಲ್ಲಿ ಅತ್ಯುತ್ತಮವಾದದ್ದೆಂದೂ ಸ್ವಂತ ಕಲ್ಪನೆಯಿಂದ ಮಕ್ಕಳ ಮನಸ್ಸಿಗೆ ಮುಟ್ಟುವಂತೆ ವಿಶಿಷ್ಟವಾಗಿ ಬರೆದಿರುವ ಮಕ್ಕಳ ಪುಸ್ತಕವೆಂದು ತೀರ್ಪುಗಾರರಾದ ಡಾ.ನ. ಸುಬ್ರಹ್ಮಣ್ಯ, ಶ್ರೀಮತಿ ಇಂದಿರಾ ಹೆಗಡೆ ಮತ್ತು ರಮಾದೇವಮ್ಮ ಅವರು ಒಮ್ಮತದಿಂದ ಆಯ್ಕೆ ಮಾಡಿದ್ದಾರೆಂದು ಹೇಳಿದರು.

ಈ ಪ್ರಶಸ್ತಿಯನ್ನು ಪ್ರತಿಷ್ಠಾನದ ಸಂಸ್ಥಾಪಕರೂ, ನಾಡಿನ ಖ್ಯಾತ ವಿದ್ವಾಂಸರೂ ಆಗಿದ್ದ ಪ್ರೊ. ಎಂ.ವಿ. ಸೀತಾರಾಮಯ್ಯನವರು ತಮ್ಮ ಶ್ರೀಮತಿಯವರ ಹೆಸರಿನಲ್ಲಿ ಸ್ಥಾಪಿಸಿದ್ದಾರೆ. ಒಂದು ವರ್ಷ ಮಕ್ಕಳಸಾಹಿತ್ಯಕ್ಕೂ ಮತ್ತೊಂದು ವರ್ಷ ಮಹಿಳಾ ಸೃಜನೇತರ ಸಾಹಿತ್ಯಕ್ಕೂ 1000-00 ರೂ. ಗಳ ನಗದು ಬಹುಮಾನ ನೀಡುವ ಮೂಲಕ ಈ ಎರಡೂ ಸಾಹಿತ್ಯ ಪ್ರಕಾರದಲ್ಲಿ ಉತ್ತಮ ಸಾಹಿತ್ಯ ನಿರ್ಮಾಣಕ್ಕೂ ಪ್ರೇರಕರಾಗಿದ್ದಾರೆ ಎಂದು ಗೌರವ ಕಾರ್ಯದರ್ಶಿ ಪ್ರೊ. ನಾ, ಗೀತಾಚಾರ್ಯ ಅವರು ಪ್ರಾಸ್ತಾವಿಕ ಮಾತುಗಳನ್ನಾಡುತ್ತ ತಿಳಿಸಿದರು.

**ರಾಸ ಸಾಹಿತ್ಯ ವಿಮರ್ಶಾ ಬಹುಮಾನ** – ಇದರೊಂದಿಗೆ ಖ್ಯಾತ ಐತಿಹಾಸಿಕ ಕಾದಂಬರಿಕಾರರಾಗಿದ್ದ ಸಮೇತನಹಳ್ಳಿ ರಾಮರಾವ್ ಅವರು ಸ್ಥಾಪಿಸಿರುವ ರಾಸ ಸಾಹಿತ್ಯ ದತ್ತಿ ವಿಮರ್ಶಾ ಸ್ಪರ್ಧೆಯಲ್ಲಿ 2001ನೇ ಸಾಲಿನ 500 ರೂ. ಗಳ ನಗದು ಬಹುಮಾನವನ್ನು ಸಮೇತನಹಳ್ಳಿ ರಾಮರಾಯರ ಸಾಹಿತ್ಯ ಕುರಿತ ವಿಮರ್ಶೆಗಾಗಿ ಕೆ.ಜಿ. ಶ್ರೀಕಂಠದಾನಿ ಅವರಿಗೂ ನೀಡಲಾಯಿತು. ಶ್ರೀಮತಿ ಸಂಧ್ಯಾರಾಮಚಂದ್ರ ಮತ್ತು ಸತ್ಯನಾರಾಯಣ ತೀರ್ಪುಗಾರರಾಗಿದ್ದರು.

**ಆದಿಪುರಾಣದಲ್ಲಿ ಧಾರ್ಮಿಕ ನೆಲೆಗಳು** – ಇದೇ ದಿನ ಪ್ರಸಿದ್ಧ ಜೈನಶಾಸ್ತ್ರ ವಿದ್ವಾಂಸರಾಗಿದ್ದ ಡಾ. ಆ.ನೆ. ಉಪಾಧ್ಯೆ ಅವರ ಹೆಸರಿನಲ್ಲಿ ಪತ್ರಕರ್ತ ಡಿ. ಕಟ್ಟೆ ನಾಗರಾಜ್ ಮತ್ತು ಎಸ್.ಬಿ. ವಸಂತರಾಜಯ್ಯ ಅವರು ಪ್ರತಿಷ್ಠಾನದಲ್ಲಿ ಸ್ಥಾಪಿಸಿರುವ ದತ್ತಿನಿಧಿಯ ಮೂಲಕ ಮೈಸೂರಿನ ರೀಜನಲ್ ಕಾಲೇಜಿನ ಉಪನ್ಯಾಸಕರಾದ ಡಾ. ಸರಸ್ವತಿ ಅವರು ಆದಿ ಪುರಾಣದಲ್ಲಿ ಪಂಪ ಪ್ರದರ್ಶಿಸಿರುವ ಧಾರ್ಮಿಕ ವಿಚಾರಗಳನ್ನು ಕುರಿತು ವಿಮರ್ಶಾತ್ಮಕವಾಗಿ ವಿವರಿಸಿದರು. ಮನೋಜ ಅವರಿಂದ ಪ್ರಾರ್ಥನೆ ಮತ್ತು ಸತ್ಯನಾರಾಯಣ ಅವರಿಂದ

ವಂದನಾರ್ಪಣೆಯಾಯಿತು. ಕಾರ್ಯಕ್ರಮ ಅತ್ಯಂತ ಸರಳವಾಗಿ ಸುಂದರವಾಗಿ ಅರ್ಥಪೂರ್ಣವಾಗಿ ನಡೆಯಿತು.

(ಕೃಪೆ - ಕರಾವಳಿ ಮುಂಜಾವು, ಕಾರವಾರ 16-2-02)

## ಉತ್ತಮ ಶಿಕ್ಷಣ ಸಂಸ್ಥೆಗಳೇ ಆಧುನಿಕ ದೇವಾಲಯಗಳು

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ 'ಸಿರಿಕಂಟ' ವಿದ್ಯಾರ್ಥಿಗೋಷ್ಠಿಯು ಪ್ರಾಚೀನ ಸಾಹಿತ್ಯ ಮತ್ತು ಸಂಸ್ಕೃತಿಯ ಸಂರಕ್ಷಣೆ ಮತ್ತು ಜಾಗೃತಿಗಾಗಿ ಪ್ರತಿಷ್ಠಾನ ನಡೆಸುತ್ತಿರುವ ಎರಡು ಅಪರೂಪದ ಮತ್ತು ವಿಶೇಷ ತರಗತಿಗಳಾದ 'ಹಸ್ತಪ್ರತಿಶಾಸ್ತ್ರ ತರಗತಿ' ಹಾಗೂ 'ಹಳಗನ್ನಡ ಕಾವ್ಯಾಭ್ಯಾಸ ಶಿಬಿರ' ಗಳ ಸಮಾರೋಪ ಕಾರ್ಯಕ್ರಮದಲ್ಲಿ ದಿನಾಂಕ 6-5-02 ರಂದು ಭಾಗವಹಿಸಿದ್ದ ಉನ್ನತ ಶಿಕ್ಷಣದಲ್ಲಿ ದೇಶದಲ್ಲೇ ನಂ.1 ಆಗಿರುವ ಪಿ.ಇ.ಎಸ್. ಸಂಸ್ಥೆಯ ಸಂಸ್ಥಾಪಕರೂ ಪ್ರಸಿದ್ಧ ಶಿಕ್ಷಣ ತಜ್ಞರೂ ಆದ ಪ್ರೊ. ಎಂ.ಆರ್. ದೊರೆಸ್ವಾಮಿ ಅವರು ಸಮಾರೋಪ ಭಾಷಣ ಮಾಡುತ್ತಾ ಹಳಗನ್ನಡ ಕಾವ್ಯಾಭ್ಯಾಸ ಮತ್ತು ಅಪರೂಪದ ಹಸ್ತಪ್ರತಿಶಾಸ್ತ್ರ ತರಗತಿಯನ್ನು 1990 ರಿಂದಲೂ ನಡೆಸುತ್ತಿರುವುದೂ ಅಭಿನಂದನೀಯವಾಗಿದೆ. ಇದು ಕರ್ನಾಟಕದಲ್ಲೇ ಹಾಗೂ ವಿಶೇಷವಾಗಿದ್ದು ಪ್ರಪ್ರಥಮವಾದದ್ದು ಎಂದು ಶ್ಲಾಘಿಸಿದರು. ನಾಡಿನ ಅಮೂಲ್ಯ ಆಸ್ತಿಯೂ ಸಾಹಿತ್ಯ ಸಂಸ್ಕೃತಿಯ ಮೂಲ ಆಕರವೂ ಆದ ಪ್ರಾಚೀನ ಓಲೆಗರಿ - ಕಾಗದದ ಹಸ್ತಪ್ರತಿಗಳ ಸಂಗ್ರಹ - ಸಂರಕ್ಷಣೆ - ಓದುವುದು - ಪ್ರತಿಮಾಡುವುದು, ದಾಖಲೀಕರಣ ಮತ್ತು ಸಂಪಾದನೆಯಲ್ಲಿ ಪ್ರಾಥಮಿಕ ತರಬೇತಿಯನ್ನು ಆಸಕ್ತರಿಗೆ ನೀಡುತ್ತಾ ಆ ಮೂಲಕ ಸಮಾಜದಲ್ಲಿ ಜಾಗೃತಿ ಮೂಡಿಸುತ್ತಿರುವುದು; ಮುಂದಿನ ಪೀಳಿಗೆಗೆ ಆಸಕ್ತಿ ಮೂಡಿಸುತ್ತಿರುವುದು ವಿಶೇಷ ಪ್ರಶಿಕ್ಷಣವಾಗಿದೆ ಎಂದು ಹೇಳಿದರು. ಈ ಅಪೂರ್ವ ಶಿಕ್ಷಣ ಸಂಸ್ಥೆಗೆ ಉದಾರವಾದ ಸಹಾಯ ಹಸ್ತ ನೀಡುವುದಾಗಿ ಹಿಂದೆ ಘೋಷಿಸಿದ್ದುದನ್ನು ಪುನರುಚ್ಚರಿಸುತ್ತಾ ಇಂತಹ ಶಿಕ್ಷಣ ಸಂಸ್ಥೆಗಳೇ ಆಧುನಿಕ ದೇವಾಲಯಗಳು ಎನ್ನುತ್ತಾ ಅರ್ಹತಾ ಪತ್ರಗಳನ್ನೂ ವಿತರಿಸಿದರು.

## ಜನತೆಯನ್ನು ಮುಟ್ಟಿರುವ ಜ್ಞಾನಕೇಂದ್ರ

ಈ ತರಗತಿಗೆ ಹತ್ತು ವರ್ಷ ತುಂಬಿದ ಸಂದರ್ಭದಲ್ಲಿ ಹಸ್ತಪ್ರತಿ ವಿದ್ಯಾರ್ಥಿಗಳೆಲ್ಲ ಸೇರಿ ರೂಪಿಸಿಕೊಂಡಿರುವ 'ಸಿರಿಕಂಟ' ಗೋಷ್ಠಿಯು ಹಳಗನ್ನಡ ಕಾವ್ಯಗಳನ್ನು ಸ್ವತಃ ಓದಿ ಅರ್ಥೈಸುವ, ಅನುವಾದಿಸುವ ಆತ್ಮವಿಶ್ವಾಸ ಬೆಳೆಸುವ 'ಹಳಗನ್ನಡ ಕಾವ್ಯಾಭ್ಯಾಸ ಶಿಬಿರ' ವನ್ನು ಕಳೆದ ವರ್ಷದಿಂದ ಆರಂಭಿಸಿದೆ. ಎರಡನೇ ತಂಡದ ಶಿಬಿರಕ್ಕಾಗಿ ಹತ್ತು ಸಾವಿರ ರೂ.ಗಳ ಅನುದಾನವನ್ನು ನೀಡಿರುವ ಖ್ಯಾತ ಶಿಕ್ಷಣ ತಜ್ಞರೂ, ಧರ್ಮದರ್ಶಿಗಳೂ ಆದ ಪ್ರೊ. ಎ.ಎಚ್. ರಾಮರಾವ್ ಅವರು ಪ್ರತಿಷ್ಠಾನದ 23ನೇ ವರ್ಷದ ಸಂಸ್ಥಾಪನಾ ದಿನದ ಸಮಾರಂಭದ ಉದ್ಘಾಟನೆಯನ್ನೂ ಮಾಡುತ್ತಾ ಬಿ.ಎಂ.ಶ್ರೀ. ಪ್ರತಿಷ್ಠಾನ ನಾಡಿನ ಪ್ರಾಚೀನ

ಸಂಸ್ಕೃತಿಯ ಸಮರ್ಥ ವಾಹಕವಾಗಿದೆ. ವಿಶಿಷ್ಟ ರೀತಿಯಲ್ಲಿ ಸಂಸ್ಕೃತಿಯನ್ನು ಸಂರಕ್ಷಿಸುತ್ತಿರುವ ವಿಶೇಷ ಸೇವಾ ಸಂಸ್ಥೆಯಾಗಿದೆ ಎಂದರು. ಜನತೆಯನ್ನು ಮುಟ್ಟಿರುವ ಜ್ಞಾನಕೇಂದ್ರವಾಗಿ ಸಾರ್ಥಕ ಕೆಲಸ ಮಾಡುತ್ತಿದೆ ಎಂದರು.

### ನಾ. ಗೀತಾಚಾರ್ಯರ 'ಹಸ್ತಪ್ರತಿಶಾಸ್ತ್ರ ವಿವೇಚನೆ' ಕೃತಿ ಬಿಡುಗಡೆ

ಇದೇ ಸಂದರ್ಭದಲ್ಲಿ ಸ್ನೇಹನಿಧಿ ಬಳಗ ಪ್ರಕಟಿಸಿರುವ ಹಸ್ತಪ್ರತಿಶಾಸ್ತ್ರ ತರಗತಿ ನಿರ್ದೇಶಕರೂ ಕನ್ನಡ ಪ್ರಾಧ್ಯಾಪಕರೂ ಆದ ಪ್ರೊ. ನಾ.ಗೀತಾಚಾರ್ಯ ಅವರ 'ಹಸ್ತಪ್ರತಿಶಾಸ್ತ್ರ ವಿವೇಚನೆ' ಪುಸ್ತಕದ ಬಿಡುಗಡೆಯನ್ನು ನಿವೃತ್ತ ಕನ್ನಡ ಪ್ರಾಧ್ಯಾಪಕರೂ ಸಾಹಿತಿಗಳೂ ಆದ ಡಾ. ಎಂ.ಎಲ್. ಲಲಿತಮ್ಮ ಅವರು ಮಾಡುತ್ತಾ 'ಗೀತಾಚಾರ್ಯರು ಪ್ರತಿಷ್ಠಾನಕ್ಕೆ ಈವರೆಗೆ ಮಾಡಿರುವ ಸೇವೆಯ ಶ್ರಮ ಈ ಕೃತಿಯಲ್ಲಿ ಫಲವಾಗಿ ಹೊರಹೊಮ್ಮಿದೆ ಎಂದರು. ಗುರುಗಳೂ ಸಂಸ್ಥಾಪಕರೂ ಆದ ಪ್ರೊ. ಎಂ.ವಿ. ಸೀತಾರಾಮಯ್ಯನವರ ಕೈ ಹಿಡಿದು ನಡೆಸುತ್ತಿದ್ದು ಅವರು ಈಗಲೂ ಸಂಸ್ಥೆಯನ್ನು ಹಾಗೇ ನಡೆಸುತ್ತಿದ್ದಾರೆ. ಗೀತಾಚಾರ್ಯರು ಒಬ್ಬ ಸಂಶೋಧಕರೂ ಆಗಿದ್ದಾರೆ ಎಂಬುದನ್ನು ಈ ಕೃತಿಯ ಮೂಲಕ ಸಾಬೀತು ಪಡಿಸಿದ್ದಾರೆ. ಗ್ರಂಥಸಂಪಾದನೆಯಿಂದ ಮುಂದಕ್ಕೆ ಬೆಳೆದ ನೂತನ ಪ್ರಶಿಕ್ಷಣವನ್ನು ಇಲ್ಲಿ ಶಿಸ್ತುಬದ್ಧಗೊಳಿಸಿದ್ದಾರೆ. ಡಾ. ಟಿ.ವಿ. ವೆಂಕಟಾಚಲಶಾಸ್ತ್ರಿ ಅವರು ತಮ್ಮ ವಿದ್ವತ್ತಿಗೆ ದ್ಯೋತಕವಾಗಿ ಸುದೀರ್ಘವಾದ ಭೂಮಿಕೆಯನ್ನು ಬರೆದಿದ್ದು ಈ ಗ್ರಂಥಕ್ಕೆ ಶೋಭೆ ತಂದಿದೆ' ಎಂದರು.

### ಪಾಂಡಿತ್ಯ ಸಂವರ್ಧನೆಗೆ ಪ್ರಾಜ್ಞರ ನೆರವು ಬೇಕು

ಶಿಕ್ಷಣವೇತ್ತರ ದಾನಿಗಳ, ಅಭಿಮಾನಿಗಳ ನೆರವನ್ನು ಅಪೇಕ್ಷಿಸಿದ ಪ್ರತಿಷ್ಠಾನದ ಅಧ್ಯಕ್ಷರೂ, ಶ್ರೇಷ್ಠ ಸಂಶೋಧಕರೂ ಆದ ಡಾ. ಟಿ.ವಿ. ವೆಂಕಟಾಚಲಶಾಸ್ತ್ರಿ ಅವರ ಅಧ್ಯಕ್ಷತೆಯಲ್ಲಿ ಈ ಸಮಾರಂಭ ಬಿ.ಎಂ.ಶ್ರೀ. ಕಲಾಭವನದಲ್ಲಿ ನಡೆಯಿತು. ಈಗಾಗಲೇ 25 ಸಾವಿರ ರೂ.ಗಳನ್ನು ನೀಡಿರುವ ಪ್ರೊ. ರಾಮರಾವ್ ಅವರನ್ನು, ಉದಾರವಾಗಿ ಸಹಾಯ ಮಾಡುವ ಭರವಸೆ ನೀಡಿರುವ ಪ್ರೊ. ದೊರೆಸ್ವಾಮಿ ಅವರನ್ನು ಅಭಿನಂದಿಸಿದರು. ಸುಗಮ ಸಂಗೀತ ಕಲಾವಿದರಾದ ಶ್ರೀಮತಿ ಜಯಾಪಾರ್ಥಸಾರಥಿ ಅವರು ಬಿ.ಎಂ.ಶ್ರೀ. ಮತ್ತು ಎಂ.ವಿ.ಸೀ. ಗೀತೆಗಳ ಗಾಯನ ಮಾಡಿದರು. ಪ್ರೊ. ನಾ. ಗೀತಾಚಾರ್ಯ ಪ್ರಾಸ್ತಾವಿಕ ಮಾತನಾಡಿದರು. ಡಾ. ಕೆ. ಆರ್. ಗಣೇಶ್ ಶಿಬಿರನ್ನು ಕುರಿತು ಮಾತನಾಡಿದರು. ವಿದ್ಯಾರ್ಥಿಗಳಾದ ಶ್ರೀಮತಿ ಕವಿತ ಮತ್ತು ಶ್ರೀ ಜಿ.ಎಸ್. ರಾವ್ ಅವರು ಅನುಭವಗಳನ್ನು ಹಂಚಿಕೊಂಡರು. ವ್ಯವಸ್ಥಾಪಕ ಕಾರ್ಯದರ್ಶಿಗಳೂ ಪ್ರಸಿದ್ಧ ಸಾಹಿತಿಗಳೂ ಆದ ಪ್ರೊ. ಕೆ.ಆರ್. ಇಕ್ಬಾಲ್ ಅಹಮದ್ ಅವರು ಸ್ವಾಗತ ಮತ್ತು ಪ್ರಸಿದ್ಧ ಸಾಹಿತಿಗಳೂ, ಲೋಚನ ಸಂಪಾದಕರೂ ಆದ ಶ್ರೀ ಎಸ್.ವಿ. ಶ್ರೀನಿವಾಸರಾವ್ ಅವರು ವಂದನಾರ್ಪಣೆ ಮಾಡಿದರು.

(ಕೃಪೆ - ಸಂಯುಕ್ತ ಕರ್ನಾಟಕ 12-5-02)

## ಗಮನ ಸೆಳೆದ ಮಕ್ಕಳ ಗೋಷ್ಠಿ

ಇತ್ತೀಚೆಗೆ ಪುನರುದ್ಘಾಟನೆಯಾದ ಸಹೃದಯಗೋಷ್ಠಿ ಪ್ರತಿತಿಂಗಳೂ ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಕಾರ್ಯಕ್ರಮ ಹಮ್ಮಿಕೊಂಡಿದೆ. ಒಂದು ತಿಂಗಳು ಇತಿಹಾಸ ಅಕಾಡೆಮಿ ನಗರ ಘಟಕದ ಸಹಯೋಗದಲ್ಲಿ ಸಂಶೋಧನ ಪ್ರಬಂಧ ವಾಚನವಿದ್ದರೆಮತ್ತೊಂದು ತಿಂಗಳು ಕವನ ವಾಚನವಿರುತ್ತದೆ. 25-2-02 ರಂದು ಕವಿ ಬೇಡರೆಡ್ಡಿಹಳ್ಳಿ ಪಂಪಣ್ಣ ರಿಂದ ಕವನ ವಾಚನವೂ 11-5-02 ರಂದು ರಾಜರತ್ನಂ ಸ್ಮರಣಾರ್ಥ ಮಕ್ಕಳ ಕವಿತಾ ಗೋಷ್ಠಿಯೂ ನಡೆಯಿತು.

ಬೆಂಗಳೂರು ಮೇ 11- 'ಓ ಮಾನವರೇ ಎಚ್ಚರ, ಮೃಗದಂತೆ ವರ್ತಿಸಬೇಡಿ; ಇದರಿಂದ ನಿಮ್ಮ ಜೀವನವೇ ನಾಶ ನೋಡಿ!?'

ಎಂ. ಆರ್. ರಶ್ಮಿರಾವ್ ಎಂಬ 9ನೆ ತರಗತಿ ಬಾಲಕಿಯೊಬ್ಬಳಿಂದ ಕವಿತೆಯ ರೂಪದಲ್ಲಿ ಬಂದ ಎಚ್ಚರಿಕೆಯ ಮಾತಿದು. ನರಸಿಂಹರಾಜ ಕಾಲೋನಿಯ ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಬಾಲಕಿ ಇಷ್ಟು ಪ್ರಬುದ್ಧ ಎಚ್ಚರಿಕೆ ನೀಡಿದಾಗ ಸಭೆಯಲ್ಲಿ ಚಪ್ಪಾಳೆ.

ಈ ಕವಿತೆ ಸಹೃದಯರಿಗೆ ತಲುಪಿದ್ದು, ಕರ್ನಾಟಕ ಲೇಖಕರ ಸಂಘ ಹಾಗೂ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಜಂಟಿಯಾಗಿ ಆಯೋಜಿಸಿದ್ದ ಡಾ. ಜಿ.ಪಿ. ರಾಜರತ್ನಂ ಸ್ಮರಣಾರ್ಥ ಮಕ್ಕಳ ಕವಿತಾ ಗೋಷ್ಠಿಯಲ್ಲಿ.

ಮಕ್ಕಳ ಕವಿತಾ ಗೋಷ್ಠಿಯಲ್ಲಿ ಮಕ್ಕಳು ಸಾಕಷ್ಟು ಇಲ್ಲದೆ ಸಭೆ ಬಣಗುಟ್ಟಿದ್ದರೂ ಕೂಡ ಅನೇಕ ಮಧ್ಯಮ, ಹಿರಿಯ ವಯಸ್ಸಿನ ಕವಿ ಹೃದಯದವರು ಮಕ್ಕಳ ಕುರಿತ ಕವನ ವಾಚನ ವಾಚಿಸಿ ಕವಿ ಸಂಜೆಗೆ ರಂಗು ತಂದರು.

ಹಳ್ಳಿಯಿಂದ ಪೇಟೆಗೆ ಬಂದ ಕಿರಣನೆಂಬ ಹುಡುಗ 'ಪಾರ್ಕಿನ ಬಗೆಬಗೆ ಗಿಡಗಳೆಲ್ಲ ಕತ್ತರಿಸಿ ಡ್ರೆಸ್ ಮಾಡಿಹರಲ್ಲಾ, ದೊಡ್ಡ ಚಿಕ್ಕ ಭೇದವಿಲ್ಲದ ಹುಡುಗಿಯ ಜುಟ್ಟಿನ ತರಹ' ಎಂದು ಅಚ್ಚರಿ ಪಡುವುದನ್ನು ನಾ. ಗೀತಾಚಾರ್ಯ ಸೊಗಸಾಗಿ ನಿರೂಪಿಸಿ ಗಮನ ಸೆಳೆದರು.

ಮನುಷ್ಯರಿಗಿಂತ ನಾಯಿಗೇ ಹೆಚ್ಚು ಆದರ ತೋರಿಸುವ, ಹೆತ್ತವರಿಂದ ನೊಂದ ಹುಡುಗಿಯೊಬ್ಬಳು 'ದೀಪು ನಿನ್ನಷ್ಟು ಸುಖಿ ಇನ್ನಿಲ್ಲ ಮರುಜನ್ಮ ಒಂದಿದ್ದರೆ ಬರುವೆನು ನಮ್ಮನೆಯ ಸಾಕು ನಾಯಿಯಾಗಿ!' ಎಂದು ವಿಷಾದ ವ್ಯಕ್ತ ಪಡಿಸುವುದನ್ನು ಕವಯಿತ್ರಿ ಇಂದಿರಾ ನಾಡಿಗ್ ತಮ್ಮ ಕವಿತೆಯಲ್ಲಿ ಬಣ್ಣಿಸಿದರು.

' ಅಮ್ಮ ನಿದ್ದೆ ಬರಿಸು' ಎಂದು ಕೆ. ಈಶ್ವರ ಪ್ರಸಾದ ಮಗುವಾಗಿ ಕಾಡಿದರೆ, ಕವನವನ್ನು 'ಜುಟ್ಟು ಜಡೆಯ ಪುಟ್ಟ ಬಾಲೆ' ಎಂದು ಬೇಡರೆಡ್ಡಿಹಳ್ಳಿ ಪಂಪಣ್ಣ ಕವಿತೆ ಹಾಡಿ ಮಕ್ಕಳ ಆಟ ಪಾಠವನ್ನು ಲಯಲಾಸ್ಯದೊಂದಿಗೆ ತೆರೆದಿಟ್ಟರು.

ಗೋಷ್ಠಿಯ ಅಧ್ಯಕ್ಷತೆ ವಹಿಸಿ ಮಾತನಾಡಿದ, ನಿವೃತ್ತ ಪ್ರಾಧ್ಯಾಪಕ ಪ್ರೊ. ಚಿ. ಶ್ರೀನಿವಾಸರಾಜು, ಮಕ್ಕಳನ್ನು ಬೆಳೆಸುತ್ತಿದ್ದ ಅಜ್ಜಿ ಕಥೆಗಳು ಕ್ಷೀಣಿಸುತ್ತಿದ್ದು ಈಗಿನ ಮಕ್ಕಳಲ್ಲಿ ಕಲ್ಪನೆ ಮತ್ತು ಕಾವ್ಯಶಕ್ತಿ ಕುಗ್ಗಲು ಕಾರಣವಾಗಿದೆ ಎಂದು ನುಡಿದರು.

ಜಾಗತೀಕರಣದ ಕರಿನೆರಳು ಪುಟ್ಟ ಮಕ್ಕಳ ಮೇಲೂ ಬಿದ್ದಿದ್ದು. ಇದೀಗ ಪೋಷಕರು ಮಕ್ಕಳಿಗೆ ಓದುವ ಹವ್ಯಾಸ ಮತ್ತು ಕವಿತೆ ರಚನೆಗೆ ಪ್ರೇರೇಪಿಸುವ ಮೂಲಕ ಗಟ್ಟಿ ಸಾಹಿತ್ಯ ಹಾಗೂ ಸಮಾಜದ ನಿರ್ಮಾಣಕ್ಕೆ ಸಹಕಾರಿಯಾಗಬೇಕು ಎಂದು ಕರೆಯಿತ್ತರು.

ಸಿ.ಎಸ್. ಗೋವಿಂದರಾವ್, ಮಾವಳ್ಳಿ ಜಿ. ರಾಮು, ಜಿ.ಕೆ.ಎಲ್. ರಾಜನ್, ಕೆ. ಈಶ್ವರಪ್ರಸಾದ್, ಚಿ.ಸ. ಮಾಸ್ತಯ್ಯ, ವೈ.ಎಸ್. ಕೃಷ್ಣಮೂರ್ತಿ, ಡಾ. ರಾಜಶ್ರೀ ಕಿಶೋರ್ ಮೊದಲಾದವರು ಕವಿತೆ ವಾಚನ ಮಾಡಿದರು. ಕರ್ನಾಟಕ ಲೇಖಕರ ಸಂಘದ ಅಧ್ಯಕ್ಷ ಡಿ. ಲಿಂಗಯ್ಯ ಪ್ರಾಸ್ತಾವಿಕ ನುಡಿಗಳನ್ನು ಆಡಿದರೆ, ಬಿ.ಎಂ.ಶ್ರೀ. ಪ್ರತಿಷ್ಠಾನದ ಸಂಚಾಲಕರಾದ ಜಯಮ್ಮ ಕರಿಯಣ್ಣ ಕಾರ್ಯಕ್ರಮ ನಿರೂಪಿಸಿದರು.

(ಕೃಪೆ - ಸಂಯುಕ್ತ ಕರ್ನಾಟಕ 12-5-02)

## ಇತಿಹಾಸ ಅಕಾಡೆಮಿಯ ಕಾರ್ಯಕ್ರಮಗಳು

| ದಿನಾಂಕ | ಉಪನ್ಯಾಸಕರು | ವಿಷಯ |
|---|---|---|
| 4-1-02 | ಶ್ರೀ ಬಿ. ಭಾರತೀ | ರಾಷ್ಟ್ರಕೂಟ ಶಾಖೆಗಳು ಒಂದು ಪರಿಚಯ |
| 1-3-02 | ಶ್ರೀಮತಿ ಇಂದಿರಾ ಹೆಗಡೆ | ಆಳ್ವಾರರ ಆಳ್ವಿಕೆ ಮತ್ತು ಅವರ ಮುಂದುವರಿದ ಪರಂಪರೆ |
| 3-5-02 | ಡಾ॥ ವೈ.ಎಸ್. ಗಾಯತ್ರಿ | ಮಹಾವೀರಾಚಾರ್ಯರ ಗಣಿತ ಸಾರ ಸಂಗ್ರಹದ ಮೂಲ ಕಲ್ಪನೆಗಳ ಪ್ರಸ್ತುತತೆ |

## ಈ ಅವಧಿಯಲ್ಲಿ ನಡೆದ ದತ್ತಿ ಉಪನ್ಯಾಸಗಳು

| ದಿನಾಂಕ | ದತ್ತಿ | ವಿಷಯ | ಉಪನ್ಯಾಸ |
|---|---|---|---|
| 15-9-01 | ಬೇಟೆರಾಯ ದೀಕ್ಷಿತರ ದತ್ತಿ ( ಗಾಂಧಿಸಾಹಿತ್ಯ ಸಂಘ, ಮಲ್ಲೇಶ್ವರದಲ್ಲಿ) | ಬೇಟೆರಾಯ ದೀಕ್ಷಿತರ ಅಪ್ರಕಟಿತ ಕೃತಿ ವಾಸವಾಂಬ ಪುರಾಣ, ಪರಿಚಯ | ಶ್ರೀಮತಿ ಎಸ್.ಕೆ. ಲಕ್ಷ್ಮೀ<br>ಅಧ್ಯಕ್ಷತೆ ಪ್ರೊ. ಗರ್ಗೇಶ್ವರಿವೆಂಕಟಸಬ್ಬಯ್ಯ |
| 30-9-01 | ಶಂಬಾ ವಿಚಾರ ವೇದಿಕೆ (ಶಂಬಾ ದತ್ತಿ) ಸಹಯೋಗದೊಂದಿಗೆ | ಸ್ಥಳ ನಾಮ ಅಧ್ಯಯನದ ಪ್ರಸ್ತುತತೆ - ಒಂದು ವಿವೇಚನೆ | ಡಾ|| ಪಿ.ವಿ. ಕೃಷ್ಣಮೂರ್ತಿ |
| 2-12-01 | ವಿ.ಸೀ. ದತ್ತಿ ಕಾರ್ಯಕ್ರಮ (ಪುಸ್ತಕ ಶಕ್ತಿಯ ಸಹಕಾರ) | ಪುಸ್ತಕ ಬಿಡುಗಡೆ:<br>ಕೆ. ನರಸಿಂಹಮೂರ್ತಿ ಅವರ 'ಕನ್ನಡ ಸಾಹಿತ್ಯ ವಿಹಾರ', ವಿ.ಸೀ. ಅವರ 'ಪಾಶ್ಚಾತ್ಯ ನಾಟಕಗಳ ವಿವೇಚನೆ' | ಪ್ರೊ. ಎಲ್.ಎಸ್. ಶೇಷಗಿರಿರಾವ್<br>ಪ್ರೊ. ಎಂ.ಹೆಚ್. ಕೃಷ್ಣಯ್ಯ<br>ಪ್ರೊ. ಅ.ರಾ. ಮಿತ್ರ<br>ಡಾ|| ಟಿ.ವಿ. ವೆಂಕಟಾಚಲ ಶಾಸ್ತ್ರಿ |
| 8-12-01 | ಎಂ.ಜಿ. ನಂಜುಂಡಾರಾಧ್ಯರ ಸ್ಮಾರಕ ದತ್ತಿ ಉಪನ್ಯಾಸ | ಶಕ್ತಿ ವಿಶಿಷ್ಟಾದ್ವೈತ ಕುರಿತು | ವಿದ್ವಾನ್ ಎನ್. ರಂಗನಾಥ ಶರ್ಮ<br>ಅಧ್ಯಕ್ಷತೆ ಡಾ|| ಎಸ್. ವಿದ್ಯಾಶಂಕರ್ |

### ಇತಿಹಾಸ ಅಕಾಡೆಮಿಯ ಸಹಯೋಗದೊಂದಿಗೆ ನಡೆದ ಕಾರ್ಯಕ್ರಮಗಳು

| ದಿನಾಂಕ | ವಿಷಯ | ಉಪನ್ಯಾಸಕರು | ಅಧ್ಯಕ್ಷತೆ |
|---|---|---|---|
| 7-7-01 | ತಮಿಳುನಾಡಿನಲ್ಲಿ ಹೊಯ್ಸಳ ಶಾಸನಗಳು | ಶ್ರೀ ಜಿ. ಮನೋಜ್ | ಪ್ರೊ. ಎಸ್. ನಾಗರಾಜ್ |
| 7-9-01 | ಮಹಾರಾಷ್ಟ್ರದ ಕನ್ನಡ ಶಾಸನಗಳು | ಡಾ|| ವಿಠಲ ಪೋತದಾರ್ | ಡಾ|| ದೇವರ ಕೊಂಡಾರೆಡ್ಡಿ |
| 3-11-01 | ಚನ್ನರಾಯ ಪಟ್ಟಣ ತಾಲ್ಲೂಕಿನ ಶಾಸನೋಕ್ತ ಕೆರೆಗಳ ನಿರ್ಮಾಪಕರು | ಶ್ರೀ ಬಿ.ಆರ್. ಸತ್ಯನಾರಾಯಣ | ಡಾ|| ಕೆ.ಆರ್. ಗಣೇಶ್ |

## ಈ ಅವಧಿಯಲ್ಲಿ ನಡೆದ ದತ್ತಿ ಉಪನ್ಯಾಸಗಳು

| ದಿನಾಂಕ | ದತ್ತಿ | ವಿಷಯ | ಉಪನ್ಯಾಸ |
|---|---|---|---|
| 5-1-02 | ಚಂದ್ರಶೇಖರ ಶರ್ಮ ಸ್ಮಾರಕ ದತ್ತಿ | ಭಾಷಾ ಸಾಹಿತ್ಯಕ್ಕೆ ಕಿರು ಪತ್ರಿಕೆಗಳ ಕೊಡುಗೆ | ಶ್ರೀ ಆರ್.ಜಿ. ಹಳ್ಳಿ ನಾಗರಾಜ್<br>ಅಧ್ಯಕ್ಷತೆ ಪ್ರೊ.ಜಿ. ಅಶ್ವತ್ಥನಾರಾಯಣ |
| 12-1-02 | ಡಾ. ಡಿ.ಎಲ್. ನರಸಿಂಹಾಚಾರ್ ಸ್ಮಾರಕ ದತ್ತಿ | ಹಳಗನ್ನಡ ಕಾವ್ಯಗಳ ಸಂಪಾದನೆಗೆ ಡಿ.ಎಲ್. ನರಸಿಂಹಾಚಾರ್ಯರ ಕೊಡುಗೆ | ಪ್ರೊ. ಎಚ್.ವಿ. ಶ್ರೀನಿವಾಸ ಶರ್ಮ.<br>ಅಧ್ಯಕ್ಷತೆ ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರಿ |
| 5-1-02 | ವೆಂಕಣ್ಣಯ್ಯ ಸ್ಮಾರಕ ದತ್ತಿ ಚಳ್ಳಕೆರೆ (ಸಹಕಾರ ಕರುನಾಡು ಕಲಾ ಸಾಹಿತ್ಯ ವೇದಿಕೆ) | ತಳುಕಿನ ವೆಂಕಣ್ಣಯ್ಯ ಮತ್ತು ಅವರ ಮನೆತನ. ಕನ್ನಡ ಭಾಷಾಭಿವೃದ್ಧಿಯ ಆತಂಕಗಳನ್ನು ನಿವಾರಿಸುವಲ್ಲಿ ಮಾಧ್ಯಮಗಳ ಪಾತ್ರ | ಶ್ರೀಮತಿ ಟಿ.ಸಿ. ಪೂರ್ಣಿಮ<br>ಶ್ರೀ ಸಿ. ಶಿವಲಿಂಗಪ್ಪ<br>ಅಧ್ಯಕ್ಷತೆ ಶ್ರೀ ಬೆಳಗೆರೆ ಕೃಷ್ಣ ಶಾಸ್ತ್ರಿಗಳು |
| 27-1-02 | ವೀ.ಸೀ. ದತ್ತಿ (ವೀ.ಸೀ. ಸಂಪದದ ಸಹಕಾರದಲ್ಲಿ) | ಸೇಡಿಯಾಪು ಅವರ ಜೀವನ, ವ್ಯಕ್ತಿತ್ವ ಮತ್ತು ಸೃಜನಶೀಲ ಕೃತಿ ಕುರಿತು | ಪ್ರೊ. ಎಮ್. ರಾಮಚಂದ್ರ |
| | ಸೇಡಿಯಾಪು ಕೃಷ್ಣಭಟ್ಟ ಜನ್ಮ ಶತಮಾನೋತ್ಸವ ಕಾರ್ಯಕ್ರಮ | ಸೇಡಿಯಾಪು ಅವರ ಶಾಸ್ತ್ರ ಸಾಹಿತ್ಯ ಕುರಿತು | ಶತಾವಧಾನಿ ಡಾ. ರಾ. ಗಣೇಶ್<br>ಅಧ್ಯಕ್ಷತೆ ಜಿ. ವೆಂಕಟಸುಬ್ಬಯ್ಯ<br>ಮುಖ್ಯ ಅತಿಥಿಗಳು ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರಿ |
| 5-2-02 | ಡಾ. ಆ.ನೆ. ಉಪಾಧ್ಯೆ ದತ್ತಿ | ಆದಿ ಪುರಾಣದಲ್ಲಿ ಧಾರ್ಮಿಕ ನೆಲೆಗಳು | ಡಾ. ಸರಸ್ವತಿ, ಮೈಸೂರು<br>ಅಧ್ಯಕ್ಷತೆ ಪ್ರೊ. ಡಿ. ಲಿಂಗಯ್ಯ |

| ದಿನಾಂಕ | ದತ್ತಿ | ವಿಷಯ | ಉಪನ್ಯಾಸ |
|---|---|---|---|
| 8-2-02 | ಸೋಸಲೆ ಅಯ್ಯಾಶಾಸ್ತ್ರಿ ದತ್ತಿ<br>ಸೋಸಲೆ ಅಯ್ಯಾಶಾಸ್ತ್ರಿಗಳ<br>'ಜೀವನ - ಸಾಹಿತ್ಯ' - ಪುಸ್ತಕ ಬಿಡುಗಡೆ | ಸೋಸಲೆ ಅಯ್ಯಾಶಾಸ್ತ್ರಿಗಳ<br>"ಮಹಿಶೂರ ಮಹಾರಾಜ ಚರಿತ್ರಂ" | ಪ್ರೊ. ಜಿ. ಅಶ್ವತ್ಥನಾರಾಯಣ<br>ಮುಖ್ಯ ಅತಿಥಿಗಳು ಶ್ರೀ ಎಸ್.ಆರ್. ಶಿವಸ್ವಾಮಿ<br>ಅಧ್ಯಕ್ಷತೆ ಮತ್ತು ಪುಸ್ತಕ ಬಿಡುಗಡೆ<br>ಪ್ರೊ. ಗರ್ಗೇಶ್ವರಿ ವೆಂಕಟಸುಬ್ಬಯ್ಯ |
| 27-2-02 | ಡಾ. ಶಾಂತಾಪ್ರಭುಶಂಕರ ದತ್ತಿ | ಮಹಿಳೆಯರ ಸಮಗ್ರ ಆರೋಗ್ಯ | ಡಾ. ಲೀಲಾವತಿ ದೇವದಾಸ್<br>ಅಧ್ಯಕ್ಷತೆ ಶ್ರೀಮತಿ ಮನೋಹರಿ ಪಾರ್ಥಸಾರಥಿ |
| 6-3-02 | ಟಿ.ಎನ್. ಮಹದೇವಯ್ಯ ಸ್ಮಾರಕ ದತ್ತಿ | ಟಿ.ಎನ್. ಮಹದೇವಯ್ಯನವರ ಕಾವ್ಯ | ಡಾ. ವಿಜಯ ಸುಬ್ಬರಾಜ್<br>ಅಧ್ಯಕ್ಷತೆ ಶ್ರೀ ಎನ್. ಬಸವಾರಾಧ್ಯ |
| 24-3-02 | ಎಸ್. ಶ್ರೀಕಂಠಯ್ಯ ದತ್ತಿ<br>(ಲಕ್ಷ್ಮೀಶ ಸೇವಾ ಸಮಿತಿ ಹಾಗೂ<br>ಲಕ್ಷ್ಮೀಶ ಸಾಂಸ್ಕೃತಿಕ ವೇದಿಕೆಗಳ<br>ಸಹಯೋಗದಲ್ಲಿ ದೇವನೂರಿನಲ್ಲಿ) | ಲಕ್ಷ್ಮೀಶನ ಕಾಲ, ದೇಶ, ಮತ<br>ಕುರಿತು; ಪುಸ್ತಕ ಬಿಡುಗಡೆ<br>ಹಾಗೂ ಗಮಕ ಕಾವ್ಯನಮನ | ಡಾ. ನೀ.ಕೃ ರಾಮಶೇಷನ್<br>ಅಧ್ಯಕ್ಷತೆ ಪ್ರೊ. ವೆಂಕಣ್ಣಯ್ಯ.<br>ಅತಿಥಿಗಳು ಪ್ರೊ. ರಾಘವೇಂದ್ರ ಭಟ್ |
| ನಾ. ಗೀತಾಚಾರ್ಯರ 'ಲಕ್ಷ್ಮೀಶ' ಕವಿಯ ಕೀರ್ತನಗಳ ಬಿಡುಗಡೆ ಶ್ರೀ ಕೌಶಿಕ್ | | | |
| 30-3-02 | ಎಂ.ಎ. ಜಯಚಂದ್ರ ದತ್ತಿ | ಪ್ರಾಚೀನ ಜೈನ ಸಾಹಿತ್ಯದಲ್ಲಿ<br>ಮಹಾವೀರರು | ಶ್ರೀ ಎಸ್.ಬಿ. ವಸಂತರಾಜಯ್ಯ<br>ಅಧ್ಯಕ್ಷತೆ ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ |
| 30-4-02 | ಅನಂತರಂಗ ಪ್ರತಿಷ್ಠಾನ ದತ್ತಿ | ದಮ್ಮಪದ: ಒಂದು ವಿಶ್ಲೇಷಣೆ | ಡಾ. ಡಿ.ಬಿ. ರಾಮಚಂದ್ರಚಾರ್<br>ಅಧ್ಯಕ್ಷತೆ ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ |

# ದಾನಗಳು

## ಸುಗಮ ಸಂಗೀತ ಸ್ಪರ್ಧೆ

1. ಶ್ರೀಮತಿ ಬಿ. ನಾರಾಯಣಮ್ಮ, ಬೆಂಗಳೂರು 1,000.00
2. ಶ್ರೀ ವಿ. ಲಕ್ಷ್ಮೀನಾರಾಯಣ, ಬೆಂಗಳೂರು 2,000.00

## ಅನುದಾನಗಳು

1. ರಾಜಾರಾಂ ಮೋಹನರಾಯ ಲೈಬ್ರರಿ
   ಫೌಂಡೇಷನ್, ಕೋಲ್ಕತ್ತ - 'ಗ್ರಂಥಾಲಯ ಅಭಿವೃದ್ಧಿಗಾಗಿ' 27,100.00
2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ
   ನಿರ್ದೇಶನಾಲಯ, ಬೆಂಗಳೂರು
   'ವಾರ್ಷಿಕ ಚಟುವಟಿಕೆಗಳ ನಿರ್ವಹಣೆಗಾಗಿ' 50,000.00

## ಟಿ.ಎನ್. ಮಹದೇವಯ್ಯ ಸ್ಮಾರಕ ದತ್ತಿ ನಿಧಿಗಾಗಿ

1. ಶ್ರೀಮತಿ ಪದ್ಮಚರಣ್, ಹುಲಿಯೂರುದುರ್ಗ 200.00
2. ಪ್ರೊ. ವೀರಭದ್ರಯ್ಯ, ತುಮಕೂರು 300.00

## ನೂತನ ದತ್ತಿ ನಿಧಿ ಸ್ಥಾಪನೆ

ಪ್ರತಿಷ್ಠಾನದಲ್ಲಿ ತೀ.ಎಂಶ್ರೀ. ಸ್ಮಾರಕ ದತ್ತಿ ನಿಧಿಯನ್ನು ಸ್ಥಾಪಿಸಿದ್ದು ಈ ವರೆಗೆ ಈ ಕೆಳಕಂಡವರಿಂದ ದಾನ ಬಂದಿದೆ.

1. ಶ್ರೀ ಬಿ.ವಿ. ಶ್ರೀನಾಥಶಾಸ್ತ್ರಿ, ಬೆಂಗಳೂರು 5,000.00
2. ಪ್ರೊ. ತೀ. ಶ್ರೀ ನಾಗಭೂಷಣ, ಬೆಂಗಳೂರು 5,000.00
3. ಶ್ರೀ ಎನ್. ಬಸವಾರಾಧ್ಯ, ಬೆಂಗಳೂರು 1,000.00
4. ಶ್ರೀ ಶಿವಸ್ವಾಮಿ, ಬೆಂಗಳೂರು 100.00

ಆಸಕ್ತರು, ಅಭಿಮಾನಿಗಳು, ಶಿಷ್ಯರು ದಯಾಮಾಡಿ ಉದಾರವಾಗಿ ಸಹಾಯಮಾಡಿ ಕನಿಷ್ಠ 25,000 ರೂ. ಗಳ ಕೂಡಿಸಿ ಕೊಡಬೇಕಾಗಿ ಬಿನ್ನಹ.

## ಗ್ರಂಥದಾನ

1. ಶ್ರೀಮತಿ ಕೂ.ಸ. ಅಪರ್ಣ, ಬೆಂಗಳೂರು 73 ಪುಸ್ತಕಗಳು
2. ಶ್ರೀ ಜಿ.ಆರ್. ಇಂದಿರೇಶ್, ಬೆಂಗಳೂರು 9 ಪುಸ್ತಕಗಳು
3. ಪ್ರೊ. ಜಿ. ಶೆಲ್ಲ, ಬೆಂಗಳೂರು 11 ಪುಸ್ತಕಗಳು

4. ಶ್ರೀಮತಿ ಎಸ್.ಕೆ. ರಮಾದೇವಮ್ಮ, ಬೆಂಗಳೂರು — 63 ಪುಸ್ತಕಗಳು
5. ಧೀರೇಂದ್ರ ಜಹಗೀರುದಾರ್, ಬೆಂಗಳೂರು — 47 ಪುಸ್ತಕಗಳು
6. ಶ್ರೀ ಎ. ಪಾರ್ಥಸಾರಥಿ, ಬೆಂಗಳೂರು — 6 ಪುಸ್ತಕಗಳು
7. ಡಾ. ವಿಜಯ ಸುಬ್ಬರಾಜ್, ಬೆಂಗಳೂರು — 400 ಪುಸ್ತಕಗಳು
8. ಶ್ರೀ ರಘುನಾಥ್, ಬೆಂಗಳೂರು — 290 ಪುಸ್ತಕಗಳನ್ನು ಮತ್ತು 1 ಗೋಡೆ ಗಡಿಯಾರವನ್ನು ನೀಡಿದ್ದಾರೆ
9. ಶ್ರೀ ರಾಮಚಂದ್ರ ಶಾಸ್ತ್ರಿ, ಬೆಂಗಳೂರು — ಕಿಟಲ್ ನಿಘಂಟು 4 ಸಂಪುಟಗಳು
   ಕನ್ನಡ - ಕನ್ನಡ ನಿಘಂಟು — 5 ಸಂಪುಟಗಳು
   ಎಚ್.ಎಸ್. ಬಿಳಿಗಿರಿ ಅವರ ವರ್ಣನಾತ್ಮಕ ವ್ಯಾಕರಣದ 1 ಪುಸ್ತಕವನ್ನು ನೀಡಿದ್ದಾರೆ.
10. ಶ್ರೀಮತಿ ರಾಜಾಮಣಿ ಅವರು ಪ್ರಸಿದ್ಧ ಸಾಹಿತಿಗಳೂ ಕಾದಂಬರಿಕಾರರೂ ಆಗಿದ್ದ ಶ್ರೀ ಸಿ.ಕೆ. ನಾಗರಾಜ ರಾವ್ ಅವರ ಸಂಗ್ರಹದ ರೂ. 8,413 ರೂ.ಗಳ ಮೌಲ್ಯದ 1120 ಪುಸ್ತಕಗಳು
11. ಪ್ರೊ. ಎಲ್.ಎಸ್. ಶೇಷಗಿರಿ ರಾವ್, ಬೆಂಗಳೂರು — 98 ಪುಸ್ತಕಗಳು

ಈ ಎಲ್ಲಾ ಮಹನೀಯರಿಗೂ ಪ್ರತಿಷ್ಠಾನ ಕೃತಜ್ಞತಾಪೂರ್ವಕ ವಂದನೆಗಳನ್ನರ್ಪಿಸುತ್ತದೆ. ಮತ್ತು ಎಲ್ಲಾ ದಾನಗಳು ಉದ್ದೇಶಿತ ಆಶಯಕ್ಕೆ ವಿನಿಯೋಗವಾಗುತ್ತವೆ ಎಂದು ಈ ಮೂಲಕ ಸೂಚಿಸಬಯಸುತ್ತೇವೆ.

# ವಸ್ತು ಸಂಗ್ರಹ

## ಶತಮಾನೋತ್ಸವಗಳು

**ನಿಟ್ಟೂರರಿಗೆ ನೂರು :**

ಪ್ರತಿಷ್ಠಾನದ ಗೌರವಾಧ್ಯಕ್ಷರಾಗಿರುವ ಹಿರಿಯ ಗಾಂಧಿವಾದಿಗಳೂ, ನಿವೃತ್ತ ಮುಖ್ಯ ನ್ಯಾಯಾಧೀಶರೂ ಹಂಗಾಮಿ ರಾಜ್ಯಪಾಲರೂ ಆಗಿ ಸೇವೆ ಸಲ್ಲಿಸಿರುವ ನಿಟ್ಟೂರು ಶ್ರೀನಿವಾಸರಾವ್ ಅವರು ಇದೀಗ 99 ನೇ ವರ್ಷದಲ್ಲಿ ಮುನ್ನಡೆಯುತ್ತಿದ್ದು ಶತಾಯುಷಿ ಎ.ಎನ್. ಮೂರ್ತಿರಾಯರ ನಂತರ ಜೀವಂತವಾಗಿ ಶತಮಾನೋತ್ಸವವನ್ನು ಆಚರಿಸಿಕೊಳ್ಳುತ್ತಿರುವ ಅಪರೂಪದ ಶತಾಯುಷಿಗಳಾಗಿದ್ದಾರೆ. ದಿನಾಂಕ 24-8-1902 (ಜನ್ಮದಿನ 24-8-1903)ರಂದು ನೂರನೇ ವರ್ಷಕ್ಕೆ ಪದಾರ್ಪಣೆ ಮಾಡುತ್ತಿದ್ದಾರೆ. ಗಿನ್ನಿಸ್ ದಾಖಲೆಯಾಗಬಹುದಾದ ಅಪರೂಪದ ವ್ಯಕ್ತಿತ್ವದ ಅಜಾತಶತ್ರುಗಳೂ, ಸಂಗೀತ, ಸಾಹಿತ್ಯ, ಸಾಂಸ್ಕೃತಿಕ, ರಾಜಕೀಯ ಮತ್ತು ಸಾಮಾಜಿಕ ಹೀಗೆ ಎಲ್ಲಾ ಕ್ಷೇತ್ರಗಳಲ್ಲೂ ಮಾನ್ಯರಾಗಿರುವ ಈ ಶತಮಾನದ ಜೀವಂತ ಇತಿಹಾಸಕೋಶವಾಗಿರುವ ನಿಟ್ಟೂರು ಶ್ರೀನಿವಾಸರಾವ್ ಅವರ ಶತಮಾನೋತ್ಸವವನ್ನು ನಾಡಿನ ಜನತೆ ವಿಶಿಷ್ಟವಾದ ರೀತಿಯಲ್ಲಿ ರಾಜ್ಯ-ರಾಷ್ಟ್ರಮಟ್ಟದಲ್ಲಿ ಆಚರಿಸಬೇಕಾಗಿದೆ. ಈಗಾಗಲೇ ಸನ್ಮಾನ ಸಮಾರಂಭವೊಂದರಲ್ಲಿ ಕಾಂಗ್ರೆಸ್ ಅಧ್ಯಕ್ಷರಾದ ಶ್ರೀ ಅಲ್ಲಂ ವೀರಭದ್ರಪ್ಪನವರು ಭರವಸೆ ನೀಡಿರುವುದನ್ನು ಸರ್ಕಾರ ಸ್ವೀಕರಿಸಿ ಕೂಡಲೇ ಶತಮಾನೋತ್ಸವ ಸಮಿತಿಯನ್ನು ರಚಿಸಿ ಕಾರ್ಯಪ್ರವೃತ್ತವಾಗಬೇಕು ಮತ್ತು ಕರ್ನಾಟಕದ ಅತ್ಯುನ್ನತ ಪ್ರಶಸ್ತಿಯಾಗಿರುವ 'ಕರ್ನಾಟಕ ರತ್ನ' ಪ್ರಶಸ್ತಿಯನ್ನು ನೀಡಬೇಕಲ್ಲದೇ ರಾಷ್ಟ್ರಮಟ್ಟದ ಭಾರತರತ್ನ ಪ್ರಶಸ್ತಿಗೂ ಶಿಫಾರಸ್ಸು ಮಾಡಬೇಕು.

ನಿಟ್ಟೂರು ಶ್ರೀನಿವಾಸರಾಯರು ಭಾಗವಹಿಸಿರುವ ಕಾರ್ಯಕ್ರಮಗಳನ್ನೂ ಅಧ್ಯಕ್ಷರು, ಸದಸ್ಯರು, ಪದಾಧಿಕಾರಿಗಳಾಗಿರುವ ಸಮಿತಿ, ಸಂಘ-ಸಂಸ್ಥೆಗಳನ್ನು ಯಾರಾದರೂ ದಾಖಲೆ ಮಾಡಿದ್ದರೆ ಅದು ಖಂಡಿತಾ ಗಿನ್ನಿಸ್ ದಾಖಲೆಯಾಗುತ್ತದೆ. ಅವರ ನೆನಪುಗಳನ್ನು ಸಂಗ್ರಹಿಸಿದರೆ ಅದೊಂದು ಜೀವಂತ ಇತಿಹಾಸವಾಗುತ್ತದೆ. ಇಂಥ ಕೀರ್ತಿವಂತ ಕನ್ನಡಿಗನ ಶತಮಾನೋತ್ಸವಕ್ಕೆ ಕನ್ನಡನಾಡು ಸಜ್ಜಾಗಬೇಕು.

**ಡಾ|| ಶಿವರಾಮಕಾರಂತ ಶತಮಾನೋತ್ಸವ**

ಕನ್ನಡದ ಹೆಮ್ಮೆಯ ಜ್ಞಾನಪೀಠ ಪ್ರಶಸ್ತಿ ವಿಜೇತರಾಗಿದ್ದ ಕಡಲ ತೀರದ ಭಾರ್ಗವ ರೆಂದೇ ಖ್ಯಾತರಾಗಿದ್ದ ಸಾಹಿತಿ ದಿಗ್ಗಜ ಶಿವರಾಮ ಕಾರಂತರ ಶತಮಾನೋತ್ಸವವು 10-10-2001ರಿಂದ ಆರಂಭವಾಗಿದ್ದು ಇದರ ಆಚರಣೆಗಾಗಿ ರಾಜ್ಯಮಟ್ಟದ ಸಮಿತಿಯೊಂದು ಈಗಾಗಲೇ ರಚನೆಯಾಗಿದೆ. ಸರ್ಕಾರ ಇವರ ಸಮಗ್ರ ಸಾಹಿತ್ಯ ಸಂಪುಟಗಳನ್ನು ಪ್ರಕಟಿಸಲು ಮುಂದಾಗಿದೆ. ನಾಡಿನಾದ್ಯಂತ ಕಾರಂತರ ಸಾಹಿತ್ಯ ಸಾಧನೆಗಳನ್ನು ಪರಿಚಯಿಸುವಂತೆ ಇಂದಿನ ಪೀಳಿಗೆಗೆ ಸ್ಫೂರ್ತಿಯಾಗುವಂತೆ ಮತ್ತು ರಾಷ್ಟ್ರಮಟ್ಟದಲ್ಲಿ ಇವರನ್ನು ಗುರುತಿಸುವಂತೆ ವಿಭಿನ್ನ ಕಾರ್ಯಕ್ರಮಗಳ ಮೂಲಕ ಇವನ್ನು ಅರ್ಥಪೂರ್ಣವಾಗಿ ಆಚರಿಸಬೇಕಾಗಿದೆ.

ಬದುಕುತ್ತಾರೆ. ಈ ಬಗ್ಗೆ ಸಾರ್ವಜನಿಕರೂ ಜನಾಭಿಪ್ರಾಯ ಮೂಡಿಸಿ ಸರ್ಕಾರದ ಮೇಲೆ ಒತ್ತಡ ತರಬೇಕಾಗುತ್ತದೆ.

## ಭಾಷಾವಿಚಾರದಲ್ಲಿ ಸುಧಾರಣೆ

೧. 'ಋ' ವಿಚಾರ :

ಶಿಕ್ಷಣ ಇಲಾಖೆ ಸುಧಾರಣೆಯ ನೆಪದಲ್ಲಿ ತನ್ನದಲ್ಲದ ಕಾರ್ಯವನ್ನು ತನ್ನ ಮೇಲೆ ಹೇರಿಕೊಂಡು ಇಲ್ಲದ ಗೊಂದಲ ಸೃಷ್ಟಿಸಿರುವುದು ಖೇದಕರ. ಪ್ರಾಥಮಿಕ ಹಂತದಲ್ಲಿ 'ಋ' ಅಕ್ಷರವನ್ನು ಕೈ ಬಿಡುವುದು ಅದರ ವ್ಯಾಪ್ತಿಗೆ ಬರುವುದಿಲ್ಲ. ಭಾಷೆಯಲ್ಲಿ, ಸಮಾಜದಲ್ಲಿ ಬಳಕೆಯಾಗುವ ಅಕ್ಷರಗಳನ್ನು ಕಲಿಸುವುದಷ್ಟೇ ಅದರ ಕೆಲಸ. ಯಾವ ಅಕ್ಷರ ಬೇಕು, ಯಾವುದು ಬೇಡ ಎಂಬ ವಿಚಾರ ಶಿಕ್ಷಣ ಇಲಾಖೆಗೆ ಅಪ್ರಸ್ತುತ. ಈ ಬಗ್ಗೆ ಈಗಾಗಲೇ ಸಾಕಷ್ಟು ಚರ್ಚೆಗಳಾಗಿದ್ದು ಸಾರ್ವಜನಿಕರು, ಸಾಹಿತಿಗಳು, ಶಿಕ್ಷಣತಜ್ಞರು ಮತ್ತು ಭಾಷಾ ವಿಜ್ಞಾನಿಗಳೂ ತೀವ್ರವಾಗಿ ಪ್ರತಿಕ್ರಿಯಿಸಿದ್ದಾರೆ. ಭಾಷಾ ವಿಜ್ಞಾನಿಗಳೇ ಈ ಭಾಷಾ ಬದಲಾವಣೆಗೆ ಕೈ ಹಾಕದಿರುವಾಗ ಶಿಕ್ಷಣ ಇಲಾಖೆಗೆ ಏಕೆ ಈ ಉಸಾಬರಿ? ಯಾವುದೇ ವಿಚಾರದಲ್ಲಿ ತೀರ್ಮಾನಕ್ಕೆ ಬರುವ ಮುನ್ನ ಸಂಬಂಧಿಸಿದ ತಜ್ಞರ ಸಲಹೆ ಪಡೆದು ಮುಂದಡಿಯಿಡುವುದು ಉತ್ತಮ. ಭಾಷೆಯಲ್ಲಿ ಅಕ್ಷರ, ಧ್ವನಿ, ಲಿಪಿ, ಪದ, ಅರ್ಥಗಳೆಲ್ಲ ಯಾದೃಚ್ಛಿಕವಾದವು. ಸಮಾಜದಲ್ಲಿ ಸಮುದಾಯದಿಂದ ಕಾಣಿಸಿಕೊಂಡು ಸಮುದಾಯದಿಂದ ಕಣ್ಮರೆಯಾಗುವಂತವುಗಳು. ಅವುಗಳ ಬಳಕೆಯ ರೂಪಗಳನ್ನು ನಾವು ಅಭ್ಯಸಿಸಬೇಕೆ ಹೊರತು ನಾವೇ ನಿಯಮಗಳನ್ನು ಹಾಕಲು ಬರುವುದಿಲ್ಲ. 'ಋ' ಬಳಕೆಯಲ್ಲಿದೆ. ಆದ್ದರಿಂದ ತೆಗೆಯಲು ಬರುವುದಿಲ್ಲ. ಇದು ವಾಸ್ತವ. ಅದನ್ನು ಕಲಿಸಲು ಸೂಕ್ತ ವಿಧಾನ ಸೂಚಿಸುವುದಷ್ಟೇ ನಮ್ಮ ಕೆಲಸ. ಅದು ಕಷ್ಟವೆಂದು ಅದನ್ನೇ ತೆಗೆದು ಹಾಕಿದರೆ ಅದು ಸಮಸ್ಯೆಯ ಪರಿಹಾರವಲ್ಲ, ಸೃಷ್ಟಿಯಾಗುತ್ತದೆ. ಯಾವುದೇ ಭಾಷಾ ವಿಚಾರದಲ್ಲಿ ಅದರ ಲಿಪಿ ಅಥವಾ ಧ್ವನಿಯನ್ನು ಉಳಿಸಿಕೊಳ್ಳುವ, ತೆಗೆಯುವ ಇಚ್ಛೆ ಒಬ್ಬ ವ್ಯಕ್ತಿಯದ್ದಾಗಲೀ ಒಂದು ಘಟನೆಯದ್ದಾಗಲೀ ಆಗಲು ಸಾಧ್ಯವಿಲ್ಲ. ಅದು ಆ ಭಾಷೆಯನ್ನಾಡುವ ಇಡೀ ಸಮುದಾಯದ ಸ್ವಇಚ್ಛೆಯಾಗಬೇಕು. ಅಂತಹ ಸ್ವಇಚ್ಛೆಯನ್ನು ಯಾವುದೇ ವ್ಯವಸ್ಥೆ ರೂಪಿಸಲು ಬರುವುದಿಲ್ಲ. ಏಕೆಂದರೆ, ಇಡೀ ಸಮುದಾಯವನ್ನು ಒಳಗೊಳ್ಳುವ ಯಾವ ವ್ಯವಸ್ಥೆಯೂ ಇರುವುದಿಲ್ಲ. ಆದ್ದರಿಂದ ಎಲ್ಲೋ, ಹೇಗೋ ಕಾಣಿಸಿಕೊಂಡು ಬಳಕೆಗೆ ಬಂದರೂ ಸಮುದಾಯ ಅದನ್ನು ಬಳಸುವ ಅಥವಾ ಬಿಡುವ ಸ್ವೀಕಾರ ಪ್ರಜ್ಞೆಯಿಂದ ಅದು ಬದಲಾವಣೆಯಾಗುತ್ತದೆ. ಅಂಥ ಬದಲಾವಣೆಗಳನ್ನಷ್ಟೇ ಭಾಷಾ ತಜ್ಞರು ದಾಖಲಿಸಿ ವಿಶ್ಲೇಷಿಸುತ್ತಾರೆ. ಅದು ತನಗೆ ತಾನೆ ರೂಪಿಸಿಕೊಂಡಿರುವ ನಿಯಮಗಳನ್ನು ಗುರುತಿಸಿ ಅಭ್ಯಸಿಸುವುದಷ್ಟೇ ಭಾಷಾ ವಿಜ್ಞಾನಿಯ ಕೆಲಸ. ನಾವು ರೂಪಿಸುವ ನಿಯಮಕ್ಕೆ ಭಾಷೆ ಸಿಲುಕುವುದಿಲ್ಲ. 'ನದಿನೀರಿಗೆ ದೋಣಿನಾಯಕನಪ್ಪಣೆಯೆ' ಎಂಬಂತೆ ಭಾಷೆಯೂ ಹರಿಯುವ ನದಿಯಂತೆ. ಅದರ ಬಳಕೆಯಷ್ಟೇ ನಮ್ಮ ಕೆಲಸ.

ಶಿಕ್ಷಣ ಇಲಾಖೆ ಈ ಸತ್ಯ ಸಂಗತಿಯನ್ನು ಅರ್ಥ ಮಾಡಿಕೊಂಡು ತನ್ನ ಕರ್ತವ್ಯವನ್ನು ಗ್ರಹಿಸುತ್ತದೆ ಎಂದುಕೊಳ್ಳೋಣವೇ.

೨. ಕನ್ನಡ ಲಿಪಿ ತಂತ್ರಾಂಶ :

ಜಾಗತೀಕರಣಕ್ಕೆ ತನ್ನನ್ನು ಸಜ್ಜುಗೊಳಿಸಿಕೊಳ್ಳಲು ಕನ್ನಡ ನಾಮುಂದು, ತಾಮುಂದು ಎಂದು ಅನೇಕ ಉತ್ತುಂಗ ಉದ್ಯಮಿಗಳ ಮೂಲಕ ಮುನ್ನುಗ್ಗುತ್ತಿರುವುದು ಸಂತೋಷದಾಯಕವಾದರೂ ಅದರ ಬಳಕೆಯ ಗುಣಮಟ್ಟವನ್ನು ಕಾಯ್ದುಕೊಳ್ಳುವದನ್ನು ಯಾವುದಾದರೊಂದು ಸಂಸ್ಥೆ ನಿರ್ವಹಿಸಬೇಕಾದುದು ಅತ್ಯಗತ್ಯ. ಕರ್ನಾಟಕ ಸರ್ಕಾರ ಈ ಬಗ್ಗೆ ಗಮನ ಹರಿಸಿ ಈ ನಿಟ್ಟಿನಲ್ಲಿ ಈಗಾಗಲೇ ಕೆಲಸ ಮಾಡುತ್ತಿರುವ ಕನ್ನಡ ಗಣಕ ಪರಿಷತ್ತಿಗೆ ಈ ಜವಾಬ್ದಾರಿ ವಹಿಸಿರುವುದು, ಇದರಿಂದ ಅಗತ್ಯ ಸಲಹೆ ಸ್ವೀಕರಿಸುತ್ತಿರುವುದು ಅದಕ್ಕಿಂತ ಹೆಚ್ಚು ಅಭಿನಂದನೀಯವಾಗಿದೆ.

ಮುದ್ರಣ ಮಾಧ್ಯಮದಲ್ಲಿ ಕಂಪ್ಯೂಟರ್ ಲೋಕದಲ್ಲಿ ನೂರಾರು ತಂತ್ರಾಂಶಗಳಿದ್ದರೂ ಯಾವುದನ್ನು ಯಾವುದರಿಂದ ಬೇಕಾದರೂ ಪಡೆಯುವ ಸ್ವತಂತ್ರವಿರುವಂತ್ಯೆ ಕನ್ನಡದಲ್ಲೂ ಇರಬೇಕು. ಕನ್ನಡ ತಂತ್ರಾಂಶ ರೂಪಿಸುತ್ತಿರುವ ಉದ್ಯಮಿಗಳು ಉದ್ದೇಶಪೂರ್ವಕವಾಗಿಯೇ ತಮ್ಮ ತಂತ್ರಾಂಶ (ಸಾಫ್ಟ್‌ವೇರ್ / ಪ್ಲಾಪಿ) ವೇ ಮಾರಾಟವಾಗಬೇಕೆಂದು ವಾಣಿಜ್ಯ ದೃಷ್ಟಿಯಿಂದ ಭಿನ್ನ ಭಿನ್ನವಾಗಿ ರೂಪಿಸುತ್ತಿರುವ ಕೀಳು ವಾಣಿಜ್ಯ ನೀತಿಗೆ ಕಡಿವಾಣ ಹಾಕಿ ಒಂದೇ ತಾಂತ್ರಿಕ ನಿರ್ದೇಶನದಲ್ಲಿ ತಂತ್ರಾಂಶಗಳನ್ನು ನಿರ್ವಹಿಸುವಂತೆ ಮಾಡಬೇಕಾಗಿದೆ. ಈ ನಿಟ್ಟಿನಲ್ಲಿ ಕರ್ನಾಟಕ ಸರ್ಕಾರ 'ನುಡಿ' ಎಂಬ ಪ್ರಮಾಣ ತಂತ್ರಾಂಶ ರೂಪಿಸಿದ್ದು ಉಳಿದವೆಲ್ಲಾ ಅದಕ್ಕೆ ಪ್ರಮಾಣವಾಗಿರಬೇಕೆಂದು ತಾಕೀತು ಮಾಡಿದ್ದರೂ ಇದರಲ್ಲಿ ಇನ್ನಷ್ಟು ಬಿಗಿ ಇರಬೇಕು.

ಇದು ಸಂಪೂರ್ಣವಾಗಿ ತಾಂತ್ರಿಕ ವಿಚಾರವಾದರೂ ಇದರ ಬಳಕೆ ಸಮಸ್ಯೆ ಎದುರಾಗುವುದು ಮುದ್ರಣ ಕ್ಷೇತ್ರದಲ್ಲಿ. ಒಂದು ಪುಸ್ತಕವನ್ನು 'ಆಕೃತಿ' ಕನ್ನಡ ತಂತ್ರಾಂಶದಲ್ಲಿ ಮುದ್ರಿಸಿ ಅದರ ಪ್ಲಾಪಿ ಹೊಂದಿದ್ದು ಇನ್ನೊಬ್ಬ ಮುದ್ರಕರಿಗೆ ಅಥವಾ ಬೇರೆ ತಂತ್ರಾಂಶವಿರುವ ಡಿಟಿಪಿ ಕೇಂದ್ರದಲ್ಲಿ ಇದರ ಪ್ರತಿ ತೆಗೆದುಕೊಡಿ ಎಂದರೆ ಸಾಧ್ಯವಿಲ್ಲ ಎನ್ನುತ್ತಾರೆ. ಪುಸ್ತಕವನ್ನೇ ಹೊಸದಾಗಿ ಡಿಟಿಪಿ ಮಾಡಬೇಕಾಗುತ್ತದೆ. ಹಣ. ಶ್ರಮ, ಸಮಯ ಇವೆಲ್ಲಾ ಇದರಿಂದ ಅಧಿಕವಾಗುತ್ತದೆ. ದಾಖಲಿಸುವ ಫೈಲ್‌ಗಳೆಲ್ಲಾ ವ್ಯರ್ಥವಾಗುತ್ತದೆ. ಕಂಪ್ಯೂಟರ್‌ನಿಂದ ಸಾಧ್ಯವಾಗುವ ಫೈಲ್ ದಾಖಲೀಕರಣದ ಸೌಲಭ್ಯದಿಂದ ಕನ್ನಡ ವಂಚಿತವಾಗುತ್ತದೆ. ಆದ್ದರಿಂದ ಗಣಕ ಪರಿಷತ್ತು ಅಭಿವೃದ್ಧಿ ಪ್ರಾಧಿಕಾರ, ಮಾಹಿತಿ ತಂತ್ರಜ್ಞಾನ ನಿರ್ದೇಶನಾಲಯ ಕನ್ನಡ ಸಮಾನ ತಂತ್ರಾಂಶ ಬಳಕೆಯಲ್ಲಿ ಈ ಕಟ್ಟಾಜ್ಞೆ ಮಾಡಬೇಕಾದುದು ತುರ್ತಾಗಿದೆ.

೩. ಜಿಲ್ಲಾಧಿಕಾರಿ ಕಛೇರಿಯಲ್ಲಿ ಕನ್ನಡ ಅನುಷ್ಠಾನ ವಿಭಾಗ

ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಶಿಫಾರಸಿನಂತೆ ಕರ್ನಾಟಕ ಸರ್ಕಾರ ಎಲ್ಲಾ ಜಿಲ್ಲಾಧಿಕಾರಿ ಕಛೇರಿಗಳಲ್ಲೂ ಕನ್ನಡ ಅನುಷ್ಠಾನ ವಿಭಾಗವನ್ನು ತೆರೆಯುತ್ತಿರುವುದು ಕನ್ನಡ ಭಾಷೆಯ ಸುಧಾರಣೆಯ ಹಂತದಲ್ಲಿ ಉತ್ತಮ ಭವಿಷ್ಯವಾಗಿದೆ. ಸರ್ಕಾರದ ಸುತ್ತೋಲೆಯಂತೆ ಈ ವಿಭಾಗ ಪ್ರಾಧಿಕಾರದ ಉಪವಿಭಾಗವಾಗಿ ಕಾರ್ಯನಿರ್ವಹಿಸಿದರೂ ಮುಂದೆ ಇಡೀ ಜಿಲ್ಲಾಧಿಕಾರಿಗಳ ಕಛೇರಿಗಳ ಕನ್ನಡ ಸಲಹಾ ಕೇಂದ್ರವಾಗಬೇಕು ಮತ್ತು ಕನ್ನಡ ನಾಡು-ನುಡಿ-ಹಿತ ಕಾಯುವ ಇಲಾಖೆಯಾಗಿ ಕಾರ್ಯನಿರ್ವಹಿಸುವಂತಾಗಬೇಕು. ಯಾವುದೇ ಕಾರಣದಿಂದ ಈ ವಿಭಾಗವನ್ನು

ಕಿತ್ತುಹಾಕಲಾಗದಂತಹ ಖಾಯಂ ಇಲಾಖೆಯಾಗಿ ಇದು ಅಸ್ತಿತ್ವ ಹೊಂದಿರಬೇಕು. ಈ ಇಲಾಖೆಯಲ್ಲಿ ಕಾರ್ಯನಿರ್ವಹಿಸುವವರಿಗೆ ಕಡ್ಡಾಯವಾಗಿ ಕನ್ನಡ ಸ್ನಾತಕ ಮತ್ತು ಪದವಿ ಮಟ್ಟದಲ್ಲಿ ಐಚ್ಛಿಕ ಕನ್ನಡ ತೆಗೆದುಕೊಂಡಿರುವ ಪಧವೀಧರರಿಗೆ ಉದ್ಯೋಗಾವಕಾಶವಿರುವಂತೆ ನಿಯಮ ರೂಪಿಸಬೇಕು. ಇದರಿಂದ ಸಿಬ್ಬಂದಿಯೂ ಕನ್ನಡದ ಬಗ್ಗೆ ಸ್ಪಷ್ಟ ಅರಿವು ಮೂಡಿಸಲು ಸಾಧ್ಯವಾಗುವುದಲ್ಲದೇ ನಿರುದ್ಯೋಗಿಗಳಾಗಿರುವ ಈ ಪಧವೀಧರರಿಗೆ ಉದ್ಯೋಗಾವಕಾಶ ನಿರ್ಮಾಣವಾಗುತ್ತದೆ. ಕನ್ನಡ ಭಾಷೆ-ಸಾಹಿತ್ಯ ಇತಿಹಾಸವನ್ನು ಗಂಭೀರವಾಗಿ ಓದಿದ ಯಾವುದೇ ವ್ಯಕ್ತಿಗೆ ಎಂದೂ ನಿರಾಶೆ ಮಾಡದಂತಹ ನಿರಂತರ ಉದ್ಯೋಗಾವಕಾಶವಿರುವಂತಹ ಉತ್ಸಾಹದಾಯಕ ವಾತಾವರಣ ಇದ್ದರಷ್ಟೇ ಕರ್ನಾಟಕದ ಭವಿಷ್ಯ ಉಜ್ವಲವಾಗುವುದು, ಇಲ್ಲದಿದ್ದರೆ ಸದಾಕಾಲದಲ್ಲೂ ಕನ್ನಡವನ್ನು ಕಾಯುವವರೇ ಇಲ್ಲದೇ ಸರ್ವನಾಶವಾಗುತ್ತದೆ.

ಆಚಾರ್ಯ ಬಿ.ಎಂ. ಶ್ರೀ ರವರು ಇಂತಹ ದೂರಾಲೋಚನೆಯನ್ನು ಮಾಡಿದ್ದುದರ ಫಲವೇ ಇಂದು ಕನ್ನಡ ಅಭಿಮಾನಿಗಳ ದಂಡು ಸೃಷ್ಟಿಯಾಗಿರುವುದು. ಇನ್ನು ಮುಂದಕ್ಕೆ ನಾವು ಅಭಿಮಾನ ಸೃಷ್ಟಿಸಿದರೆ ಸಾಲದು ಕನ್ನಡದ ಕಾವಲುಗಾರರನ್ನೂ ಸೃಷ್ಟಿಸಬೇಕಾಗಿದೆ. ಮುಂದೆ ಸರ್ಕಾರದಲ್ಲಿ ಆರ್ಥಿಕ ಇಲಾಖೆಯಂತಹ ಬಿಗಿ ಮುಷ್ಟಿಯ ಕನ್ನಡ ಇಲಾಖೆಯ ಸೃಷ್ಟಿಗೆ ಇದು ನಾಂದಿಯಾಗಲಿ.

ವ್ಯವಸ್ಥಾಪಕ ಸಂಪಾದಕ

## ತುಮಕೂರಿನ 69ನೇಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಡಾ. ಯು.ಆರ್. ಅನಂತಮೂರ್ತಿ

ಕನ್ನಡ ಸಾಹಿತ್ಯ ಪರಿಷತ್ತಿನ ನೂತನ ಅಧ್ಯಕ್ಷರಾದ ಹರಿಕೃಷ್ಣ ಪುನರೂರ ನೇತೃತ್ವದಲ್ಲಿ ನಡೆದ ಈ ಮೊದಲ ಸಮ್ಮೇಳನ ಫೆಬ್ರವರಿ 15, 16, 17 ರಂದು ಜ್ಞಾನಪೀಠ ಪುರಸ್ಕೃತ ವಿಜೇತ ಸಾಹಿತಿ ಡಾ|| ಯು.ಆರ್. ಅನಂತಮೂರ್ತಿಗಳ ಅಧ್ಯಕ್ಷತೆಯಲ್ಲಿ ವಿಜೃಂಭಣೆಯಿಂದ ನಡೆಯಿತು. ಡಾ|| ಅನಂತಮೂರ್ತಿಗಳವರನ್ನು ಬಿ.ಎಂ.ಶ್ರೀ. ಪ್ರತಿಷ್ಠಾನ ಮತ್ತು ಕರ್ನಾಟಕಲೋಚನ ಗೌರವಪೂರ್ವಕವಾಗಿ ಅಭಿನಂದಿಸುತ್ತವೆ.

ಡಾ. ಅನಂತಮೂರ್ತಿಯವರ ಅಧ್ಯಕ್ಷ ಭಾಷಣದಲ್ಲಿಯ ಕನ್ನಡ ಪರಚಿಂತನೆಗಳ ಬಗೆಗೆ ಪತ್ರಿಕೆಗಳಲ್ಲಿ ಹಲವು ದಿನಗಳವರೆಗೆ ಚರ್ಚೆಗಳು ನಡೆಯುವ ಮೂಲಕ ಸಮ್ಮೇಳನ ಒಂದು ರೀತಿಯಲ್ಲಿ ಅರ್ಥಪೂರ್ಣವಾಯಿತು.

ಪ್ರತಿ ವರ್ಷವೂ ಭಾರಿ ಪ್ರಮಾಣದ ವ್ಯವಸ್ಥೆ ಮತ್ತು ಅದರಿಂದಾಗುವ ಅವ್ಯವಸ್ಥೆ ತಪ್ಪಿಸಲು ಲೋಚನ ಹಿಂದಿನಿಂದಲೂ ಪ್ರತಿಪಾದಿಸುತ್ತಾ ಬಂದಿರುವಂತೆ ಮೂರು ವರ್ಷಕ್ಕೊಮ್ಮೆ ಅಂದರೆ ಒಬ್ಬೊಬ್ಬ ಅಧ್ಯಕ್ಷರ ಅವಧಿಯಲ್ಲಿ ಅಖಿಲ ಭಾರತ ಮಟ್ಟದ ಒಂದೊಂದು ಸಮ್ಮೇಳನ ನಡೆಸುವ ವ್ಯವಸ್ಥೆಯನ್ನು ಜಾರಿಗೆ ತರುವುದೇ ಹೆಚ್ಚು ಸೂಕ್ತವೆಂದು ಸೂಚಿಸಬಯಸುತ್ತದೆ.

## ವೆಬ್‌ಸೈಟ್‌ನಲ್ಲಿ ಹಸ್ತಪ್ರತಿಗಳು

ವೇದ ಮತ್ತು ಪುರಾಣಗಳಿಗೆ ಸಂಬಂಧಿಸಿದ ಪ್ರಾಚೀನ ಹಸ್ತಪ್ರತಿಗಳನ್ನು ವಿಶ್ವಾದ್ಯಂತ ಪ್ರಚಾರ ಮಾಡಲು ಬೆಂಗಳೂರಿನ ಉತ್ತರಾದಿ ಮಠ ವೆಬ್‌ಸೈಟ್‌ವೊಂದನ್ನು ಈಚೆಗೆ ಮುಖ್ಯಮಂತ್ರಿಗಳಿಂದ ಉದ್ಘಾಟನೆ ಮಾಡಿಸಿದೆ. ಆಧುನಿಕ ತಂತ್ರಜ್ಞಾನಕ್ಕೆ ಪ್ರಾಚೀನ ಹಸ್ತಪ್ರತಿಗಳನ್ನು ಅಳವಡಿಸುವ ಕ್ರಮ ಸ್ವಾಗತಾರ್ಹವಾಗಿದ್ದು ಹಸ್ತಪ್ರತಿವುಳ್ಳವರೆಲ್ಲ ಈ ಬಗ್ಗೆ ಆಲೋಚಿಸುವ ಅಗತ್ಯವಿದೆ. ಇದೂ ಸಹ ಹಸ್ತಪ್ರತಿಯ ಆಧುನಿಕ ವಿಧಾನದ ಸಂರಕ್ಷಣೆ ಮತ್ತು ದಾಖಲೀಕರಣವಾಗಿದ್ದು ಪ್ರಸಾರವೂ ಆಗುತ್ತದೆ. ಇತ್ತ ಸರ್ಕಾರಗಳೂ ಗಮನ ಹರಿಸಿ ವಿಶೇಷ ಅನುದಾನ ಸಹಾಯಗಳನ್ನು ನೀಡಿ ನಾಡಿನ ಪ್ರಾಚೀನ ಸಂಸ್ಕೃತಿಯನ್ನು ಆಧುನಿಕ ತಂತ್ರಜ್ಞಾನದ ಮೂಲಕ ಉಳಿಸುವುದು ಉತ್ತಮ.

## ಸಮಗ್ರ ದಾಸ ಸಾಹಿತ್ಯ ಪ್ರಕಟಣೆ

ಕರ್ನಾಟಕ ಸರ್ಕಾರ ಕನ್ನಡ ಸಾಹಿತ್ಯ ಸಂಸ್ಕೃತಿಗೆ ನೀಡುತ್ತಿರುವ ಉತ್ತೇಜನ ಫಲಪ್ರದವಾದುದಾಗಿದೆ. ಕೆಂಗಲ್ ಹನುಮಂತಯ್ಯನವರ ಕಾಲದಿಂದಲೂ ಈ ಸಂಸ್ಕೃತಿ ಸರ್ಕಾರದಲ್ಲಿ ಬೆಳೆದು ಬಂದಿದೆ. ಕಳೆದ ವರ್ಷ ಸಮಗ್ರ ವಚನ ಸಾಹಿತ್ಯ ಸಂಪುಟಗಳನ್ನು ಬಿಡುಗಡೆ ಮಾಡಿ ಇತ್ತೀಚೆಗೆ ಅದರ ದ್ವಿತೀಯ ಪರಿಷ್ಕೃತ ಆವೃತ್ತಿಯನ್ನೂ ಹೊರತಂದಿರುವುದು ಹೆಮ್ಮೆಯ ಕೆಲಸವಾಗಿದೆ. ಇದೇ ರೀತಿ ಕಳೆದ ಎರಡು ವರ್ಷಗಳಿಂದ ಇನ್ನೊಂದು ಬೃಹತ್ ಯೋಜನೆಯಾಗಿ ಸಮಗ್ರ ದಾಸ ಸಾಹಿತ್ಯವನ್ನೂ ಪ್ರಕಟಿಸಲು ಮುಂದೆ ಬಂದಿರುವುದು ಕನ್ನಡ ಜನತೆಗೆ ನೀಡುತ್ತಿರುವ ಐತಿಹಾಸಿಕ ಕೊಡುಗೆಯಾಗಿದೆ. ಹಲವು ತಜ್ಞರ ಮಾರ್ಗದರ್ಶನದಲ್ಲಿ ಅನೇಕ ಜನ ವಿದ್ವಾಂಸರು ಸಾಕಷ್ಟು ಶ್ರಮ ವಹಿಸಿ, ಕ್ಷೇತ್ರಕಾರ್ಯನಡೆಸಿ 1900 ರ ವರೆಗಿನ ಎಲ್ಲ ಹರಿದಾಸರ ಹಾಡುಗಳನ್ನೂ ಪರಿಶೀಲಿಸಿಕೊಟ್ಟಿದ್ದು ಸು. 45 ಸಂಪುಟಗಳಲ್ಲಿ ಪ್ರತಿ ಸಂಪುಟದಲ್ಲಿ 500 ಕೀರ್ತನೆಗಳಂತೆ ಒಟ್ಟು 20,000ಕ್ಕೂ ಅಧಿಕ ಹಾಡುಗಳು ಪ್ರಕಟನೆಗೆ ಸಿದ್ಧವಾಗಿವೆ. ಇದರಲ್ಲಿ ಅರ್ಧದಷ್ಟು ಅಪ್ರಕಟಿತ ಹಾಡುಗಳಿವೆ. ದ್ವೈತ ತತ್ವದ ಕೀರ್ತನೆಗಳೊಂದಿಗೆ ಅದ್ವೈತ, ವಿಶಿಷ್ಟಾದ್ವೈತ ತತ್ವದ ಕೀರ್ತನೆಗಳೂ ಇವೆ. ಇಂತಹ ಮಹತ್ವದ, ಅಮೂಲ್ಯವಾದ ಕನ್ನಡ ಸಾಹಿತ್ಯಕ್ಕೆ ಹೊಸ ಆಕರವಾಗಬಲ್ಲ ಈ ಸಮಗ್ರ ಹರಿದಾಸ ಸಾಹಿತ್ಯ ಸಂಪುಟಗಳ ಪ್ರಕಟನೆಯ ಕಾರ್ಯವನ್ನು ಕನ್ನಡ ಸಂಸ್ಕೃತಿ ಇಲಾಖೆ ಆದಷ್ಟು ಶೀಘ್ರವಾಗಿ ಕೈಗೆತ್ತಿಕೊಳ್ಳಬೇಕಾಗಿದೆ. ಇತ್ತೀಚೆಗೆ ಈ ಬಗ್ಗೆ ಸಕ್ರಿಯ ಪ್ರಯತ್ನಗಳು ನಡೆಯುತ್ತಿರುವುದು ಸಂತೋಷದ ವಿಚಾರವಾಗಿದೆ. ಇಂಥದೊಂದು ಮೌಲಿಕ ಪುಸ್ತಕ ಪ್ರಕಟನೆಯನ್ನು ಮಾಡುತ್ತಿರುವುದಕ್ಕಾಗಿ ಸಮಸ್ತ ಕನ್ನಡಿಗರೂ ಅಭಿನಂದಿಸಬೇಕಾಗಿದೆ.

# ಅಭಿನಂದನೆ

**ಕಾವ್ಯಾನಂದ ಪ್ರಶಸ್ತಿ**

ಲೇಖಕಿಯರಾದ ಡಾ|| ಮಲ್ಲಿಕಾ ಘಂಟಿ ಮತ್ತು ಡಾ|| ಎಸ್.ವಿ. ಪ್ರಭಾವತಿಯವರಿಗೆ 2000ನೇ ಸಾಲಿನ ಕಾವ್ಯಾನಂದ ಪುರಸ್ಕಾರ ಲಭಿಸಿದೆ. ಡಾ|| ಮಲ್ಲಿಕಾ ಘಂಟಿಯವರ 'ತನುಕರಗದವರಲ್ಲಿ' ಹಾಗೂ ಡಾ|| ಪ್ರಭಾವತಿಯವರ 'ಸ್ತ್ರೀವಾದದ ಪ್ರಸ್ತುತತೆ' ಈ ಪ್ರಶಸ್ತಿಗೆ ಪಾತ್ರವಾಗಿರುವ ಕೃತಿಗಳು.

**ಅತ್ಯುತ್ತಮ ಪ್ರಕಾಶನ ಪ್ರಶಸ್ತಿ :**

ಕನ್ನಡ ಪುಸ್ತಕ ಪ್ರಾಧಿಕಾರ ಪ್ರತಿ ವರ್ಷವೂ ಕನ್ನಡ ನಾಡಿನ ಅತ್ಯುತ್ತಮ ಪ್ರಕಾಶಕರೊಬ್ಬರಿಗೆ ನೀಡುವ ಪ್ರಶಸ್ತಿಯನ್ನು ಬೆಂಗಳೂರಿನ ಸಪ್ನ ಬುಕ್ ಹೌಸ್‌ಗೆ ನೀಡಲಾಯಿತು. ಈ ಪ್ರಶಸ್ತಿಯು 25,000 ನಗದು ಮತ್ತು ಸ್ವರ್ಣಫಲಕವನ್ನೊಳಗೊಂಡಿರುತ್ತದೆ.

**ಡಾ|| ಶಂಬಾ ಜೋಶಿ ಪ್ರಶಸ್ತಿ :**

ಶಿವಮೊಗ್ಗದ ಕನ್ನಡ ಸಂಘವು ಖ್ಯಾತ ಸಂಶೋಧಕ ಡಾ|| ಶಂಬಾ ಜೋಶಿಯವರ ಹೆಸರಿನಲ್ಲಿ ನೀಡುವ ಈ ಪ್ರಶಸ್ತಿಯನ್ನು ಖ್ಯಾತ ಸಂಶೋಧಕ ಡಾ|| ಚಿದಾನಂದ ಮೂರ್ತಿಯವರಿಗೆ ನೀಡಲಾಯಿತು.

**ಪಂಪ ಪ್ರಶಸ್ತಿ :**

ಕನ್ನಡದ ಪ್ರತಿಷ್ಠಿತ 'ಪಂಪ ಪ್ರಶಸ್ತಿ' ಸೃಜನಶೀಲ ಕ್ಷೇತ್ರದಲ್ಲಿ ಶ್ರೀ ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರಿಗೆ ಲಭಿಸಿದೆ. (ಜನನ 8-9-1938 ಶಿವಮೊಗ್ಗ ಜಿಲ್ಲೆ ಕೊಪ್ಪಳಯಲ್ಲಿ) ಶ್ರೀ ತೇಜಸ್ವಿಯವರು ಕನ್ನಡನಾಡಿನ ಶ್ರೇಷ್ಠ ಬರಹಗಾರರು. ಇವರು ಜ್ಞಾನಪೀಠ ಪ್ರಶಸ್ತಿ ವಿಜೇತ, ಪದ್ಮಭೂಷಣ, ಕರ್ನಾಟಕ ರತ್ನ, ಡಾ|| ಕುವೆಂಪುರವರ ಪುತ್ರರು. ಶ್ರೀ ತೇಜಸ್ವಿ ಸೃಜನಶೀಲ ಹಾಗೂ ಸೃಜನೇತರ ಎರಡೂ ಕ್ಷೇತ್ರಗಳಲ್ಲಿ ಮಹತ್ವದ ಕೊಡುಗೆಗಳನ್ನು ನೀಡಿದ್ದಾರೆ. ಇವರ 'ಚಿದಂಬರ ರಹಸ್ಯ' ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭಿಸಿದೆ. ಜುಗಾರಿ ಕ್ರಾಸ್, ಕರ್ವಾಲೋ ಜನಪ್ರಿಯ ಕಾದಂಬರಿಗಳು. ಅಬಚೂರಿನ ಪೋಸ್ಟಾಫೀಸು, ತಬರನ ಕಥೆ ಮತ್ತು ಕುಬಿ ಮತ್ತು ಇಯಾಲ (ಸಣ್ಣ ಕಥೆ ಆಧಾರಿತ ಪ್ರಶಸ್ತಿ ವಿಜೇತ ಚಲನಚಿತ್ರಗಳು) ಪರಿಸರ ಮತ್ತು ವನ್ಯಜೀವಿಗಳ ಬಗ್ಗೆ ಇವರಿಗೆ ಅಪಾರ ಆಸಕ್ತಿ. ಪ್ರಮುಖ ಕೃತಿಗಳು : ಪರಿಸರದ ಕತೆ (ಕನ್ನಡ ಸಾಹಿತ್ಯ ಅಕಾಡೆಮಿಯ ಬಹುಮಾನ ಲಭಿಸಿದೆ) ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್, (ಪ್ರವಾಸ ಸಾಹಿತ್ಯ 1990ರ ಅಕಾಡೆಮಿ ಬಹುಮಾನ ಲಭಿಸಿದೆ) ವಿಸ್ಮಯ 2 (ವಿಜ್ಞಾನ ಸಾಹಿತ್ಯ) ಯವಳ ಪ್ರಶ್ನೆ (ನಾಟಕ) ಬೃಹನ್ನಳೆ, ಸೋಮುವಿನ ಸ್ವಗತ, ಲಹರಿ (ಕವನ ಸಂಕಲನಗಳು) ಒಟ್ಟು ಕೃತಿಗಳ ಸಂಖ್ಯೆ ಸುಮಾರು 35.

### ಕನ್ನಡ ಸಾಹಿತ್ಯ ಪರಿಷತ್ತಿಗೆ ಆಯ್ಕೆ

ಕನ್ನಡ ಸಾಹಿತ್ಯ ಪರಿಷತ್ತಿನ ನೂತನ ಅಧ್ಯಕ್ಷರಾಗಿ ಶ್ರೀ ಹರಿಕೃಷ್ಣ ಪುನರೂರು ಅವರು ಇತ್ತೀಚಿಗೆ ನಡೆದ ಚುನಾವಣೆಯಲ್ಲಿ ಮೂರು ವರ್ಷಗಳ ಅವಧಿಗೆ ಚುನಾಯಿತರಾಗಿದ್ದಾರೆ. ಇವರು ದಿನಾಂಕ 12-7-01 ರಂದು ಅಧಿಕಾರ ಸ್ವೀಕಾರ ಮಾಡಿದರು. ಶ್ರೀ ಪುಂಡರೀಕ ಹಾಲಂಬಿ ಮತ್ತು ಡಾ|| ಸಿ. ವೀರಣ್ಣ ರವರು ಗೌರವ ಕಾರ್ಯದರ್ಶಿಗಳಾಗಿ, ಡಾ|| ನಲ್ಲೂರು ಪ್ರಸಾದ್ ಅವರು ಗೌರವ ಕೋಶಾಧ್ಯಕ್ಷರಾಗಿ ನೇಮಕಗೊಂಡಿದ್ದಾರೆ.

### ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ

2001ನೇ ಸಾಲಿನ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪ್ರೊ. ಎಲ್.ಎಸ್. ಶೇಷಗಿರಿರಾವ್ ರವರು ರಚಿಸಿರುವ ಕೃತಿ 'ಇಂಗ್ಲೀಷ್ ಸಾಹಿತ್ಯ ಚರಿತ್ರೆ' ಗೆ ಲಭಿಸಿದೆ. (ಪ್ರೊ. ಶೇಷಗಿರಿರಾವ್ ರವರು ಜನಿಸಿದ್ದು ಬೆಂಗಳೂರಿನಲ್ಲಿ, ದಿನಾಂಕ 16-2-1925, ತಂದೆ ಸ್ವಾಮಿರಾವ್, ತಾಯಿ ಕಮಲಾಬಾಯಿ) ಬಹುಮುಖ ಪ್ರತಿಭೆಯ ಶ್ರೀಯುತರು ಇಂಗ್ಲೀಷ್ ಪ್ರಾಧ್ಯಾಪಕರಾದರೂ ಕನ್ನಡದ ಎಲ್ಲಾ ಕ್ಷೇತ್ರಗಳಲ್ಲೂ ಅಮೂಲ್ಯ ಕೊಡುಗೆಗಳನ್ನು ನೀಡಿ ಸಾಹಿತ್ಯ ಕ್ಷೇತ್ರವನ್ನು ಸಂಪನ್ನಗೊಳಿಸಿದ್ದಾರೆ. ಇಂಗ್ಲೀಷ್‌ನಲ್ಲೂ ಕೃತಿಗಳನ್ನು ರಚಿಸಿದ್ದಾರೆ. ಕಥೆ, ಕಾದಂಬರಿ, ಪ್ರಬಂಧ, ಶಿಶು ಸಾಹಿತ್ಯ ರಚನೆ, ಗ್ರಂಥ ಸಂಪಾದನೆ ಮುಂತಾದ ವಿಭಾಗಗಳಲ್ಲಿ ಅಮೂಲ್ಯ ಕೃತಿಗಳನ್ನು ರಚಿಸಿದ್ದರೂ ಇವರ ವಿಮರ್ಶಾ ಕ್ಷೇತ್ರದ ಕೊಡುಗೆ ಅನನ್ಯವಾದುದು. ಇವರಿಗೆ ರಾಜ್ಯ ಸಾಹಿತ್ಯ ಅಕಾಡಮಿಯ ಬಹುಮಾನ, ರಾಜ್ಯೋತ್ಸವ ಪ್ರಶಸ್ತಿಗಳು ಲಭಿಸಿವೆ.

ಮುಖ್ಯ ಕೃತಿಗಳು ಮುಯ್ಯಿ, ಇದು ಜೀವನ, ಜಗದ ಜಾತ್ರೆಯಲ್ಲಿ, ಮುಂತಾದ 4 ಕಥಾಸಂಕಲನಗಳು, ಕಾದಂಬರಿ: 'ಸಾಮಾನ್ಯ ಮನುಷ್ಯ', ಇಂಗ್ಲಿಷ್ ಭಾಷೆಯಲ್ಲಿ ಆಧುನಿಕ ಸಾಹಿತ್ಯ ವಿಮರ್ಶೆ, ಗ್ರೀಕ್ ರಂಗಭೂಮಿ ಮತ್ತು ನಾಟಕ, ಪಾಶ್ಚಾತ್ಯ ಮತ್ತು ಭಾರತೀಯ ಮಹಾಕಾವ್ಯ, ಪಾಶ್ಚಾತ್ಯ ಸಾಹಿತ್ಯ ಲೋಕದಲ್ಲಿ, ಪಾಶ್ಚಾತ್ಯ ಮತ್ತು ಭಾರತೀಯ ಮಹಾಕಾವ್ಯ ಮುಂತಾದವು. ಎಂ. ವಿಶ್ವೇಶರಯ್ಯ, ರೆಡ್ ಕ್ರಾಸಿನ ಕಥೆ, ಬೆಳಕಿನ ದೂತರು (ಶಿಶು ಸಾಹಿತ್ಯ) ಇಂಗ್ಲಿಷಿನಲ್ಲೂ ಕೃತಿಗಳನ್ನು ರಚಿಸಿದ್ದಾರೆ.

### ಕನ್ನಡಶ್ರೀ ಪ್ರಶಸ್ತಿ :

ಶ್ರೀನಿವಾಸರಾವ್ ಮಂಗಳವೇಢೆ ಸ್ಮಾರಕ ಪ್ರತಿಷ್ಠಾನ ನೀಡುವ 'ಕನ್ನಡಶ್ರೀ' ಪ್ರಶಸ್ತಿಯನ್ನು 2001ನೇ ವರ್ಷಕ್ಕೆ ಖ್ಯಾತ ಸ್ವಾತಂತ್ರ್ಯ ಯೋಧರೂ, ಕರ್ನಾಟಕ ಏಕೀಕರಣ ವಾದಿಗಳೂ ಹಿರಿಯ ಗಾಂಧೀವಾದಿಗಳೂ ಆಗಿರುವ ಶ್ರೀ ಹೆಚ್. ಎಸ್. ದೊರೆಸ್ವಾಮಿ ಅವರಿಗೆ ನೀಡಲಾಗಿದೆ. ಶ್ರೀಯುತರು ಅನೇಕ ಸಂಘ ಸಂಸ್ಥೆಗಳಲ್ಲಿ ಸಕ್ರಿಯರಾಗಿದ್ದು ಪ್ರತಿಷ್ಠಾನದ ಕಟ್ಟಡ ಸಮಿತಿ ಸದಸ್ಯರೂ ಆಗಿದ್ದಾರೆ.

**ಸತ್ಯಕಾಮ ಪ್ರಶಸ್ತಿ :**

ಪ್ರಸಿದ್ಧ ಕಾದಂಬರಿಕಾರರಾಗಿದ್ದ ದಿ|| ಸತ್ಯಕಾಮರ ಸ್ಮರಣೆಯಲ್ಲಿ ನೀಡಲು ಆರಂಭಿಸಿರುವ 'ಸತ್ಯಕಾಮ ಸಾಹಿತ್ಯ ಪ್ರಶಸ್ತಿ' ಈ ಬಾರಿ ಖ್ಯಾತ ಲೇಖಕಿ ವೈದೇಹಿ ಅವರ 'ಅಮ್ಮಚ್ಚಿ ಎಂಬ ನೆನಪು' ಎಂಬ ಕಥಾಸಂಕಲನಕ್ಕೆ ನೀಡಲಾಗಿದೆ. ಈ ಪ್ರಶಸ್ತಿಯ ಮೊತ್ತ 10.000 ರೂ. ಗಳು.

**ಕಾಳಿದಾಸ ಸಮ್ಮಾನ್ ಪ್ರಶಸ್ತಿ :**

ಮಧ್ಯಪ್ರದೇಶ ಸರ್ಕಾರ ನೀಡುವ ರಾಷ್ಟ್ರಮಟ್ಟದ ಈ ಪ್ರಶಸ್ತಿಗೆ ಖ್ಯಾತ ರಂಗಕರ್ಮಿ ಕೆ.ವಿ. ಸುಬ್ಬಣ್ಣ, 2001-02ನೇ ಸಾಲಿಗೆ ಆಯ್ಕೆಯಾಗಿದ್ದಾರೆ. ಇವರು 1.50 ಲಕ್ಷ ರೂ. ಗಳ ಮೊತ್ತದ ಈ ಪ್ರತಿಷ್ಠಿತ ಪ್ರಶಸ್ತಿಯನ್ನು ಪಡೆಯುತ್ತಿರುವ ಎರಡನೆಯ ಕನ್ನಡಿಗರಾಗಿದ್ದಾರೆ.

**ಇಂದಿರಾಗಾಂಧಿ ರಾಷ್ಟ್ರೀಯ ಏಕತಾ ಪ್ರಶಸ್ತಿ :**

ರಾಷ್ಟ್ರ ಮಟ್ಟದಲ್ಲಿ ನೀಡುವ ಈ ಪ್ರತಿಷ್ಠಿತ ಪ್ರಶಸ್ತಿಯನ್ನು ಕನ್ನಡಿಗ ಹೆಚ್. ವೈ. ಶಾರದಾಪ್ರಸಾದ್ ಅವರು 2000ನೇ ಸಾಲಿಗಾಗಿ ಪಡೆದಿದ್ದಾರೆ. 1.50 ಲಕ್ಷ ರೂ.ಗಳ ಮೊತ್ತದ ಈ ಪ್ರಶಸ್ತಿ ಇಂದಿರಾಗಾಂಧಿ, ರಾಜೀವಗಾಂಧಿಯವರ ಆಪ್ತವಲಯದಲ್ಲಿದ್ದ ಶ್ರೀ ಶಾರದಾಪ್ರಸಾದ ಅವರಿಗೆ ಸಂದಿರುವುದು ಕರ್ನಾಟಕಕ್ಕೆ ಹೆಮ್ಮೆಯ ಸಂಗತಿಯಾಗಿದೆ.

**ಪರಮಾನಂದ ಪ್ರಶಸ್ತಿ :**

ಪಡುಕೋಣೆ ರಮಾನಂದರಾವ್ ಅವರ ಸ್ಮರಣಾರ್ಥ ನೀಡುವ ಪರಮಾನಂದ ಪ್ರಶಸ್ತಿ 5000.00 ರೂ.ಗಳ ಮೌಲ್ಯದ್ದಾಗಿದ್ದು 2001ನೇ ಸಾಲಿಗೆ ಖ್ಯಾತ ಲೇಖಕಿ ಶ್ರೀಮತಿ ಟಿ. ಲಲಿತಾಂಬ ಚಂದ್ರಶೇಖರ್ ಅವರಿಗೆ ಲಭಿಸಿದೆ.

**ಕುವೆಂಪು ಪ್ರಶಸ್ತಿ :**

ಕುವೆಂಪು ಕಲಾ ನಿಕೇತನ ಆರಂಭಿಸಿರುವ 'ವಿಶ್ವಮಾನವ ರಾಷ್ಟ್ರಕವಿ ಕುವೆಂಪು ಪ್ರಶಸ್ತಿ' ಯನ್ನು 2001ನೇ ಸಾಲಿಗೆ ಖ್ಯಾತ ಸಾಹಿತಿ, ಮಾಜಿ ಉಪಕುಲಪತಿ ಡಾ|| ದೇ. ಜವರೇಗೌಡ ಅವರಿಗೆ ನೀಡಲಾಗಿದೆ. 25 ಸಾವಿರಗಳ ಮೌಲ್ಯದೊಂದಿಗೆ ಬೆಳ್ಳಿ ಪದಕ ಹಾಗೂ ಪ್ರಶಸ್ತಿ ಫಲಕವನ್ನು ಈ ಪ್ರಶಸ್ತಿ ಒಳಗೊಂಡಿರುತ್ತದೆ.

**ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ**

2001ನೇ ಸಾಲಿನ ರಾಜ್ಯ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿಯು ಡಾ|| ರಾಜಶೇಖರ್ ನೀರಮಾನ್ವಿ, ಶ್ರೀ ರಂ.ಶಾ. ಲೋಕಾಪುರ, ಶ್ರೀಮತಿ ಆರ್ಯಾಂಬ ಪಟ್ಟಾಭಿ, ಡಾ|| ಮ.ನ. ಜವರಯ್ಯ, ಡಾ. ಡಿ.ಎನ್. ಶಂಕರಭಟ್ ಅವರಿಗೆ ಲಭಿಸಿದೆ.

## ಸರ್ಕಾರದ ದಾನಚಿಂತಾಮಣಿ ಅತ್ತಿಮಬ್ಬೆ ಮತ್ತು ಇತರ ಪ್ರಶಸ್ತಿಗಳು

ಖ್ಯಾತ ಲೇಖಕಿ ಶ್ರೀಮತಿ ಸಾ.ರಾ. ಅಬೂಬಕರ್ ಅವರಿಗೆ 2001ನೇ ಸಾಲಿನ 'ದಾನಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ' ಲಭಿಸಿದೆ. ಶ್ರೀ ಎಂ. ಪ್ರಭಾಕರ್ ಅವರಿಗೆ 'ಶಿಶುನಾಳ ಪ್ರಶಸ್ತಿ', ಶ್ರೀಮತಿ ಆರ್. ನಾಗರತ್ನಮ್ಮ ಅವರಿಗೆ 'ಗುಬ್ಬಿ ವೀರಣ್ಣ ಪ್ರಶಸ್ತಿ', ಶ್ರೀಮತಿ ನರ್ಮದಾ ಅವರಿಗೆ 'ಶಾಂತಲಾ ನಾಟ್ಯ ಪ್ರಶಸ್ತಿ', ಎಸ್.ಎಸ್. ಮಸೂರಿಯವರಿಗೆ ವರ್ಣಶಿಲ್ಪಿ 'ವೆಂಕಟಪ್ಪ ಪ್ರಶಸ್ತಿ', ಶ್ರೀ ಧನಂಜಯ ರವರಿಗೆ 'ಜಕಣಾಚಾರಿ ಪ್ರಶಸ್ತಿ' ಲಭಿಸಿರುತ್ತದೆ.

### ಪತ್ರಿಕೋದ್ಯಮ ಪ್ರಶಸ್ತಿ :

ಶ್ರೀ ಎಂ. ಟಿ. ಜಯಣ್ಣರವರಿಗೆ 'ಅಭಿವೃದ್ಧಿ ಪತ್ರಿಕೋದ್ಯಮ ಪ್ರಶಸ್ತಿ' ಮತ್ತು 50,000 ನಗದು ಬಹುಮಾನವನ್ನು, ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯ ಪ್ರಧಾನ ವರದಿಗಾರ ಶ್ರೀ ಶ್ರೀನಿವಾಸ ಸಿರನೂರಕರ್ ಮತ್ತು ಜನಮಿತ್ರ ಪತ್ರಿಕೆಯ ಸಂಪಾದಕ ಎಸ್. ಗಿರಿಜಾ ಶಂಕರ್ ರವರಿಗೆ 'ಪರಿಸರ ಪತ್ರಿಕೋದ್ಯಮ ಪ್ರಶಸ್ತಿ' ಮತ್ತು 25,000 ರೂಗಳನ್ನು, ಶ್ರೀ ಇ.ಆರ್. ಸೇತೂರಾಂ ಅವರಿಗೆ 'ಟೀಯೆಸ್ಸಾರ್ ಸ್ಮಾರಕ ಪತ್ರಿಕೋದ್ಯಮ ಪ್ರಶಸ್ತಿ' ಯನ್ನು ನೀಡಲಾಗಿದೆ.

### ಚಾವುಂಡರಾಯ ಪ್ರಶಸ್ತಿ

ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕನ್ನಡ ಮತ್ತು ಜೈನಶಾಸ್ತ್ರ ಪ್ರಾಧ್ಯಾಪಕರಾಗಿ ಸೇವೆಸಲ್ಲಿಸಿ ನಿವೃತ್ತರಾದ ಬೆಳಗಾವಿ ಜಿಲ್ಲೆಯ ಶೇಡಬಾಳದ ಡಾ|| ಎಸ್. ಪಿ ಪಾಟೀಲ ಅವರಿಗೆ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಈ ವರ್ಷದ 'ಚಾವುಂಡರಾಯ ಪ್ರಶಸ್ತಿ'ಯನ್ನು ಪ್ರಕಟಿಸಿದೆ. 'ಜೈನಸಾಹಿತ್ಯ ಸಂಸ್ಕೃತಿ' 'ಜೈನಸಂಸ್ಕೃತಿಯ ಹಬ್ಬಗಳು' 'ಸಿದ್ಧಶೇಷೆ' 'ರಾಷ್ಟ್ರೀಯ ಭಾವೈಕ್ಯ : ಜೈನಧರ್ಮ ಹಾಗೂ ಕರ್ನಾಟಕ ಮತ್ತು ಮರಾಠಿ ಸಾಹಿತ್ಯ, 'ಹೆಣ್ಣು', 'ಅತಿಥಿ' ಮಹಿಳೆಯರ ಕೆಲವು ಮರಾಠಿ ಕಥೆಗಳು - ಅನುವಾದಿತ ಕೃತಿಗಳು ಮೊದಲಾಗಿ ಸುಮಾರು ನಲವತ್ತು ಕೃತಿಗಳನ್ನು ರಚಿಸಿದ್ದಾರೆ. 'ಚಾವುಂಡರಾಯ ಪುರಾಣ : ಒಂದು ಅಧ್ಯಯನ' ಅವರ ಪಿ.ಎಚ್.ಡಿ. ಮಹಾಪ್ರಬಂಧ ಶ್ರವಣಬೆಳಗೊಳ ಶ್ರೀಕ್ಷೇತ್ರದ ಪರಮಪೂಜ್ಯ ಜಗದ್ಗುರು, ಕರ್ಮಯೋಗಿ ಸ್ವಸ್ತಿಶ್ರೀ ಚಾರುಕೀರ್ತಿಸ್ವಾಮೀಜಿ ಅವರು ಕನ್ನಡಸಾಹಿತ್ಯ ಪರಿಷತ್ತಿಗೆ ನೀಡಿದ ರೂ. 2 ಲಕ್ಷ ದತ್ತಿಯ ಮೂಲಕ ಪ್ರತಿವರ್ಷ ಕನ್ನಡ ಜೈನ ಸಾಹಿತ್ಯಕ್ಕೆ ವಿಶೇಷ ಕಾಣಿಕೆಯನ್ನು ಸಲ್ಲಿಸಿದ ವಿದ್ವಾಂಸರಿಗೆ ಪ್ರಶಸ್ತಿ ಪತ್ರ, ರೂ. 20,000ಗಳ ಪುರಸ್ಕಾರ ನೀಡಿ ಗೌರವಿಸಲಾಗುವುದು.

ಈ ಎಲ್ಲಾ ಮಹನೀಯರುಗಳಿಗೆ ಪ್ರತಿಷ್ಠಾನ ಮತ್ತು ಲೋಚನ ತನ್ನ ಹೃತ್ಪೂರ್ವಕ ಅಭಿನಂದನೆ ಸಲ್ಲಿಸುತ್ತವೆ.

## 'ಪುತಿನ' ಪುರಸ್ಕಾರ

ಪುತಿನ ಪ್ರತಿಷ್ಠಾನ ನೀಡುವ ಪ್ರತಿಷ್ಠಿತ 'ಪುತಿನ' ಪುರಸ್ಕಾರಕ್ಕೆ 2000ನೇ ಸಾಲಿಗೆ ರಂಗಮಂಚದ ನಿರ್ದೇಶಕರೂ, ಪ್ರಸಿದ್ಧ ನಾಟಕಕಾರರೂ ಆದ ಪ್ರಸನ್ನ ಅವರ 'ಹದ್ದು ಮೀರಿದ ಹಾದಿ' ನಾಟಕ ಆಯ್ಕೆಯಾಗಿದೆ. ಕಳೆದ ಮೂರು ವರ್ಷಗಳಿಂದ ಕಾವ್ಯಕೃತಿಗಳನ್ನು ಆಯ್ಕೆ ಮಾಡಿದ್ದ ಸಮಿತಿ ಈ ಬಾರಿ ನಾಟಕ ಕೃತಿಯನ್ನೂ ಆಯ್ಕೆ ಮಾಡಿದೆ. ಪುರಸ್ಕಾರ ಹತ್ತುಸಾವಿರ ರೂ. ಗಳ ನಗದು ಹಾಗೂ ನೆನಪಿನ ಕಾಣಿಕೆಯನ್ನೂ ಒಳಗೊಂಡಿದೆ.

## ಚಿದಾನಂದ ಪ್ರಶಸ್ತಿ :

ಖ್ಯಾತ ಸಂಶೋಧಕ ಡಾ. ಎಂ. ಚಿದಾನಂದ ಮೂರ್ತಿಯವರ ಹೆಸರಿನಲ್ಲಿ ನೀಡುವ ಸಂಶೋಧನ ಕ್ಷೇತ್ರದ ಈ ಪ್ರತಿಷ್ಠಿತ ಪ್ರಶಸ್ತಿಯು ಈ ಬಾರಿ ಪ್ರಸಿದ್ಧ ಸಂಶೋಧಕರೂ, ಕನ್ನಡ ವಿಶ್ವವಿದ್ಯಾಲಯದ ಮಾಜಿ ಕುಲಪತಿಗಳೂ, ಪಂಪ ಪ್ರಶಸ್ತಿ ಪುರಸ್ಕೃತರೂ ಆದ ಡಾ. ಎಂ.ಎಂ. ಕಲಬುರ್ಗಿ ಅವರಿಗೆ ಸಂದಿದೆ.

## ರನ್ನ ಸಾಹಿತ್ಯ ಮತ್ತು ಅತ್ತಿಮಬ್ಬೆ ಪ್ರಶಸ್ತಿಗಳು :

ಅತ್ತಿಮಬ್ಬೆ ಪ್ರತಿಷ್ಠಾನ ನೀಡುವ ಈ ಎರಡೂ ಪ್ರಶಸ್ತಿಗಳನ್ನೂ 2000ನೇ ಸಾಲಿನಲ್ಲಿ ಕ್ರಮವಾಗಿ ಡಾ|| ಎಂ.ಎ. ಜಯಚಂದ್ರ ಹಾಗೂ ರಾಜಶೇಖರ್ ಅವರು ಪಡೆದಿದ್ದಾರೆ. ಪ್ರತಿವರ್ಷ ಪ್ರತಿಷ್ಠಾನದ ಸಂಸ್ಥಾಪಕ ನಿರ್ದೇಶಕರೂ, ಧರ್ಮದರ್ಶಿಗಳೂ ಆದ ಶ್ರೀಮತಿ ಪಿ. ಮನೋಹರಿ ಪಾರ್ಥಸಾರಥಿ ಅವರು ತಮ್ಮ ತಂದೆ ತಾಯಿಯವರಾದ ಬಿ.ಎಲ್. ಕೃಷ್ಣೋಜಿರಾವ್ ಮತ್ತು ಬಿ.ಕೆ. ರಾಧಾಬಾಯಿ ಅವರ ಸ್ಮರಣಾರ್ಥವಾಗಿ ಈ ಪ್ರಶಸ್ತಿಗಳನ್ನು ನೀಡುತ್ತಾ ಬಂದಿದ್ದಾರೆ. ರನ್ನ ಸಾಹಿತ್ಯ ಪ್ರಶಸ್ತಿಯನ್ನು ಗಣ್ಯ ಸಾಹಿತಿಗಳಿಗೂ ಅತ್ತಿಮಬ್ಬೆ ಪ್ರಶಸ್ತಿಯನ್ನು ಗಣ್ಯ ಮಹಿಳೆಯರಿಗೂ ನೀಡಲಾಗುತ್ತದೆ.

## ಡಿ.ವಿ.ಜಿ. ಪ್ರಶಸ್ತಿ :

ಕನ್ನಡ ಧೀಮಂತ ಲೇಖಕರಾಗಿದ್ದ ಪದ್ಮಭೂಷಣ ಡಾ. ಡಿ.ವಿ. ಗುಂಡಪ್ಪನವರ ಸ್ಮರಣಾರ್ಥ ಸ್ಥಾಪಿತವಾಗಿರುವ ಡಿ.ವಿ.ಜಿ. ವೇದಿಕೆ, ಡಿ.ವಿ.ಜಿ. ಪ್ರಶಸ್ತಿಯನ್ನು 2001ನೇ ಸಾಲಿಗೆ ಡಾ|| ಎಚ್.ಎಸ್. ಲಕ್ಷ್ಮೀನಾರಾಯಣ ಭಟ್ಟರಿಗೆ ನೀಡಿ ಗೌರವಿಸಿದೆ. ನಗರದ ವಿ.ವಿ. ಪುರಂ ವಿಜ್ಞಾನ ಕಾಲೇಜಿನಲ್ಲಿ ವಿಜ್ಞಾನ ಪ್ರಾಧ್ಯಾಪಕರಾಗಿರುವ ಭಟ್ಟರು ಡಿ.ವಿ.ಜಿ.ಯವರ ಮಂಕುತಿಮ್ಮನ ಕಗ್ಗವನ್ನು ನಿರರ್ಗಳವಾಗಿ ಹೇಳುವ ಪ್ರಸಿದ್ಧ ವಾಗ್ಮಿಗಳಾಗಿದ್ದಾರೆ. ನಾಡಿನಾದ್ಯಂತ ಸಾವಿರಕ್ಕೂ ಅಧಿಕ ಕಗ್ಗದ ವಾಚನ - ವ್ಯಾಖ್ಯಾನ ಕಾರ್ಯಕ್ರಮಗಳನ್ನೂ ನೀಡಿದ್ದಾರೆ.

## ಗೌ|| ಫೆಲೋಷಿಪ್ :

ವಾದಿರಾಜ ಸ್ತುತಿ ಮತ್ತು ಚೇತನ ಟ್ರಸ್ಟ್ ಜಂಟಿಯಾಗಿ ನೀಡುವ ಗೌ|| ಫೆಲೋಷಿಪ್ ಅನ್ನು ಪ್ರಸಿದ್ಧ ವಿಮರ್ಶಕರೂ, ಸಾಹಿತಿಗಳೂ ಆದ ಪ್ರೊ. ಎಂ.ಎಚ್. ಕೃಷ್ಣಯ್ಯ ಅವರಿಗೆ

ನೀಡಿ ಗೌರವಿಸಲಾಗಿದೆ. ಪ್ರೊ. ಎಂ.ಎಚ್.ಕೃ. ಅವರು ಸಾಹಿತ್ಯ, ಚಿತ್ರಕಲೆ, ಶಿಲ್ಪಕಲೆಗಳಲ್ಲಿ ನುರಿತ ವಿಮರ್ಶಕರಾಗಿದ್ದು ಅನೇಕ ಮೌಲಿಕ ಗ್ರಂಥಗಳನ್ನು ರಚಿಸಿದ್ದಾರೆ.

**ಅನಕೃ ನಿರ್ಮಾಣ್ ಪ್ರಶಸ್ತಿ :**

ಪ್ರಸಿದ್ಧ ಕವಿ ಕೆ.ಎಸ್. ನಿಸಾರ್ ಅಹಮದ್ ಅವರಿಗೆ ಅನಕೃ ಪ್ರತಿಷ್ಠಾನ ಮತ್ತು ನಿರ್ಮಾಣ್ ಷೆಲ್ಟರ್ಸ್ ಸಂಸ್ಥೆಗಳು ಜಂಟಿಯಾಗಿ ಆಯೋಜಿಸಿರುವ ಅನಕೃ ನಿರ್ಮಾಣ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

**ಪ್ರತಿಭಾ ಚಿಣ್ಣಪ್ಪ :**

ಪ್ರಸಿದ್ಧ ಇತಿಹಾಸ ತಜ್ಞೆ ಡಾ. ಪ್ರತಿಭಾ ಚಿಣ್ಣಪ್ಪ ಅವರ ಇತಿಹಾಸ ಸಂಶೋಧನೆ ಮತ್ತು ಸೇವೆಯನ್ನು ಗೌರವಿಸಿ ಅಭಿರುಚಿ ಅಡ್ವೆಂಚರ್ಸ್ ಕ್ಲಬ್ ವತಿಯಿಂದ 25-4-02 ರಂದು ಜಯಚಾಮರಾಜೇಂದ್ರ ಸಂಸ್ಕೃತ ಮಹಾವಿದ್ಯಾಲಯದಲ್ಲಿ ಅಭಿಮಾನಿಗಳ ಸಮ್ಮುಖದಲ್ಲಿ ಡಾ. ಎಚ್. ವಿ. ಶ್ರೀನಿವಾಸ ರಾವ್ ಮತ್ತು ಡಾ. ಸೂರ್ಯನಾಥ್ ಕಾಮತ್ ಅವರು ಸನ್ಮಾನಿಸಿದರು. ಕ್ಲಬ್ ಡಾ. ಶ್ಯಾಮಲ ರತ್ನಕುಮಾರಿ ಕಾರ್ಯಕ್ರಮ ವ್ಯವಸ್ಥೆ ಮಾಡಿದ್ದರು.

**ಗೌರವ ಡಾಕ್ಟರೇಟ್ :**

ಇನ್‌ಫೋಸೀಸ್ ಫೌಂಡೇಷನ್ನಿನ ಧರ್ಮದರ್ಶಿ ಸುಧಾಮೂರ್ತಿಯವರಿಗೆ ಗುಲಬರ್ಗ ವಿಶ್ವವಿದ್ಯಾಲಯ ಈ ಬಾರಿಯ ಗೌರವ ಡಾಕ್ಟರೇಟ್ ಪದವಿಯನ್ನು ನೀಡಿ ಗೌರವಿಸಿದೆ. ಈಚಿನ ದಶಕದಲ್ಲಿ ಬೆಂಗಳೂರಿನಲ್ಲಿ ಕಂಪ್ಯೂಟರ್ ಕ್ರಾಂತಿಯನ್ನು ಮಾಡಿ ವಿಶ್ವ ಮಟ್ಟದಲ್ಲಿ ಕರ್ನಾಟಕವನ್ನು ಎತ್ತಿ ಹಿಡಿದ ವಿಶ್ವ ಸಾಫ್ಟ್‌ವೇರ್ ಸಾಮ್ರಾಜ್ಯದ ಆಧಿಪತಿಯಾದ ಕನ್ನಡಿಗ ನಾರಾಯಣ ಮೂರ್ತಿಯವರ ಧರ್ಮಪತ್ನಿಯವರಾದ ಸುಧಾಮೂರ್ತಿ ತಾವೂ ಪತಿಯೊಂದಿಗೆ ಸೇರಿ ಇನ್‌ಫೋಸೀಸ್ ಫೌಂಡೇಷನ್ ಸ್ಥಾಪಿಸಿ ಕರ್ನಾಟಕಕ್ಕೆ ಅನೇಕ ರೀತಿಯ ನೆರವನ್ನು ನೀಡಿ ಕೀರ್ತಿವಂತರಾಗಿದ್ದಾರೆ. ದಾನ-ದತ್ತಿ-ಸಹಕಾರ ಪ್ರಾಯೋಜನೆ ಮತ್ತು ಯೋಜನೆಗಳಿಂದ ಕರ್ನಾಟಕದಾದ್ಯಂತ ಸಾಫ್ಟ್‌ವೇರ್ ತಂತ್ರಜ್ಞಾನವನ್ನು ಬಿತ್ತಿ ಬೆಳೆಯಲು ನೆರವಾಗಿದ್ದಾರೆ. ಇವರನ್ನು ಪ್ರತಿಷ್ಠಾನ ಅಭಿನಂದಿಸುತ್ತದೆ.

**ಕಾದಂಬರಿಗೆ ಮಾಸ್ತಿ ಪ್ರಶಸ್ತಿ :**

ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಪ್ರಶಸ್ತಿ ಸಮಿತಿ ಕೊಡ ಮಾಡುವ ಮಾಸ್ತಿ ಪ್ರಶಸ್ತಿಗಾಗಿ ನಡೆಸುವ ಸ್ಪರ್ಧೆಯಲ್ಲಿ 2001ನೇ ಸಾಲಿಗೆ ಕಾದಂಬರಿಯನ್ನು ಗೊತ್ತು ಮಾಡಿದ್ದು ಡಾ. ಜಾನಕಿ

ಸುಂದರೇಶನ್ ಅವರ 'ಗೌರಿ' ಕಾದಂಬರಿ ಪ್ರಥಮ ಸ್ಥಾನವನ್ನು ಪಡೆದಿದೆ. ಡಾ. ನಾ. ಮೊಗಸಾಲೆ ಅವರ 'ಅರ್ಥ'ಕ್ಕೆ ದ್ವಿತೀಯ ಹಾಗೂ ದಮಯಂತಿ ನರೇಗಲ್ಲ ಅವರ 'ಯಯಾತಿ ಪ್ರಸಂಗ' ಕ್ಕೆ ತೃತೀಯ ಬಹುಮಾನಗಳು ಬಂದಿವೆ.

**ಜಿ.ಎಸ್.ಎಸ್. ಪ್ರಶಸ್ತಿ :**

ಡಾ. ಜಿ.ಎಸ್. ಶಿವರುದ್ರಪ್ಪ ವಿಶ್ವಸ್ತ ಮಂಡಳಿ ನೀಡುವ ಜಿ.ಎಸ್.ಎಸ್. ಪ್ರಶಸ್ತಿಯನ್ನು ಕನ್ನಡದ ಶ್ರೇಷ್ಠ ವಿಮರ್ಶಕರೂ ಬೆಂ.ವಿ.ವಿ. ಕನ್ನಡ ಅಧ್ಯಯನ ಕೇಂದ್ರದ ಕನ್ನಡ ಪ್ರಾಧ್ಯಾಪಕರೂ ಆದ ಡಾ. ಬಸವರಾಜ ಕಲ್ಗುಡಿ ಅವರಿಗೆ ನೀಡಲಾಗಿದೆ. ಅವರ 'ನಕ್ಷೆ -ನಕ್ಷತ್ರ' ವಿಮರ್ಶಾ ಕೃತಿ ಈ ಪ್ರಶಸ್ತಿಗೆ ಆಯ್ಕೆಯಾಗಿದೆ.

## ಸನ್ಮಾನಗಳು

ಖ್ಯಾತ ರಂಗಕರ್ಮಿ ಬಿ.ವಿ. ಕಾರಂತರಿಗೆ ಕೇಂದ್ರ ಸಂಗೀತ ನಾಟಕ ಅಕಾಡೆಮಿ ಗೌರವ ಫೆಲೋಷಿಪ್ ನೀಡಿದ ಸಂದರ್ಭದಲ್ಲಿ ಅವರಿಗೆ ಅಭಿಮಾನಿಗಳು ನಗರದಲ್ಲಿ ಈಚೆಗೆ ಹೃದಯಸ್ಪರ್ಶಿ ಸನ್ಮಾನವನ್ನು ಮಾಡಿದರು. 1,11,111 ರೂ.ಗಳ ಗೌರವ ಕಾಣಿಕೆಯೊಂದಿಗೆ ಆತ್ಮೀಯವಾಗಿ ಅಭಿನಂದಿಸಲಾಯಿತು. ಹಲವು ಗಣ್ಯರು ಕಾರಂತರ ನಾಟಕ ಕಲಾ ಸೇವೆಯನ್ನು ಪ್ರಶಂಸಿದರು. ಜಿ.ವಿ. ಅಯ್ಯರ್, ಡಾ. ವಿಜಯಾ, ಟಿ.ಎಸ್. ನಾಗಾಭರಣ, ಬಿ.ಎಲ್. ಶಂಕರ್, ಮುಂತಾದ ಗಣ್ಯರು ವೇದಿಕೆಯಲ್ಲಿ ಉಪಸ್ಥಿತರಿದ್ದರು.

**ರತ್ನಮಾಲಾಪ್ರಕಾಶ್ - ಮಾಲತಿಶರ್ಮ** : ಈ ಇಬ್ಬರು ಖ್ಯಾತ ಸುಗಮ ಸಂಗೀತ ಕಲಾವಿದರ ಭಾವಗೀತೆಗಳ ಗಾಯನದ ಬೆಳ್ಳಿಹಬ್ಬವನ್ನು 'ಭಾವವೈಭವ' ಹೆಸರಿನಲ್ಲಿ ಅಭಿಮಾನಿಗಳು 1-3-02 ರಂದು ಕಲಾಕ್ಷೇತ್ರದಲ್ಲಿ ವಿಶಿಷ್ಟ ರೀತಿಯಲ್ಲಿ ಆಚರಿಸಿದರು. ನಿರಾಂತಕವಾಗಿ ಇಪ್ಪತ್ತೈದು ವರ್ಷಗಳಿಂದಲೂ ಭಾವಗೀತೆಗಳನ್ನು ಹಾಡುತ್ತ ಜನಪ್ರಿಯಗೊಳಿಸುತ್ತ ಕನ್ನಡ ಸುಗಮ ಸಂಗೀತ ಕ್ಷೇತ್ರವನ್ನು ಗಟ್ಟಿಗೊಳಿಸಿದ ಈ ಇಬ್ಬರು ಅತ್ತಿಗೆ ನಾದಿನಿಯರ ಸೇವೆ, ಶ್ರಮ, ಅನನ್ಯವಾದದ್ದೆಂದು ಸಭೆ ಒಕ್ಕೊರಲಿನಿಂದ ಅಭಿನಂದಿಸಿತು. ಎಲ್ಲ ಖ್ಯಾತನಾಮರನ್ನು ಕಲೆ ಹಾಕಿದ್ದ ಈ ವಿಶೇಷ ಸಮಾರಂಭದಲ್ಲಿ ಎ.ಎನ್. ಮೂರ್ತಿರಾವ್, ಕೆ.ಎಸ್. ನರಸಿಂಹಸ್ವಾಮಿ, ಆರ್.ಕೆ. ಶ್ರೀಕಂಠನ್, ಜಿ.ಎಸ್. ಶಿವರುದ್ರಪ್ಪ, ಸಿ. ಅಶ್ವತ್ ಮುಂತಾದವರನ್ನು ಈ ಇಬ್ಬರು ಸನ್ಮಾನಿಸಿದರೆ, ಈ ಇಬ್ಬರನ್ನು ಸಂಸ್ಕೃತಿ ಸಚಿವೆ ರಾಣಿ ಸತೀಶ್ ಅಭಿನಂದಿಸಿದರು. ಇದೇ ಸಂದರ್ಭದಲ್ಲಿ ಸುಗಮ ಸಂಗೀತವನ್ನು ಪೋಷಿಸಲು ಈ ಇಬ್ಬರೂ ಕೂಡಿ 'ರಮಾ ಪ್ರತಿಷ್ಠಾನ' ಎಂಬ ಸಂಸ್ಥೆಯನ್ನು ಹುಟ್ಟು ಹಾಕಿದರು. ಇದರ ಪ್ರಥಮ ಕಾರ್ಯಕ್ರಮವಾಗಿ ರಾಜು ಅನಂತಸ್ವಾಮಿ ನೇತೃತ್ವದಲ್ಲಿ ಇಪ್ಪತ್ತಕ್ಕೂ ಹೆಚ್ಚು ಮಂದಿ ಗಾನಕೂಗಿಲೆಗಳಿಂದ 'ಕಾವ್ಯಧ್ವನಿ' ಕಾರ್ಯಕ್ರಮವೂ ನಡೆಯಿತು.

# ಶ್ರದ್ಧಾಂಜಲಿ

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ ಮತ್ತು ಕರ್ನಾಟಕಲೋಚನ, ಇತ್ತೀಚೆಗೆ ನಿಧನರಾದ ಈ ಕೆಳಕಂಡ ಸಾಹಿತಿಗಳ ಮರಣಕ್ಕೆ ಅಪಾರ ದುಃಖವನ್ನು ವ್ಯಕ್ತಪಡಿಸುತ್ತಾ ಅವರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸುತ್ತವೆ. ಅವರುಗಳ ದಿವ್ಯ ಆತ್ಮಕ್ಕೆ ಚಿರಶಾಂತಿ ದೊರೆಯಲಿ, ಅವರ ಕುಟುಂಬವರ್ಗ ಹಾಗೂ ಬಂಧು-ಮಿತ್ರರಿಗೆ ಈ ದುಃಖವನ್ನು ಸಹಿಸುವ ಶಕ್ತಿಯನ್ನು ಭಗವಂತನು ದಯಪಾಲಿಸಲಿ ಎಂದು ಆಶಿಸುತ್ತವೆ.

**೧. ವೆಂಕಟೇಶ ಸಾಂಗಲಿ :**

ಕನ್ನಡದ ಗಣ್ಯ ಬರಹಗಾರರೂ, ಕನ್ನಡದ ಸೇವಕರೂ ಆಗಿದ್ದ ಶ್ರೀಯುತರು ದಿನಾಂಕ 9-12-2001 ರಂದು ನಿಧನರಾದರು. ಶ್ರೀಯುತರು ಅಂಚೆ ಇಲಾಖೆಯಲ್ಲಿ ಉನ್ನತ ಹುದ್ದೆಯಲ್ಲಿದ್ದುಕೊಂಡೇ ಕನ್ನಡ ಸಾಹಿತ್ಯ ಕೈಂಕರ್ಯವನ್ನು ಶ್ರದ್ಧಾಪೂರ್ವಕವಾಗಿ ಮಾಡಿರುತ್ತಾರೆ. ಕೆಲಕಾಲ ಇವರು ಕ.ಸಾ. ಪರಿಷತ್ತಿನ ಗೌರವ ಕಾರ್ಯದರ್ಶಿಯಾಗಿ ಸ್ಮರಣೀಯ ಸೇವೆ ಸಲ್ಲಿಸಿರುತ್ತಾರೆ. ಗ್ರಂಥಕರ್ತರ ಚರಿತ್ರಕೋಶ, ನಮ್ಮ ಪರಿಷತ್ತು, ದೇಶ-ವಿದೇಶಗಳಲ್ಲಿ ಕನ್ನಡ ಸಂಘಸಂಸ್ಥೆಗಳು ಮುಂತಾದ ಪುಸ್ತಕಗಳು ಅವರು ಸಾಹಿತ್ಯ ಕ್ಷೇತ್ರಕ್ಕೆ ನೀಡಿರುವ ಉತ್ತಮ ಕಾಣಿಕೆಗಳು.

**೨. ಮಹಾದೇವ ಬಣಕಾರ : (ಜನನ: ೩-೧೦-೧೯೩೨)**

ಕನ್ನಡ ಪರ ಸದಾ ಹೋರಾಟ ನಡೆಸುತ್ತಿದ್ದ ಕನ್ನಡದ ಕಟ್ಟಾಳು, ಸೃಜನಶೀಲ ಸಾಹಿತಿ, ಕವಿ, ಪತ್ರಕರ್ತ, ನಾಟಕಕಾರ ಹಾಗೂ ಕತೆಗಾರರಾದ ಬಣಕಾರರರು ೧೭-೧೧-೨೦೦೧ ಮರಣ ಹೊಂದಿದರು. ಅವರ 'ಮರುಳ ಸಿದ್ದಯ್ಯನ ಜೀವನ ಚರಿತ್ರೆ' ಹಾಗೂ 'ಬಣಕಾರರ ವಚನಗಳು' ಸಾರಸ್ವತ ಲೋಕದಲ್ಲಿ ಗಣ್ಯ ಸ್ಥಾನ ಪಡೆದಿವೆ. ಅವರ ಇತರ ಪ್ರಮುಖ ಕೃತಿಗಳು: ಆಂಗ್ಲರ ಆಡಳಿತದಲ್ಲಿ ಕನ್ನಡ (ಸಂಶೋಧನೆ) ಕರ್ನಾಟಕ ಸಮಗ್ರತೆ, ಕರ್ನಾಟಕ- ಮಹಾರಾಷ್ಟ್ರ, ಬೆಳಗಾವಿ- ಮಹಾರಾಷ್ಟ್ರಕ್ಕೆ (ವಿಶೇಷ ಕೃತಿಗಳು), ಕಾವ್ಯೋದಯ, ಬಣ್ಣದ ಕಾರಂಜಿ, ಅಪರಂಜಿ, (ಕವನ ಸಂಗ್ರಹಗಳು), ಕಲ್ಯಾಣ ಕ್ರಾಂತಿ, ದುಡ್ಡೇದೇವರು, ಸುಖಬೇಡಿದ ಸತಿ, ಗರತಿಯ ಗೋಳು (ನಾಟಕಗಳು)

**೩. ಎಚ್. ಕೆ. ವಿಜಯನಾರಸಿಂಹ : (ಜನನ: ೧೬-೧-೧೯೨೭)**

ನಾಡಿನ ಶ್ರೇಷ್ಠ ಚಲನಚಿತ್ರ ಸಾಹಿತಿಯಾಗಿದ್ದ ಶ್ರೀಯುತರು ಕನ್ನಡ ರಾಜ್ಯೋತ್ಸವದ ಹಿಂದಿನ ದಿನ ೩೦-೧೦-೨೦೦೧ರಂದು ಮರಣ ಹೊಂದಿದರು. ಶ್ರೀಯುತರು ಒಂದು ಸಾವಿರಕ್ಕೂ ಹೆಚ್ಚು ಚಿತ್ರಗೀತೆಗಳನ್ನು, ಹಾಡುಗಳನ್ನು ರಚಿಸಿದ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಅನೇಕ ಜನಪ್ರಿಯ ಚಲನಚಿತ್ರಗಳಿಗೆ ಸಂಭಾಷಣೆಯನ್ನೂ ರಚಿಸಿದ್ದಾರೆ. (ಗೆಜ್ಜೆಪೂಜೆ, ಎಡಕಲ್ಲು

ಗುಡ್ಡದ ಮೇಲೆ, ಶರಪಂಜರ, ಮಾನಸ ಸರೋವರ, ಪಂಚಮವೇದ ಮುಂತಾದವುಗಳು) ಇವರು ರಚಿಸಿರುವ ಮುಖ್ಯ ಕೃತಿಗಳು: ಒಲವಿನ ಬಲಿ, ಸ್ವಪ್ನಫಲ, ಬದುಕಿನ ಬೈರಾಗಿ, ತಬ್ಬಲಿ, ಭಾಗ್ಯರೇಖೆ ಮುಂತಾದ ಹದಿನೈದು ಕೃತಿಗಳು.

**೪. ನೆಲಮನೆ ದೇವೇಗೌಡ : (ಜನನ: ೧೨-೬-೧೯೪೯)**

೨೮-೭-೨೦೦೧ರಂದು ನಿಧನರಾದ ಮಂಡ್ಯ ಜಿಲ್ಲೆಯ ನೆಲಮನೆಯ ದೇವೆಗೌಡರು ಪ್ರಾಧ್ಯಾಪಕರಾಗಿ, ಸಾಹಿತಿಯಾಗಿ, ಪ್ರಕಾಶಕರಾಗಿ ಸಾರಸ್ವತ ಲೋಕಕ್ಕೆ ಅನುಪಮ ಸೇವೆ ಸಲ್ಲಿಸಿದ್ದಾರೆ. ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾಗಿ (1995-1998) ಪುಸ್ತಕೋದ್ಯಮದ ಪ್ರಗತಿಗೆ ಬಹುವಾಗಿ ಶ್ರಮಿಸಿದ್ದು 'ಮಾನಸ' ಪತ್ರಿಕೆಯನ್ನು ಕೆಲಕಾಲ ನಡೆಸಿದ್ದರು. 'ಪಲ್ಲವಿ' ಎಂಬ ಚಲನಚಿತ್ರ ಸಹ ನಿರ್ಮಿಸಿದ್ದರು.

**೫.ವಡ್ಡರ್ಸೆ ರಘುರಾಮ ಶೆಟ್ಟಿ : (ಜನನ: ೧೯೩೦)**

೮-೮-೨೦೦೧ರಂದು ನಿಧನರಾದ ವಿ. ರಘುರಾಮ ಭಟ್ಟರು ಪತ್ರಿಕಾ ಕ್ಷೇತ್ರದಲ್ಲಿ ಹೆಸರಿಸಬಹುದಾದ ವ್ಯಕ್ತಿಯಾಗಿ ಪ್ರತಿಷ್ಠಿತ ಟೀಯೆಸ್ಸಾರ್ ಪ್ರಶಸ್ತಿ ವಿಜೇತರಾಗಿದ್ದರು. ಬೆಂಗಳೂರು ವಿಶ್ವವಿದ್ಯಾನಿಲಯದ ಸೆನೆಟ್ ಸದಸ್ಯರಾಗಿ, ಕರ್ನಾಟಕ ಪತ್ರಕರ್ತರ ಸಂಘದ ಅಧ್ಯಕ್ಷರಾಗಿ ಅನುಪಮ ಸೇವೆ ಸಲ್ಲಿಸಿದ್ದಾರೆ. ಇವರು ದುಡಿದಿರುವ ಪತ್ರಿಕೆಗಳು - ನವಭಾರತ, ತಾಯಿನಾಡು, ವಿಶ್ವವಾಣಿ, ಡೆಕ್ಕನ್ ಹೆರಾಲ್ಡ್, ಪ್ರಜಾವಾಣಿ, ಮಲೆನಾಡು ಮುಂತಾದವುಗಳು.

**೬.ಅ. ರಾ. ಚಂದ್ರಹಾಸ ಗುಪ್ತ :**

ಕನ್ನಡ ಮತ್ತು ಸಂಸ್ಕೃತಿ ಇಲಾಖಾ ಕಾರ್ಯದರ್ಶಿಗಳಾಗಿದ್ದ 60 ವರ್ಷಗಳ ಶ್ರೀಯುತರು ದಿನಾಂಕ 16-12-01 ರಂದು ನಿಧನರಾದರು. ಮಂಡ್ಯ ಹಾಗೂ ಚಿಕ್ಕಮಗಳೂರು ಇಲಾಖೆಯ ಜಿಲ್ಲಾಧಿಕಾರಿಯಾಗಿ ಸೇವೆ ಸಲ್ಲಿಸಿದ್ದ ಶ್ರೀ ಗುಪ್ತ ಅವರು ವಾರ್ತಾ ಇಲಾಖೆ ಹಾಗೂ ಕನ್ನಡ ಸಂಸ್ಕೃತಿ ನಿರ್ದೇಶನಾಲಯಗಳಲ್ಲಿ ನಿರ್ದೇಶಕರಾಗಿ ಸೇವೆ ಸಲ್ಲಿಸುತ್ತಿದ್ದರು. ಕೆಲಕಾಲ ಕನ್ನಡ ಸಾಹಿತ್ಯ ಪರಿಷತ್ತಿನ ಆಡಳಿತಾಧಿಕಾರಿಯಾಗಿ ವಿವಿಧ ಜಿಲ್ಲಾ ಪಂಚಾಯ್ತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿ ಯಶಸ್ವಿಯಾಗಿ ಕಾರ್ಯನಿರ್ವಹಿಸಿ ಜನಮೆಚ್ಚಿಗೆ ಗಳಿಸಿದ್ದರು. ಉತ್ತಮ ಆಡಳಿತರಾಗರಾಗಿದ್ದರು.

**೭.ಎಸ್. ಚಂದ್ರಶೇಖರಯ್ಯ :**

ಬೆಳ್ಳೂರಿನ ಬಿ.ಎಂ. ಶ್ರೀ ಶತಮಾನಭವನದ ನಿವೇಶನದ ದಾನಿಗಳೂ ಬಿ. ಎಂ. ಶ್ರೀ ಬಂಧುಗಳೂ ಆಗಿದ್ದ ಗುಂಡಣ್ಣ ಎಂದೇ ಪ್ರಚಲಿತರಾಗಿದ್ದ ಬೆಳ್ಳೂರಿನ ಶ್ರೀ ಚಂದ್ರಶೇಖರಯ್ಯನವರು 24-6-2001 ರಂದು ನಿಧನರಾದರು. ಬೆಳ್ಳೂರಿನ ಬಿ. ಎಂ. ಶ್ರೀ ಶತಮಾನೋತ್ಸವ ಸಂಘಟನೆಯಿಂದಲೂ ಹಿತೈಷಿಗಳಾಗಿ ಸ್ಮಾರಕ ನಿರ್ಮಾಣಕ್ಕೂ ಸಹಕರಿಸಿ

ಭವನದ ಕಾರ್ಯಕ್ರಮಗಳ ಅತಿಥಿಗಳಿಗೆಲ್ಲಾ ಆದರದಿಂದ ಸತ್ಕಾರ ನೀಡುತ್ತಿದ್ದ ಶ್ರೀಯುತರ ಹೆಸರು ಬೆಳ್ಳೂರು ಭವನದಲ್ಲಿ ಶಾಶ್ವತವಾಗಿ ಉಳಿದಿರುತ್ತದೆ.

### ೮. ಎನ್. ಎಸ್. ವೆಂಕಟಸುಬ್ಬರಾವ್

'ಕೌಂಡಿನ್ಯ' ಕಾವ್ಯನಾಮದಿಂದ ಪ್ರಸಿದ್ಧರಾಗಿದ್ದ ಸಾಹಿತಿಗಳಾದ ವೆಂಕಟಸುಬ್ಬರಾವ್ ಅವರು 6-1-02 ರಂದು ದೈವಾಧೀನರಾದರು. ಜಬಾಲ, ತಾಯಿ ಮಕ್ಕಳು, ದುರಾಗ್ರಹಿ, ಅಗ್ನಿ ಪರೀಕ್ಷೆ ಮುಂತಾದ ನಾಟಕಗಳನ್ನೂ ಬಾಳು ಎಂಬ ಕಥಾಸಂಕಲನವನ್ನು ಬರೆದಿರುವ ದಿವಂಗತರು ಹೆಚ್ಚು ಪ್ರಚಾರಕ್ಕೆ ಬಾರದೆ ಎಲೆ ಮರೆಯ ಕಾಯಿಯಂತೆ ಸಾಹಿತ್ಯ ಸೇವೆಯಲ್ಲಿ ತಲ್ಲೀನರಾಗಿದ್ದರು. ಇವರು ಬಾಳು ಮತ್ತು ಜಬಾಲ ಕೃತಿಗಳ ನೂರಕ್ಕೂ ಹೆಚ್ಚು ಪ್ರತಿಗಳನ್ನು ಪ್ರತಿಷ್ಠಾನಕ್ಕೆ ದಾನವಾಗಿ ನೀಡಿ ಅದರ ಮಾರಾಟದ ಹಣವನ್ನು ಕಟ್ಟಡನಿಧಿಗೆ ಬಳಸಿಕೊಳ್ಳಲು ಇತ್ತೀಚೆಗಷ್ಟೆ ತಿಳಿಸಿದ್ದರು.

### ೯. ಡಾ. ಕೃಷ್ಣಾನಂದ ಕಾಮತ್ :

ಪ್ರಸಿದ್ಧ ಛಾಯಾಚಿತ್ರಕಾರರೂ ಜನಪ್ರಿಯ ಲೇಖಕರೂ ಆಗಿದ್ದ ಡಾ. ಕೃಷ್ಣಾನಂದ ಕಾಮತ್ ಅವರು 20-2-2002 ರಂದು ತಮ್ಮ 67ನೇ ವಯಸ್ಸಿನಲ್ಲಿ ನಿಧನರಾದರು. " ನಾನು ಅಮೇರಿಕಾಗೆ ಹೋಗಿದ್ದೆ", "ವಂಗದರ್ಶನ", "ಪ್ರಾಣಿಪರಿಸರ", "ಪ್ರೇಯಸಿಗೆ ಪತ್ರಗಳು", "ಪ್ರವಾಸಿಯ ಪ್ರಬಂಧಗಳು" ಮುಂತಾದ ಇಪ್ಪತ್ತಕ್ಕೂ ಹೆಚ್ಚು ಗ್ರಂಥಗಳನ್ನು ಬರೆದು ಜನಪ್ರಿಯರಾಗಿದ್ದ ಕಾಮತರು ಪ್ರಸಿದ್ಧ ಛಾಯಾಚಿತ್ರಗಾರರೂ ಆಗಿದ್ದರು. ಕರ್ನಾಟಕಕ್ಕೆ ಗೆಜಿಟಿಯರ್ ಮುಂತಾದ ಅನೇಕ ಗ್ರಂಥಗಳಿಗೆ ಛಾಯಾಚಿತ್ರಗಳನ್ನು ನೀಡಿದ್ದು ವಿಭಿನ್ನ ದೃಷ್ಟಿಕೋನದ ಸಾವಿರಾರು ಛಾಯಚಿತ್ರಗಳು ಇವರ ವೆಬ್‌ಸೈಟ್ ನಲ್ಲಿದ್ದು ವಿಶ್ವಕ್ಕೆ ಕನ್ನಡ ಇತಿಹಾಸ ಸಂಸ್ಕೃತಿಯ ಪರಿಚಯ ಮಾಡಿಕೊಟ್ಟಿದ್ದಾರೆ. ಆಕಾಶವಾಣಿಯ ನಿವೃತ್ತ ನಿರ್ದೇಶಕರೂ, ಪ್ರಸಿದ್ಧ ಲೇಖಕರೂ ಆದ ಡಾ. ಜ್ಯೋತ್ಸ್ನಾ ಕಾಮತ್ ಅವರ ಪತಿಯಾದ ಕೃಷ್ಣಾನಂದ ಕಾಮತರದು ಸ್ನೇಹಶೀಲ ವ್ಯಕ್ತಿತ್ವವಾಗಿತ್ತು. ಎಲ್ಲರೊಂದಿಗೆ ಬೆರೆಯುತ್ತಿದ್ದ ಕಾಮತರಲ್ಲಿ ಕನಸಿನಲ್ಲಿ ಹಲವಾರು ಮಹತ್ವದ ಯೋಜನೆಗಳಿದ್ದವು. ಪ್ರತಿಷ್ಠಾನದ ಹಿತೈಷಿಗಳಾಗಿದ್ದ ಡಾ. ಕಾಮತರು ಮಣೆಹಕ್ಕೆ ತಮ್ಮ ಮೌಲಿಕ ಛಾಯಾಚಿತ್ರಗಳನ್ನು ನೀಡಿದ್ದರು.

# ಲೇಖಕರ ವಿಳಾಸಗಳು

1. ಪ್ರೊ. ಗರ್ಗೇಶ್ವರಿ ವೆಂಕಟಸುಬ್ಬಯ್ಯ
ನಂ. 20, "ಗಣೇಶಧಾಮ"
2ನೇ ಅಡ್ಡರಸ್ತೆ, 9ನೇ ಮುಖ್ಯರಸ್ತೆ,
ರಾಜಮಹಲ್ ವಿಲಾಸ್ ಬಡಾವಣೆ,
ಬೆಂಗಳೂರು - 560 080

2. ಎಂ.ಆರ್. ಅನಂತರಾಮಯ್ಯ
14, ಇಂಚರ, 1ನೇ 'ಡಿ' ಮುಖ್ಯರಸ್ತೆ,
ಗಿರಿನಗರ 2ನೇ ಹಂತ,
ಬೆಂಗಳೂರು - 560 085

3. ವಿದ್ವಾನ್ ತಲೆಂಗಳ ರಾಮಕೃಷ್ಣ ಭಟ್ಟ
ಅಂಚೆ ಬಾಯೂರು - 671 348
ವಯಾ ಪೈವಳಿಕೆ
ಕಾಸರಗೋಡು ಜಿಲ್ಲೆ

4. ವಿದ್ವಾನ್ ಟಿ. ಕೇಶವ ಭಟ್
754, 15ನೇ ಮುಖ್ಯರಸ್ತೆ,
2ನೇ ಹಂತ ಬನಶಂಕರಿ,
ಬೆಂಗಳೂರು - 560 070

5. ಕೌಲಗಿ ಶೇಷಾಚಾರ್
'ಅಪರ್ಣಾ' 5-1, ಸೀತಾವಿಲಾಸ ರಸ್ತೆ,
ಮರಿಮಲ್ಲಪ್ಪ ಜೂನಿಯರ್ ಕಾಲೇಜು,
ಎದುರುಗಡೆ
ಮೈಸೂರು - 570 024

6. ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ
68-ಬಿ, ಆಶ್ರಮದ ರಸ್ತೆ,
ಜಯಲಕ್ಷ್ಮೀಪುರ,
ಮೈಸೂರು - 570 012

7. ಮಾವಳ್ಳಿ ಜಿ. ರಾಮು
ನಂ. 33, ಕೆಂಪಣ್ಣ ರಸ್ತೆ,
ದೊಡ್ಡ ಮಾವಳ್ಳಿ,
ಬೆಂಗಳೂರು - 560 004

8. ಪ್ರೊ. ನಾ. ಗೀತಾಚಾರ್ಯ
ನಂ. 1, 5ನೇ ಕ್ರಾಸ್,
ಕೆಂಪೇಗೌಡನಗರ,
ಬೆಂಗಳೂರು - 560 019

9. ಶ್ರೀಮತಿ ಎಸ್.ಕೆ. ಲಕ್ಷ್ಮೀ
ನಂ. 151, 'ದೇವವೃಂದ',
ಶಾರದಾ ಕಾಲೋನಿ, 3ನೇ ಸ್ಟೇಜ್,
4ನೇ ಬ್ಲಾಕ್, ಬಸವೇಶ್ವರನಗರ,
ಬೆಂಗಳೂರು - 560 079

10. ಡಾ. ನ. ಸುಬ್ರಹ್ಮಣ್ಯಂ
274/ಡಿ, 37ನೇ ಕ್ರಾಸ್,
8ನೇ ಬ್ಲಾಕ್, ಜಯನಗರ,
ಬೆಂಗಳೂರು - 560 082

11. ಪ್ರೊ. ಜಿ. ಅಶ್ವತ್ಥನಾರಾಯಣ
ನಂ. 95, 34 'ಬಿ' ಕ್ರಾಸ್,
16ನೇ ಮುಖ್ಯರಸ್ತೆ, 4ನೇ 'ಟಿ' ಬ್ಲಾಕ್
ಜಯನಗರ, ಬೆಂಗಳೂರು - 560 04

## ಪ್ರತಿಷ್ಠಾನದ ಗೌರವ ಸದಸ್ಯರು



## ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಕಳಿಸಬೇಕು

ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ. ಆದರೆ, ಕಳಿಸಿದರೆ ವೈಶಿಷ್ಟ್ಯವುಳ್ಳ ಅಂಥ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ ಮಾಡಿಸಲಾಗುವುದು.

## ವಿನಿಮಯ ಪತ್ರಿಕೆಗಳು

1) ಪ್ರಬುದ್ಧ ಕರ್ಣಾಟಕ, ಮಾನವಿಕ ಕರ್ಣಾಟಕ, ವಿಜ್ಞಾನ ಕರ್ಣಾಟಕ, ಮೈಸೂರು. 2) ಸಾಧನೆ, ಬೆಂಗಳೂರು 3) ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಬೆಂಗಳೂರು 4) ಮಿಥಿಕ್ ಸೊಸೈಟಿ ಜರ್ನಲ್ 5) ಬಸವ ಪಥ, ಬೆಂಗಳೂರು 6) ಶಂಕರ ಭಾಸ್ಕರ, ಬೆಂಗಳೂರು 7) ಧರ್ಮಪ್ರಭ, ಬೆಂಗಳೂರು 8) ಜಾನಪದ ಜಗತ್ತು, ಬೆಂಗಳೂರು 9) ಅನ್ವೇಷಣೆ, ಬೆಂಗಳೂರು 10) ಅಪರಂಜಿ, ಬೆಂಗಳೂರು 11) ಕರ್ನಾಟಕ ಭಾರತಿ, ಧಾರವಾಡ 12) ಸುಗುಣಮಾಲಾ, ಉಡುಪಿ 13) ಸತ್ಯಶುದ್ಧ ಕಾಯಕ, ಚಿತ್ರದುರ್ಗ, 14) ತರಳಬಾಳು, ಸಿರಿಗೆರೆ, 15) ಅಭಿಮತ, ದೆಹಲಿ.

## ಕರ್ನಾಟಕ ಲೋಚನ ಚಂದಾ ವಿವರ

| | | |
|---|---|---|
| ವಾರ್ಷಿಕ ಚಂದಾ | : | ವ್ಯಕ್ತಿಗಳಿಗೆ ರೂ. 15-00 |
| | | ಗ್ರಂಥಾಲಯ, ಸಂಘ ಸಂಸ್ಥೆಗಳಿಗೆ ರೂ. 25-00 |
| ಆಜೀವ | : | ರೂ. 150-00 |
| | | ಬಿಡಿ ಪ್ರತಿ ರೂ. 10-00 |
| | | ಪ್ರತಿಷ್ಠಾನದ ಸದಸ್ಯರಿಗೆ ಲೋಚನ ಉಚಿತ |
| ಪ್ರತಿಷ್ಠಾನದ ಸದಸ್ಯತ್ವ | : | ವಾರ್ಷಿಕ ರೂ. 25-00 ಆಜೀವ ರೂ. 250-00 |


KARNATAKA LOCHANA - Half Yearly Journal
Published by B.M. Sri Smaraka Prathishthana, N.R. Colony, Bangalore - 560 019.
Printed by : Prathibha Printers, Bangalore - 560 019. Ph. : 6692113

"ಸೇಡಿಯಾಪು ಕೃಷ್ಣಭಟ್ಟರು ಪಂಡಿತರಲ್ಲಿ ಅನರ್ಘರತ್ನ. ದಕ್ಷಿಣ ಕನ್ನಡ ಜಿಲ್ಲೆಯ ಉದ್ದಾಮ ಸಾಹಿತಿಗಳಲ್ಲಿ ಪ್ರಮುಖರು"

**ಡಾ|| ಟಿ. ವಿ. ವೆಂಕಟಾಚಲ ಶಾಸ್ತ್ರೀ**

❁ ❁ ❁

"ಉತ್ತಮ ಶಿಕ್ಷಣ ಸಂಸ್ಥೆಗಳೇ ಆಧುನಿಕ ದೇವಾಲಯಗಳು"

**ಪ್ರೊ. ಎಂ.ಆರ್. ದೊರೆಸ್ವಾಮಿ**

ಸ್ಥಾಪಕ ಕಾರ್ಯದರ್ಶಿ - ಪಿ.ಇ.ಎಸ್. ಶಿಕ್ಷಣ ಸಂಸ್ಥೆಗಳು

❁ ❁ ❁

"ಬಿ.ಎಂ.ಶ್ರೀ. ಪ್ರತಿಷ್ಠಾನ ನಾಡಿನ ಪ್ರಾಚೀನ ಸಂಸ್ಕೃತಿಯ ಸಮರ್ಥವಾಹಕವಾಗಿದೆ. ವಿಶಿಷ್ಟ ರೀತಿಯಲ್ಲಿ ಸಂಸ್ಕೃತಿಯನ್ನು ಸಂರಕ್ಷಿಸುತ್ತಿರುವ ವಿಶೇಷ ಸೇವಾ ಸಂಸ್ಥೆಯಾಗಿದೆ".

**ಎ.ಎಚ್. ರಾಮಾರಾವ್**

ಖ್ಯಾತ ಶಿಕ್ಷಣ ತಜ್ಞರು

❁ ❁ ❁

"ನೃತ್ಯದಲ್ಲಿ ರಾಗ ಪ್ರವೇಶ ಮಾಡುವ ಯುವ ಪ್ರತಿಭೆಗಳಿಗೆ ಮತ್ತು ಯಾವುದೇ ಯುವ ಕಾರ್ಯಕ್ರಮಕ್ಕೆ ನಯನ ರಂಗಮಂದಿರವನ್ನು ಉಚಿತವಾಗಿ ನೀಡಲು ಸರ್ಕಾರ ತೀರ್ಮಾನಿಸಿದೆ".

**ಶ್ರೀಮತಿ ರಾಣಿ ಸತೀಶ್**

ಸಚಿವರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ



ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ